






# ನಭಾ ಕ್ಯಾನ್‌ವಾಸ್

೧೪ ವರ್ಷದ ನಭಾ ವಕ್ಕುಂದ, ಧಾರವಾಡದ ಪುಟ್ಟ ಕಲಾವಿದೆ. ನಭಾಳ ಕ್ಯಾನ್‌ವಾಸ್‌ನಲ್ಲಿ ಅವಳ ಕಲ್ಪನೆಯ ಬಣ್ಣಗಳು ಚಿತ್ರಗಳಾಗಿ ಅರಳಿವೆ. ಚಿತ್ರಕಲೆಯಲ್ಲದೆ ಕಥೆ, ಕವನ ಬರೆಯುವ, ನೃತ್ಯ ಮಾಡುವ ಹವ್ಯಾಸ ನಭಾಳಿಗಿದೆ. ಗುಬ್ಬಚ್ಚಿಗೂಡು, ಪ್ರಜಾವಾಣಿ, ಕನ್ನಡಪ್ರಭ, ವಿಜಯವಾಣಿ, ವಿಜಯ ಕರ್ನಾಟಕ, ಉದಯವಾಣಿ ಹೀಗೆ ಹಲವಾರು ಪತ್ರಿಕೆಗಳಲ್ಲಿ ನಭಾ ರಚಿಸಿದ ಚಿತ್ರಗಳು ಪ್ರಕಟವಾಗಿವೆ. ಮಕ್ಕಳಿಗಾಗಿ ನಡೆಸಿದ ಕೆಲವು ರಾಜ್ಯ ಮಟ್ಟದ ಚಿತ್ರಕಲಾ ಸ್ಪರ್ಧೆಯಲ್ಲಿ ಪ್ರಥಮ ಬಹುಮಾನ ಪಡೆದಿದ್ದಾಳೆ. ಬಹುಮುಖಿ ಪ್ರತಿಭೆಯ ನಭಾ ಸದ್ಯ ಧಾರವಾಡದ ಪ್ರೆಸೆಂಟೇಶನ್ ಪ್ರೌಢಶಾಲೆಯಲ್ಲಿ ೯ನೇ ತರಗತಿಯ ವಿದ್ಯಾರ್ಥಿನಿ. ಮಕ್ಕಳ ದಿನಾಚರಣೆಯ ಈ ಸಂದರ್ಭದಲ್ಲಿ ನಭಾಳ ಕಲಾಕೃತಿಗಳು ಇಲ್ಲಿವೆ.








## ಶ್ರಮವೇ ಜ್ಞಾನದ ಮೂಲ

ನಾನು ಮುಂಜಾನೆ ವಾಕಿಂಗ್ ಮಾಡುವಾಗ ಈ ಹುಡುಗನನ್ನು ನೋಡಿ ಮಾತನಾಡಿಸಿದೆ, ಆಲೋಚನಾಮಗ್ನನಾದೆ.
ಕಾರಣ ಶ್ರಮಜೀವಿ ಸಮಾಜದಿಂದ ಬಂದಂತಹ ಈ ಹುಡುಗ ಪೆಟ್ಟಿಗೆಯಲ್ಲಿ ಚಿಕ್ಕ ಕೋಳಿ ಮರಿಗಳನ್ನು ತೆಗೆದುಕೊಂಡು ಬಂದು ಮರದಡಿಯಲ್ಲಿ ಬಿದ್ದ ಎಲೆಗಳ ಕೆಳಗೆ ಇರುವ ಗೆದ್ದಲುಹುಳು ಮತ್ತು ಎರೆಹುಳುಗಳನ್ನು ಕೋಳಿ ಮರಿಗಳಿಗೆ ತಿನ್ನಿಸುತ್ತಿದ್ದನು. ಇದರಿಂದ ಈ ಹುಡುಗನಿಗಿರುವ ಪ್ರಾಕೃತಿಕ ಜ್ಞಾನದ ಅರಿವಾಗುತ್ತದೆ. ಇಂತಹ ಹುಡುಗರು ತಮಗರಿವಿಲ್ಲದಂತೆಯೇ ಸಮಾಜದಲ್ಲಿ ಉತ್ಪತ್ತಿಯ ಸಾಧನವಾಗುತ್ತಾರೆ. ಅಂತಹವರಿಂದಲೇ ಮುಂದೆ ಸಮಾಜದ ಅವಶ್ಯಕತೆಗಳ ಪೂರೈಕೆಯಾಗುತ್ತದೆ.

– ಪ್ರೊ|| ಎ. ಎಚ್. ರಾಜಾಸಾಬ್, ಕುಲಪತಿಗಳು, ತುಮಕೂರು ವಿಶ್ವವಿದ್ಯಾಲಯ

# ಹೊಸತು

ನೆಮ್ಮದಿಯ ನಾಳೆ ನಮ್ಮದು








**ಚಿತ್ರಗಳು :** ವಿ. ಗೋಪಾಲ್, ಗೋಪಿ, ಶ್ರೀಹರಿ, ತನು, ಷಣ್ಮುಖ
ಕಮಲಂ ಅರಸು, ಜಿಎಂಬೊ

**ಮುಖಪುಟ :** ಮಕ್ಕಳ ದಿನಾಚರಣೆಯ ಅಂಗವಾಗಿ 'ಹೊಸತು' ಚಿತ್ರ

**ವಿನ್ಯಾಸ :** ನವಕರ್ನಾಟಕ ವಿನ್ಯಾಸ

**ಕಚೇರಿ ಸಹಕಾರ :** ಜಿ. ವಿ. ತೇಜೋವತಿ


## ಈ ತಿಂಗಳು

ರಾಜಮಹೇಂದ್ರಿಯ ಬಳಿ ಶುಭ ಮುಹೂರ್ತದಲ್ಲಿ ಗೋದಾವರಿ ಸ್ನಾನ ಮಾಡಲು ಹೋಗಿದ್ದವರಲ್ಲಿ ಸುಮಾರು ೮೦ ಜನ ಕಾಲ್ತುಳಿತಕ್ಕೆ ಸಿಕ್ಕಿ ಸತ್ತುಹೋದರು. ಅಲ್ಲಿ ನಡೆದ ದುರಂತಕ್ಕೆ ಮುಖ್ಯಮಂತ್ರಿ ಮತ್ತು ಅವರ ದೊಡ್ಡ ಅನುಯಾಯಿ ಬಣ ಕಾರಣವೆಂದು ಹೇಳಲಾಯಿತು. ಶುಭಸ್ನಾನವು ಚಿತಾರೋಹಣದಲ್ಲಿ ಪರಿಸಮಾಪ್ತಿಯಾಗಿಹೋಯಿತು. ಈಗ ಮೆಕ್ಕಾ–ಮದೀನಾದಲ್ಲಿ ಭಗವಂತನ ಪಾದ ಸೇರಿಕೊಂಡವರ ಸಂಖ್ಯೆ ಒಂದು ಸಾವಿರವನ್ನು ದಾಟಿದೆ. ದೇವರ ಸಾಯುಜ್ಯ ಪಡೆಯಲು ಇದೊಂದು ನೂತನ ವಿಧಾನ ಎಂಬಂತೆ ಆಗಿಹೋಗಿದೆ. ಮಿನಾದಲ್ಲಿ ಸೈತಾನನಿಗೆ ಕಲ್ಲು ಹೊಡೆಯಲು ಹೋದವರು ಬಹುಶಃ ಅವನ ಕೋಪಕ್ಕೆ ತುತ್ತಾದರೋ ಏನೋ ! ಅಲ್ಲಿ ಇಂತಹ ಸಾವು ಸಂಭವಿಸಿರುವುದು ಇದೇ ಮೊದಲಿನದಲ್ಲ. ಲಕ್ಷಗಟ್ಟಲೆ ಜನರ ಸಂದಣಿಯಲ್ಲಿ ಎಂತಹ ವ್ಯವಸ್ಥೆಯೂ ಕುಸಿದುಬೀಳಬಹುದು. ಅದನ್ನು ದಕ್ಷತೆಯಿಂದ ನಿಭಾಯಿಸಲು ಸೌದಿ ಅರೇಬಿಯಾ ಸರ್ಕಾರಕ್ಕೆ ಅನುಭವ ಪಡೆಯಲು ಅವಕಾಶಗಳಿದ್ದರೂ ಏನೂ ಪ್ರಯೋಜನವಾಗಿಲ್ಲ. ಕಲ್ಲು ಹೊಡೆಯುವ ಮೌಢ್ಯವನ್ನು ನಿವಾರಿಸಿಕೊಳ್ಳುವುದೊಂದೇ ದೇವರ ಭಕ್ತರಿಗೆ ಉಳಿದಿರುವ ಮಾರ್ಗ. ಇಲ್ಲೇ ಎಲ್ಲಾದರೂ ಒಂದು ಕಂಬಕ್ಕೆ ಕಲ್ಲೆಸೆದು ಮಿನಾಕ್ಕೆ ಅದು ತಲುಪಿತೆಂದು ಭಾವಿಸಿಕೊಳ್ಳಲು ಅಡ್ಡಿಯಿಲ್ಲ. ಅದಕ್ಕೆ ಮೌಲ್ವಿಗಳು ಸಹ ಅನುಜ್ಞೆ ನೀಡುವುದು ಸ್ವಾಗತಾರ್ಹ ಬೆಳವಣಿಗೆಯಾಗುತ್ತದೆ. ಕ್ರಮೇಣ ಕಲ್ಲೆಸೆಯದೆಯೇ ಎಸೆದೆವೆಂದು ಭಾವಿಸುವ ಸ್ವಭಾವ ಬೆಳೆಯಬಹುದು. "ಸುವರ್ಣಾರ್ಥೇ ಅಕ್ಷತಾನ್ ಸಮರ್ಪಯಾಮಿ" (ಚಿನ್ನದ ಹೆಸರಿನಲ್ಲಿ ನಿನಗೆ ಬಣ್ಣದ ಅಕ್ಕಿಕಾಳು ಸಮರ್ಪಿಸುತ್ತಿದ್ದೇನೆ) ಎಂಬ ಪದ್ಧತಿಗೆ ಸಮನಾದ್ದು ಅದು. ಸಾವಿರಾರು ಜನ ಪ್ರಾಣ ಕಳೆದುಕೊಳ್ಳುವುದನ್ನು ತಪ್ಪಿಸಲು ವರ್ಷದ ಒಂದು ದಿನ ಭಕ್ತರು ಇರುವೆಡೆಯೇ ಒಂದೊಂದು ಕಲ್ಲುಕಂಬ ಹುಡುಕಿಕೊಳ್ಳುವುದು ಕ್ಷೇಮ.

* * *

ಪ್ರಧಾನಿ ಮೋದಿ ಅಮೆರಿಕಾಕ್ಕೆ ಹೋಗಿ ಏನೇನು ಸಾಧಿಸಿಕೊಂಡು ಬಂದರೋ ಇನ್ನೂ ಪೂರ್ತಿಯಾಗಿ ತಿಳಿದಿಲ್ಲ. "ಬೆರಳುಗಳಿಂದ ಪವಾಡ" ಮಾಡಿದ ನಮ್ಮ ಕಂಪ್ಯೂಟರ್ ತಜ್ಞರ "ಮಿದುಳುಗಳನ್ನು ಅಮೆರಿಕಾದಲ್ಲಿ ನಿಕ್ಷೇಪ" ಮಾಡಿರುವುದನ್ನು ಸಂತಸದಿಂದ ಹೇಳಿಬಂದರು. ನಮ್ಮ ದೇಶದಿಂದ ಹೋಗಿರುವ ವಿಜ್ಞಾನಿಗಳು, ಹೊಟೇಲ್ ಮಾಲೀಕರು, ವಿಶ್ವವಿದ್ಯಾನಿಲಯಗಳ ಪ್ರಾಧ್ಯಾಪಕರು, ಅಸಂಖ್ಯ ವೈದ್ಯರು ಮಾಡಿರಬಹುದಾದ ಯಾವ ಪವಾಡವನ್ನೂ ಮೋದಿ ನೆನೆಯಲಿಲ್ಲ. ಇವರಲ್ಲದೆ ಇನ್ನೂ ಲಕ್ಷಗಟ್ಟಲೆ ಜನ ಹಲವಾರು ಉದ್ಯೋಗಗಳಲ್ಲಿದ್ದಾರೆ. ಅವರಲ್ಲಿ ಯೋಗದ ಅಂಗಡಿಗಳನ್ನು ತೆರೆದವರೂ ಸೇರಿದ್ದಾರೆ. ಅವರನ್ನೇಕೆ ಪ್ರಧಾನಿ ಮರೆತರೋ ತಿಳಿಯದು ! ಎಷ್ಟು ಮೂಟೆಗಳಲ್ಲಿ ವಿದೇಶಿ ಬಂಡವಾಳವನ್ನು ಅಮೆರಿಕಾದ ಉದ್ಯಮಿಗಳು ತರುತ್ತಾರೆ, ಅದನ್ನಿಲ್ಲಿ ಹೂಡಿ ಸರಕು ರಫ್ತು ಮಾಡುತ್ತಾರೆ, ಉದ್ಯೋಗ ಕಲ್ಪಿಸುತ್ತಾರೆ, ಮುಂತಾದ ನಿರೀಕ್ಷೆಗಳು ಸದ್ಯಕ್ಕೆ ಕೇವಲ ಆಶಯದ ಮಟ್ಟದಲ್ಲಿವೆ. ನಿಜಕ್ಕೂ ಹೂಡಿಕೆ ಜರುಗಿದಾಗ ಎಷ್ಟು ಭೂಮಿಯನ್ನು ಹೂಡಿಕೆದಾರರಿಗೆ ಕೊಡಬೇಕಾಗಬಹುದೋ ಅದನ್ನು ಆತಂಕದಿಂದ ಕಾದುನೋಡಬೇಕು. ಆದರೆ ನಿಜಕ್ಕೂ ವ್ಯವಹಾರ ಕುದುರಿದ್ದು ಅಮೆರಿಕಾದ ಕಂಪನಿಗಳಿಗೆ. ಮೋದಿ – ಒಬಾಮ ಸಹಿ ಮಾಡಿದ ಒಪ್ಪಂದಗಳ ಪ್ರಕಾರ ನಮ್ಮ ದೇಶವು ಅಮೆರಿಕಾದಿಂದ ರಕ್ಷಣಾ ಸಾಮಗ್ರಿಗಳನ್ನು ಕೊಳ್ಳಲಿದೆ. ಅದರ ಒಟ್ಟು ಅಂದಾಜು ಮಾಡಲಾದ ಮೊತ್ತವು ಮೂರು ಬಿಲಿಯನ್ ಡಾಲರುಗಳು. ಹಾಗೆಂದರೆ ಎಷ್ಟು ರೂಪಾಯಿಗಳೆಂಬುದನ್ನು ಅರುಣ್ ಜೇಟ್ಲಿ ಮಾತ್ರ ಹೇಳಬಲ್ಲರು ! ರಿಸರ್ವ್ ಬ್ಯಾಂಕ್‌ನ ಮುಖ್ಯಸ್ಥ ರಾಜನ್ ಹೇಳಬಹುದಿತ್ತು, ಆದರೆ ಅವರ ಕೈ–ಬಾಯಿ ಕಟ್ಟಿಹಾಕಲಾಗುತ್ತಿದೆ. ಮೂರು ಬಿಲಿಯನ್ ಬೆಲೆಯ ಹೆಲಿಕಾಪ್ಟರ್‌ಗಳು ಒಟ್ಟು ೩೭ ಎಂದು ಹೇಳಲಾಗಿದೆ. ಅವುಗಳ ಬೆಲೆ ೧೯,೮೦೦ ಕೋಟಿ


*(೬ನೇ ಪುಟಕ್ಕೆ )*




ಸಂಪುಟ–೧೭ ಸಂಚಿಕೆ–೪ ನವೆಂಬರ್ ೨೦೧೫

■ ***ಗೌರವ ಸಂಪಾದಕ***

ಜಿ. ರಾಮಕೃಷ್ಣ

■ ***ಸಂಪಾದಕ***

ಸಿದ್ದನಗೌಡ ಪಾಟೀಲ

■ ***ಸಹಸಂಪಾದಕರು***

ಇಂದಿರಾ ಕುಮಾರಿ
ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಲ್. ಗೋಪಾಲಕೃಷ್ಣಯ್ಯ
ರಾಮಲಿಂಗಪ್ಪ ಟಿ. ಬೇಗೂರು
ಎಸ್. ಸುರೇಂದ್ರ

■ ***ವ್ಯವಸ್ಥಾಪಕ***

ಎ. ಆರ್. ಉಡುಪ

■ ***ಮುದ್ರಕ–ಪ್ರಕಾಶಕ***

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

■ ***ಮುದ್ರಣ***

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು – ೫೬೦ ೦೫೮
ದೂರವಾಣಿ : ೨೮೩೯೭೪೨೬

■ ***ಹೊಸತು ಕಚೇರಿಯ ವಿಳಾಸ***




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ , ಅಂ. ಪೆ. ೫೧೯೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು – ೫೬೦ ೦೦೧
ದೂರವಾಣಿ : ೩೦೫೭೮೦೯೯, ೨೨೨೦೩೫೮೦
ಫ್ಯಾಕ್ಸ್ : ೩೦೫೭೮೦೨೩
**e-mail : navakarnataka@gmail.com**
**hosathu@gmail.com**
**hosathu.nkp@gmail.com**
**URL : www.navakarnataka.com**
**http : //navakarnataka.blogspot.in**
**http : //hosathumonthly.blogspot.in**



# ಸಂಪಾದಕೀಯ

## ಪರ್ಯಾಯ ಪ್ರಭುತ್ವದ ಅಪಾಯ

ಪ್ರಜೆಗಳಿಂದ ಚುನಾಯಿತರಾದ ಜನಪ್ರತಿನಿಧಿಗಳು, ಪಕ್ಷಗಳು ಪ್ರಭುತ್ವದ ಚಾಲಕರಾಗುವುದು ಪ್ರಜಾಪ್ರಭುತ್ವದ ಮಾದರಿ. ಈ ರೀತಿ ಆಯ್ಕೆಯಾಗಿ ಅಧಿಕಾರಕ್ಕೆ ಬಂದವರು ದೇಶ ಒಪ್ಪಿಕೊಂಡಿರುವ ಸಂವಿಧಾನದ ನೀತಿಗನುಗುಣವಾಗಿ ಆಡಳಿತ ನಡೆಸಬೇಕಾಗುತ್ತದೆ. ಅದರ ಬದಲಾಗಿ ಸಂವಿಧಾನದ ಆಶಯಗಳಿಗೆ ವಿರುದ್ಧವಾಗಿ, ವ್ಯತಿರಿಕ್ತವಾಗಿ ವರ್ತಿಸುವ ವ್ಯಕ್ತಿ, ಸಂಘ, ಸಂಸ್ಥೆ, ಪಕ್ಷಗಳನ್ನು ಪ್ರಭುತ್ವ ನಿಯಂತ್ರಿಸಬೇಕು. ಅನಿವಾರ್ಯವಾದರೆ ಅಂಥ ಶಕ್ತಿಗಳನ್ನು ನಿರ್ನಾಮ ಮಾಡಬೇಕು. ದೇಶದ ಏಕತೆ, ಸೌಹಾರ್ದತೆ, ಶಾಂತಿ, ಸುವ್ಯವಸ್ಥೆಯನ್ನು ಕಾಪಾಡಿಕೊಳ್ಳಲು ಇದು ಅವಶ್ಯಕ ಕ್ರಿಯೆ. ಆದರೆ ಇದು ಆಡಳಿತ ಪಕ್ಷದ ನೀತಿ, ನಿಲುವುಗಳನ್ನು ಆಧರಿಸಿರುತ್ತದೆ. ಇಂದು ನಮ್ಮ ದೇಶದಲ್ಲಿ ಆಡಳಿತ ನಡೆಸುತ್ತಿರುವ ಕೇಂದ್ರ ಹಾಗೂ ಕೆಲವು ರಾಜ್ಯಗಳ ಸರಕಾರಗಳು ಸಂವಿಧಾನಕ್ಕಿಂತ ಆಡಳಿತ ಪಕ್ಷಗಳ ಹಿತಾಸಕ್ತಿಯನ್ನು ಕಾಯುವಲ್ಲಿ ನಿರತವಾಗಿವೆ. ಇಂದು ಕೇಂದ್ರದಲ್ಲಿ ಆಡಳಿತಕ್ಕೆ ಬಂದಿರುವ ಹಿಂದುತ್ವವಾದಿ ಪಕ್ಷ ಕಳೆದ ಎರಡು ದಶಕಗಳಿಂದ ದೇಶದ ಸಂವಿಧಾನಕ್ಕೆ ವ್ಯತಿರಿಕ್ತವಾಗಿ ವರ್ತಿಸಿ, ಜನಾಂಗೀಯ ದ್ವೇಷ ಬೆಳೆಸಿ ಇಂದು ಅಧಿಕಾರ ಪಡೆಯುವಲ್ಲಿ ಸಫಲವಾಗಿದೆ. ಈ ಪಕ್ಷ ಅಧಿಕಾರಕ್ಕೆ ಬಂದಿದ್ದೇ ದೇಶದಲ್ಲಿ ಕೋಮುವಾದಿ ಶಕ್ತಿಗಳು ದೇಶದ ಪ್ರಜಾಪ್ರಭುತ್ವಕ್ಕೆ ಎದುರಾಗಿ ಪರ್ಯಾಯ ಪ್ರಭುತ್ವವನ್ನು ಜಾರಿಗೆ ತರುತ್ತಿವೆ. ಕಳೆದ ಒಂದು ವರ್ಷದಿಂದ ದೇಶದಲ್ಲಿ ಇಂಥ ಪರ್ಯಾಯ ಪ್ರಭುತ್ವದ ಆಡಳಿತ ಅವ್ಯಾಹತವಾಗಿ ನಡೆದಿದೆ. ಕರ್ನಾಟಕದ ಕರಾವಳಿ ಪ್ರದೇಶದಲ್ಲಿ ಇಂಥ ಪರ್ಯಾಯ ಪ್ರಭುತ್ವ ಕಳೆದ ಒಂದು ದಶಕದಿಂದಲೂ ಜಾರಿಯಲ್ಲಿದೆ. ಯಾರು ಏನನ್ನು ತಿನ್ನಬೇಕು, ಯಾರು ಯಾರ ಜೊತೆ ಮಾತನಾಡಬೇಕು, ಯಾರು ಯಾರನ್ನು ಸ್ನೇಹಿತರನ್ನಾಗಿಸಿಕೊಳ್ಳಬೇಕು – ಹೀಗೆ ವಿವಿಧ ರೀತಿಯ ನೀತಿಸಂಹಿತೆಗಳನ್ನು ರೂಪಿಸಿ ಅದನ್ನು ಜಾರಿಗೆ ತರಲು ತನ್ನದೇ ಆದ ಪಡೆಗಳನ್ನು ರೂಪಿಸಿ, ತನ್ನ ನೀತಿಸಂಹಿತೆಯನ್ನು ಪಾಲಿಸದವರ ಮೇಲೆ ದೈಹಿಕದಾಳಿ, ಹಲ್ಲೆ, ಹತ್ಯೆ ನಡೆಸುವ ಕ್ರಿಯೆ ಅವ್ಯಾಹತವಾಗಿ ನಡೆದಿದೆ. ಇದೇ ರೀತಿಯ ಪರ್ಯಾಯ ಪ್ರಭುತ್ವ ಗುಜರಾತ್‌ನಲ್ಲಿ ನಡೆದು, ದೇಶದ ಸಂವಿಧಾನವನ್ನು ಉಲ್ಲಂಘಿಸಿದ ವ್ಯಕ್ತಿಯೇ ಇಂದು ದೇಶದ ಪ್ರಧಾನಿಯಾಗಿದ್ದಾರೆ. ನಮ್ಮ ದೇಶದ ಪ್ರಧಾನಿ ಉತ್ತರ ಪ್ರದೇಶದ ದಾದ್ರಿಯಲ್ಲಿ ಗೋಮಾಂಸ ಮನೆಯಲ್ಲಿಟ್ಟಿದ್ದಾರೆಂದು ಶಂಕಿಸಿ, ಮುಸ್ಲಿಂ ವ್ಯಕ್ತಿಯ ಮೇಲೆ ಹಲ್ಲೆಮಾಡಿ ಕೊಲೆಗೈದ ಪಾಶವೀಕೃತ್ಯವನ್ನು ಖಂಡಿಸಲು ನಿರಾಕರಿಸುತ್ತಾರೆ. ಸಾರ್ವಜನಿಕ ಒತ್ತಡ ಹೆಚ್ಚಾದಾಗ ಅದು 'ದುರದೃಷ್ಟಕರ ಘಟನೆ' ಎಂದು ವಿಷಾದ ವ್ಯಕ್ತಪಡಿಸುತ್ತಾರೆ. ಆದರೆ ಆ ಘಟನೆಗೂ ಕೇಂದ್ರ ಸರಕಾರಕ್ಕೂ ಸಂಬಂಧವಿಲ್ಲ ಎನ್ನುತ್ತಾರೆ. ಆ ಮೂಲಕ ದೇಶದ ಪ್ರಭುತ್ವ ಸಂವಿಧಾನ ವಿರೋಧಿ ಶಕ್ತಿಗಳ ನಿಯಂತ್ರಣಕ್ಕೆ ಬದಲಾಗಿ ಪರೋಕ್ಷವಾಗಿ ಬೆಂಬಲಿಸುತ್ತದೆ ಎಂಬ ಸಂದೇಶವನ್ನು ಈ ದೇಶದ ಪ್ರಧಾನಿ ಕೊಟ್ಟಿದ್ದಾರೆ. ಇಷ್ಟಕ್ಕೂ ಇಂದು ದೇಶದಲ್ಲಿ ಧಾರ್ಮಿಕ, ಸಾಂಸ್ಕೃತಿಕ ವಲಯದಲ್ಲಿ ಬೆಳೆಯುತ್ತಿರುವ ಅಸಹಿಷ್ಣುತೆ, ಹಲ್ಲೆ, ಅಪರಾಧ ಕೃತ್ಯಗಳು ಈ ದೇಶದ ಆಳುವ ಪಕ್ಷದ ಅಂಗಸಂಸ್ಥೆಗಳಿಂದಲೇ ನಡೆಯುತ್ತಿವೆ. ಅಂಥ ಸಂಘ, ಸಂಸ್ಥೆಗಳನ್ನು ನಿಯಂತ್ರಿಸುವ ಕೆಲಸವನ್ನು ಈ ದೇಶದ ಪ್ರಭುತ್ವ ಮಾಡುವುದಿಲ್ಲ. ಅಲ್ಲಿಗೆ ಪರ್ಯಾಯ ಪ್ರಭುತ್ವಕ್ಕೆ ಇವರ ಬೆಂಬಲ ಇದೆ ಎಂದೇ ಅರ್ಥ. ಮಾತ್ರವಲ್ಲ, ಇಂದು ದೇಶದ ಆಡಳಿತ ಪಕ್ಷ ತನ್ನ ಗುಪ್ತಕಾರ್ಯಸೂಚಿಯನ್ನು ಈ ರೀತಿಯಿಂದ ಜಾರಿಗೆ ತರುತ್ತಿದೆ.

ಧರ್ಮ ಮತ್ತು ಪ್ರಭುತ್ವವನ್ನು ದೂರವಿಡುವುದು ಪ್ರಜಾಸತ್ತೆಯ ಆರೋಗ್ಯದ ದೃಷ್ಟಿಯಿಂದ ಒಳ್ಳೆಯದು. ಧರ್ಮ ಪ್ರೇರಿತ ಸಂಘಸಂಸ್ಥೆಗಳ ಹದ್ದುಮೀರಿದ ವರ್ತನೆಯನ್ನು, ಸಂವಿಧಾನ ವಿರೋಧಿ ಚಟುವಟಿಕೆಗಳನ್ನು ಪ್ರಭುತ್ವ ನಿಯಂತ್ರಿಸದೇ ಇದ್ದರೆ ಮುಂದೊಮ್ಮೆ ಈ ಶಕ್ತಿಗಳು ಪ್ರಜಾಪ್ರಭುತ್ವವನ್ನೇ ನುಂಗಿಹಾಕುತ್ತವೆ. ಇಂದು ಹಿಂದುತ್ವದ ಹೆಸರಿನ ಸಂಘಟನೆಗಳು ಯಾವ ಪಾಕಿಸ್ತಾನವನ್ನು ತೋರಿಸಿ ತಮ್ಮ ಚಟುವಟಿಕೆಗಳನ್ನು ವಿಸ್ತರಿಸುತ್ತಿವೆಯೋ ಅದೇ ಪಾಕಿಸ್ತಾನದ ಪ್ರಭುತ್ವದ ಗತಿ ಏನಾಗಿದೆ ಎಂಬುದನ್ನು ಗಮನಿಸಬೇಕು. ಎಪ್ಪತ್ತರ ದಶಕದಲ್ಲಿ ಅಫಘಾನಿಸ್ತಾನದ ವಿರುದ್ಧ ವಿನಾಶಕಾರಿ ಚಟುವಟಿಕೆ ನಡೆಸಲು ಅಮೆರಿಕಾ ದೇಶದೊಡನೆ ಸೇರಿ ಭಯೋತ್ಪಾದಕರಿಗೆ ತರಬೇತಿಕೊಟ್ಟ ಪಾಕಿಸ್ತಾನದ ಪ್ರಭುತ್ವ ಇಂದು ಅದೇ ಭಯೋತ್ಪಾದಕರ ಕಪಿಮುಷ್ಟಿಯಲ್ಲಿ ಸಿಲುಕಿಕೊಂಡಿದೆ. ಮಧ್ಯಪ್ರಾಚ್ಯದಲ್ಲಿ ಇಸ್ಲಾಮಿಕ್ ಸ್ಟೇಟ್ ಹೆಸರಿನಲ್ಲಿ ಬೆಳೆಯುತ್ತಿರುವ ಉಗ್ರಗಾಮಿಗಳ ಹಿಂದೆಯೂ ಅಮೆರಿಕಾ ಕೈವಾಡವಿದೆ. ಇಂದು ತಾನೇ ಬೆಳೆಸಿದ ಶಕ್ತಿಗಳನ್ನು ನಿಗ್ರಹಿಸುವ ನಾಟಕವನ್ನು ಅಮೆರಿಕಾ ನಡೆಸುತ್ತಿದೆ. ಇಂದು ಭಾರತದಲ್ಲಿಯೂ ಧಾರ್ಮಿಕ ಮುಖವಾಡದ ಭಯೋತ್ಪಾದಕರು ನಡೆಸುವ ಪರ್ಯಾಯ ಪ್ರಭುತ್ವವನ್ನು ಗಂಭೀರವಾಗಿ ಪರಿಗಣಿಸದಿದ್ದರೆ ಮುಂದೆ ಈ ಮಹಾನ್ ದೇಶದ ಪ್ರಜಾಪ್ರಭುತ್ವವೇ ನಾಶವಾಗುತ್ತದೆ. ಮಧ್ಯಪ್ರಾಚ್ಯದ ಐಎಸ್ ಸಂಘಟನೆಗೂ ಭಾರತದ ಆರ್.ಎಸ್.ಎಸ್.ಗೂ ಹಿಟ್ಲರ್‌ನ ನಾಝಿ ಸಿದ್ಧಾಂತಗಳಿಗೂ ಯಾವುದೇ ವ್ಯತ್ಯಾಸವಿಲ್ಲ. ಇಲ್ಲಿ ಹಿಂದು – ಮುಸ್ಲಿಂ – ಕ್ರಿಶ್ಚಿಯನ್ ಯಾವುದೇ ಹೆಸರಿನ ಭಯೋತ್ಪಾದಕರಿರಲಿ, ಅವರನ್ನು ನಿಯಂತ್ರಿಸಿ, ನಿರ್ನಾಮಗೊಳಿಸಬೇಕಾದದ್ದು ಎಲ್ಲ ಧರ್ಮಗಳ, ಪ್ರಜಾಪ್ರಭುತ್ವಗಳ ಕರ್ತವ್ಯ. ಮತೀಯರು ಬೇರೆ, ಮತಾಂಧರು

ಬೇರೆ. ಮತೀಯರನ್ನು ಮತಾಂಧರಿಂದ ರಕ್ಷಿಸುವಲ್ಲಿ ಪ್ರಭುತ್ವದ ಜವಾಬ್ದಾರಿ ದೊಡ್ಡದಿದೆ. ಪಾಕಿಸ್ತಾನದ ಸಂಗೀತಗಾರ ಗುಲಾಮ್ ಅಲಿ ಕಾರ್ಯಕ್ರಮ ವಿರೋಧಿಸಿ, ಸುಧೀಂದ್ರ ಕುಲಕರ್ಣಿಯವರ ಮುಖಕ್ಕೆ ಮಸಿ ಬಳಿದ ಹಿಂದುತ್ವದ ಹೆಸರಿನ ಮತಾಂಧರಿಗೂ ಭಾರತದ ಸುಪ್ರಸಿದ್ಧ ಸಂಗೀತಗಾರ ರೆಹಮಾನ್ ವಿರುದ್ಧ ಫತ್ವಾ ಹೊರಡಿಸಿದ ಇಸ್ಲಾಂ ಧರ್ಮದ ಮತಾಂಧರಿಗೂ ಯಾವುದೇ ವ್ಯತ್ಯಾಸವಿಲ್ಲ. ಇಲ್ಲಿ ಗಮನಿಸಬೇಕಾದದ್ದು ಹಿಂದು–ಮುಸ್ಲಿಂ ಧರ್ಮ ಬೇರೆ, ಧರ್ಮದ ಹೆಸರಿನಲ್ಲಿ ಪರ್ಯಾಯ ಪ್ರಭುತ್ವ ನಡೆಸುವ ಮತಾಂಧರು ಬೇರೆ. ಆದರೆ ಈ ಮತಾಂಧರು ನಡೆಸುವ ಅನಾಚಾರಗಳಿಗೆ ನಿಷ್ಪಾಪಿ ಜನತೆ ಬಲಿಯಾಗುತ್ತಿದೆ. ಮುಂದೊಂದು ದಿನ ಮತಾಂಧರೇ ಪ್ರಭುತ್ವಗಳನ್ನು ಕೈವಶ ಮಾಡಿಕೊಂಡರೆ ಯಾವ ಮತದವರೂ ನೆಮ್ಮದಿಯ ಬದುಕನ್ನು ನಡೆಸಲಾಗುವುದಿಲ್ಲ. ನೇಪಾಳ ಒಂದು ಧರ್ಮದ ಚೌಕಟ್ಟನ್ನು ಕಿತ್ತೆಸೆದು ಧರ್ಮನಿರಪೇಕ್ಷ ಪ್ರಜಾಪ್ರಭುತ್ವದ ಘೋಷಣೆಯನ್ನು ಮಾಡಿ ಒಂದು ಮಾದರಿಯಾಗಿದೆ. ನಮ್ಮ ದೇಶದಲ್ಲಿ ಧರ್ಮಾಧಾರಿತ ಪ್ರಭುತ್ವ ತರಲು ಹೊರಟಿರುವ ಬಿಜೆಪಿಗೆ ಇದೊಂದು ಪಾಠವಾಗಿದೆ. ಈಗ ನಮ್ಮ ದೇಶಕ್ಕೆ ಬೇಕಿರುವುದು ಯಾವುದೇ ಧರ್ಮದ ರಾಜ್ಯವಲ್ಲ ಪ್ರಜಾರಾಜ್ಯ. ಈಗಿರುವ ಪ್ರಜಾರಾಜ್ಯವನ್ನು ಉಳಿಸಿಕೊಳ್ಳಬೇಕಾದದ್ದು ಎಲ್ಲ ಧರ್ಮಗಳ ಜನತೆಯ ಕರ್ತವ್ಯ. ಇದೇ ಸಂದರ್ಭದಲ್ಲಿ ಈಗಾಗಲೇ ನಮ್ಮ ಪ್ರಜಾರಾಜ್ಯ ಕೋಟ್ಯಾಧಿಪತಿಗಳ, ಕಾರ್ಪೊರೇಟ್ ಕಂಪನಿಗಳ ರಾಜ್ಯವಾಗಿ ಪರಿವರ್ತನೆಯಾಗಿದೆ. ಅಂಥವರಿಂದಲೂ ಪ್ರಜಾಪ್ರಭುತ್ವವನ್ನು ರಕ್ಷಿಸಬೇಕಿದೆ. ಅದಕ್ಕಾಗಿ ತೀವ್ರವಾದ ಚಳುವಳಿಗಳು ನಡೆಯಬೇಕಿದೆ. ಆ ಚಳುವಳಿ ನಡೆಯಬಾರದೆಂದೇ ಜಗತ್ತಿನಲ್ಲಿ ಮತ್ತು ಭಾರತದಲ್ಲಿ ಮತಾಂಧ ಶಕ್ತಿಗಳನ್ನು ಬೆಳೆಸಿ ಜನತೆ ತಮ್ಮತಮ್ಮೊಳಗೇ ಬಡಿದಾಡುವ ಸನ್ನಿವೇಶವನ್ನು ನಿರ್ಮಿಸಲಾಗುತ್ತಿದೆ. ಈ ಸತ್ಯವನ್ನು ಜನರಿಗೆ ತಿಳಿಸಿಹೇಳಬೇಕಾದ ಅವಶ್ಯಕತೆ ಇದೆ.

ಸಿದ್ದನಗೌಡ ಪಾಟೀಲ

## ಹಿಂದುತ್ವವಾದಿಗಳ ಹೆಚ್ಚುತ್ತಿರುವ ಅಸಹನೆ ಅಪಾಯಕಾರಿ

**ಕ**ರ್ನಾಟಕದ ಹಿರಿಯ ಸಂಶೋಧಕ, ವಿಮರ್ಶಕ ಡಾ॥ ಎಂ. ಎಂ. ಕಲ್ಬುರ್ಗಿ ಹತ್ಯೆ, ಉತ್ತರ ಪ್ರದೇಶದ ದಾದ್ರಿ ಗ್ರಾಮದಲ್ಲಿ ಅಮಾಯಕ ಅಲ್ಪಸಂಖ್ಯಾತನೊಬ್ಬನ ಕಗ್ಗೊಲೆ, ಮುಂಬಯಿಯಲ್ಲಿ ಶಿವಸೇನೆಯ ಉಗ್ರರು ಪುಸ್ತಕ ಬಿಡುಗಡೆ ಸಮಾರಂಭಕ್ಕೆ ನುಗ್ಗಿ ಲೇಖಕ ಸುಧೀಂದ್ರ ಕುಲಕರ್ಣಿ ಮುಖಕ್ಕೆ ಮಸಿ ಬಳಿದದ್ದು, ಇವೆಲ್ಲ ಇತ್ತೀಚೆಗೆ ಸಂಭವಿಸಿರುವ ಘಟನೆಗಳು. ಈ ಒಂದೊಂದೂ ಭಾರತೀಯರಾದ ನಾವು ವಿಶ್ವದ ಮುಂದೆ ತಲೆತಗ್ಗಿಸಬೇಕಾಗಿರುವ ವಿದ್ಯಮಾನಗಳೇ. ಈ ಎಲ್ಲ ಘಟನೆಗಳೂ ದೇಶದಲ್ಲಿ ಹೆಚ್ಚುತ್ತಿರುವ ಸಹಿಷ್ಣುತೆ ಕೊರತೆಯನ್ನು ಸೂಚಿಸುತ್ತವೆ. ಹಿಂದುತ್ವವಾದಿ ಸಂಘಪರಿವಾರದ ಸಂಘಟನೆಗಳು ಇಂಥ ದುಶ್ಚರ್ಯೆಗಳಲ್ಲಿ ತೊಡಗಿರುವುದು ಹೊಸದೇನಲ್ಲ. ಕ್ರಮಬದ್ಧವಾಗಿ ಇಂಥ ನೈತಿಕ ದಾದಾಗಿರಿಯನ್ನು ತಮ್ಮ ಪ್ರಾಬಲ್ಯ ಹೆಚ್ಚಿದಂತೆ ನಡೆಸಿಕೊಂಡು ಬಂದಿದ್ದಾರೆ. ಈಗ ಕೇಂದ್ರದಲ್ಲಿ ಅಧಿಕಾರದ ಚುಕ್ಕಾಣಿ ಹಿಡಿದಿರುವುದರಿಂದ, ಸಾಕಷ್ಟು ಬಹುಮತ ಪಡೆದುಕೊಂಡಿರುವುದರಿಂದ ಎಲ್ಲ ಪೊರೆಯನ್ನೂ ಕಳಚಿ ತಮ್ಮ ದುಶ್ಚರ್ಯೆಗಳನ್ನು ನಡೆಸತೊಡಗಿದ್ದಾರೆ. ಇಂಥ ಚರ್ಯೆಗಳು ಮೋದಿ ಸರಕಾರದ ಶುದ್ಧ ಆಡಳಿತ, ಅಭಿವೃದ್ಧಿ ಯೋಜನೆಗಳಿಗೆ ಖಂಡಿತ ಪೂರಕವಾಗಿಲ್ಲ. ಇದು ಅವರಿಗೂ ಗೊತ್ತಿದೆ ಎನ್ನುವುದರಲ್ಲಿ ಸಂಶಯವಿಲ್ಲ. ಆದರೆ ಮೋದಿ ಸರಕಾರ ಅವನ್ನು ತಡೆಗಟ್ಟಲು ಕ್ರಮ ಕೈಗೊಳ್ಳುವುದಕ್ಕೆ ಬದಲಾಗಿ ಮೌನ ಸಮ್ಮತಿ ನೀಡುತ್ತಿರುವುದೀಗ ಆತಂಕಕಾರಿ. ಹಾಗಾಗಿ, ಒಂದಾದ ಮೇಲೊಂದು ಪ್ರಕರಣಗಳು ಪರಿಭಾವಿಸುತ್ತಲೇ ಇವೆ. ಇದುವರೆಗೆ ಯಾವೊಂದು ಘಟನೆಯ ಕುರಿತಾಗಿಯೂ ಪ್ರಧಾನಿ ಮೋದಿ ಪ್ರತಿಕ್ರಿಯಿಸದಿರುವುದು ಖಂಡನೀಯ. ಅವರು ತಳೆದಿರುವ ಧೋರಣೆ ಉಗ್ರ ಹಿಂದುತ್ವವಾದಿಗಳಿಗೆ ಕುಮ್ಮಕ್ಕು ನೀಡಿದಂತಾಗಿದೆ. ಪತ್ರಿಕೆಯೊಂದಕ್ಕೆ ನೀಡಿದ ಸಂದರ್ಶನದ ಸಂದರ್ಭದಲ್ಲಿ ಘಟನೆಗಳ ಕುರಿತು ವ್ಯಕ್ತಗೊಳಿಸಿರುವ ಅಭಿಪ್ರಾಯದಲ್ಲಿ ತಮ್ಮ ಹೊಣೆಗಾರಿಕೆ ಏನೂ ಇಲ್ಲ ಎಂದಿದ್ದಾರೆ.

ಒಂದು ಸಮಾಧಾನಕರ ಸಂಗತಿ ಎಂದರೆ ಸಂಘ ಪರಿವಾರ ಈ ಚರ್ಯೆಗಳ ಕುರಿತು ದೇಶದಲ್ಲಿ ವರ್ಧಿಸುತ್ತಿರುವ ಪ್ರತಿಭಟನೆಯ ಪ್ರಕ್ರಿಯೆ. ಬುದ್ಧಿಜೀವಿಗಳು, ಲೇಖಕರು, ವಿಚಾರವಾದಿಗಳು, ಪ್ರಗತಿಪರರು, ಪ್ರಜಾಪ್ರಭುತ್ವವಾದಿಗಳು ವ್ಯಕ್ತಗೊಳಿಸುತ್ತಿರುವ ಪ್ರತಿಭಟನೆ, ಮಾಧ್ಯಮಗಳು, ಪತ್ರಿಕೆಗಳು ವ್ಯಕ್ತಗೊಳಿಸಿರುವ ಆಕ್ರೋಶ ದೇಶದ ಎಲ್ಲೆಡೆ ಈಚಿನ ಘಟನೆಗಳನ್ನು ಖಂಡಿಸಿ ಪ್ರತಿಭಟನೆಗಳು ನಡೆದಿವೆ. ಹಲವು ಲೇಖಕರು ತಮಗೆ ನೀಡಲಾಗಿದ್ದ ಅಕಾಡೆಮಿ ಪ್ರಶಸ್ತಿಗಳನ್ನು ಪ್ರತಿಭಟನಾರ್ಥವಾಗಿ ಹಿಂದಿರುಗಿಸಿದ್ದಾರೆ. ಆಡಳಿತಮಂಡಳಿಯ ಸದಸ್ಯತ್ವಕ್ಕೆ ರಾಜೀನಾಮೆ ಸಲ್ಲಿಸಿದ್ದಾರೆ. ಇಂಥ ಪ್ರತಿಭಟನೆಗಳು ಇನ್ನಷ್ಟು ತೀವ್ರಗೊಳ್ಳಬೇಕು. ಇಲ್ಲದೇ ಹೋದರೆ ದೇಶದಲ್ಲಿ ಅಭಿವ್ಯಕ್ತಿ ಸ್ವಾತಂತ್ರ್ಯ ಪೂರ್ಣವಾಗಿ ಹರಣಗೊಂಡು, ಫಾಸಿಸಂ ಸಂಸ್ಥಾಪನೆಯಾಗುವ ಅಪಾಯವಿದೆ. ಬಹುಮತೀಯರ ದಬ್ಬಾಳಿಕೆಗೆ ಮಣಿದಂತಾಗುತ್ತದೆ.

ಮಹಾರಾಷ್ಟ್ರದ ರಾಜಧಾನಿ ಮುಂಬಯಿಯಲ್ಲಿ ಪಾಕಿಸ್ತಾನದ ಮಾಜಿ ವಿದೇಶಾಂಗ ಸಚಿವ ಕುರ್ಷಿದ್ ಮಹಮದ್ ಕಸೂರಿ ಪುಸ್ತಕ ಬಿಡುಗಡೆ ಸಮಾರಂಭದ ಮೇಲೆ ಭಾಜಪದೊಂದಿಗೆ ಆಡಳಿತ ನಡೆಸುತ್ತಿರುವ ಶಿವಸೇನೆ ನಡೆಸಿದ ಹಲ್ಲೆ ಖಂಡನೀಯ. ಸಮಾರಂಭವನ್ನು ಏರ್ಪಡಿಸಿದ್ದಾತ ಸುಧೀಂದ್ರ ಕುಲಕರ್ಣಿ ಬೇರಾರೂ ಅಲ್ಲ ಭಾಜಪದ ಭಂಟ. ವಾಜಪೇಯಿ ಆಡಳಿತದ ಕಾಲದಲ್ಲಿ ಸರಕಾರಕ್ಕೆ ನಿಕಟವರ್ತಿಯಾಗಿದ್ದಾತ, ಆದ್ವಾನಿಯ ಖಾಸಾ ಶಿಷ್ಯ. ಮಿತ್ರಪಕ್ಷ


ತಿಂಗಳ ಪತ್ರಿಕೆ
**ಹೊಸತು**
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ



**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ₹ ೧೫/- |
| ವಾರ್ಷಿಕ ಚಂದಾ | ₹ ೨೦೦/- |
| ಮೂರು ವರ್ಷಕ್ಕೆ | ₹ ೪೫೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ , ಗಾಂಧಿನಗರ
ಬೆಂಗಳೂರು – ೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು – ೫೭೫ ೦೦೧
✆ : ೦೮೨೪-೨೪೪೧೦೧೬

ಶರಾವತಿ ಕಟ್ಟಡ, ಬಲ್ಮಠ
ಮಂಗಳೂರು – ೫೭೫ ೦೦೧
✆ : ೦೮೨೪-೨೪೨೫೧೬೧

ರಾಮಸ್ವಾಮಿ ವೃತ್ತ
ಮೈಸೂರು – ೫೭೦ ೦೨೪
✆ : ೦೮೨೧-೨೪೨೪೦೯೪

ಸ್ಟೇಷನ್ ರಸ್ತೆ
ಕಲಬುರಗಿ – ೫೮೫ ೧೦೨
✆ : ೦೮೪೭೨-೨೨೪೩೦೨

ಶಿವಸೇನೆ ಆತನ ಮುಖಕ್ಕೆ ಮಸಿ ಬಳಿಯಿತು. ಹಾಗೆಯೇ ಭಾರತದ ಮುಖಕ್ಕೂ ಕಳಂಕ ಹಚ್ಚಿತು. ಪಾಕಿಸ್ತಾನದ ಕಸೂರಿಗೆ ಭಾರತಕ್ಕೆ ಭೇಟಿ ನೀಡಲು ವೀಸಾ ನೀಡಿದ್ದು ಭಾಜಪ ಸರಕಾರ. ಈ ಅತಿಥಿಯ ಸಮ್ಮುಖದಲ್ಲಿ ನಡೆದ ದುರ್ಘಟನೆ ತಲೆತಗ್ಗಿಸುವಂಥದ್ದು. ಅದು ಒಂದು ಬಗೆಯಾಗಿದ್ದರೆ ಶಿವಸೇನೆಯ ಮುಖ್ಯಸ್ಥರು ಮರುದಿನ ಹಲ್ಲೆ ನಡೆಸಿದವರನ್ನು ಸನ್ಮಾನಿಸಿದ್ದು ಉರಿಯುವ ಬೆಂಕಿಗೆ ತುಪ್ಪ ಸುರಿದಂತೆ ಆಯಿತು. ಭಾಜಪ ಮುಖಮಂತ್ರಿ ಫಡ್ನವೀಸ್ ಘಟನೆಯನ್ನು ಖಂಡಿಸಿದ್ದಾರೆ. ಆದರೆ ಶಿವಸೇನೆಯ ಮೈತ್ರಿ ಮುರಿಯುವಂತಿಲ್ಲ. ಈ ದುರ್ಘಟನೆಯ ಕೆಲದಿನಗಳ ಹಿಂದೆ ಪಾಕಿಸ್ತಾನದ ಗಜಲ್ ಗಾಯಕ ಗುಲಾಮ್ ಅಲಿ ಸಂಗೀತ ಕಾರ್ಯಕ್ರಮ ರದ್ದುಗೊಳಿಸುವುದರಲ್ಲಿ ಶಿವಸೇನೆ ಪ್ರಮುಖ ಪಾತ್ರವಹಿಸಿತ್ತು. ಮುಂಬಯಿ ಘಟನೆ ಆದ ಮೇಲೆ ಶಿವಸೇನೆ ಭಾಜಪಗೆ ಧೈರ್ಯವಿದ್ದರೆ ಮೈತ್ರಿ ಮುರಿಯಲಿ ಎಂದು ಸವಾಲು ಒಡ್ಡಿದೆ. ಪ್ರಧಾನಿ ನರೇಂದ್ರ ಮೋದಿ ಮಾತ್ರ ಇದುವರೆಗೆ ಆ ಬಗ್ಗೆ ತಲೆಕೆಡಿಸಿಕೊಂಡಿಲ್ಲ. ತಮಗೆ ಸಂಬಂಧಿಸಿದ್ದಲ್ಲ ಎಂದಿದ್ದಾರೆ.

ಈ ಎಲ್ಲ ಇತ್ತೀಚಿನ ಘಟನೆಗಳೂ ಮುಂಬರುವ ದಿನಗಳ ಕರಾಳ ಸ್ವರೂಪಕ್ಕೆ ಸೂಚಕವಾಗಿವೆ. ಸರಕಾರದ ಮೌನ ಸಮ್ಮತಿಯೂ ಇರುವುದರಿಂದ ಇಂಥ ದುರ್ಘಟನೆಗಳು ಹೆಚ್ಚುವ ಸಾಧ್ಯತೆ ಇದೆ. ಅಭಿವ್ಯಕ್ತಿ ಸ್ವಾತಂತ್ರ್ಯ, ವ್ಯಕ್ತಿಯ ಭದ್ರತೆ, ಪ್ರಜಾಪ್ರಭುತ್ವ ಇವುಗಳ ರಕ್ಷಣೆಗೆ ಎಲ್ಲ ಪ್ರಜಾಪ್ರಭುತ್ವ ಶಕ್ತಿಗಳು ಒಂದುಗೂಡಿ ಹೋರಾಟ ನಡೆಸುವ ಜರೂರು ಪರಿಸ್ಥಿತಿ ಉಂಟಾಗಿದೆ ದೇಶದಲ್ಲಿ. ಈವರೆಗೆ ಬರಹಗಾರರು, ಕಲಾವಿದರು, ಪ್ರಗತಿಪರರು ತೋರಿರುವ ಪ್ರತಿಭಟನೆ ಸ್ವಾಗತಾರ್ಹವಾಗಿದ್ದರೂ, ಅದಷ್ಟೇ ಸಾಲದು. ಬೀದಿಗಿಳಿದು ಪ್ರತಿಭಟನೆ ನಡೆಸುವುದೊಂದೇ ಇರುವ ಮಾರ್ಗ.

## ಹೊಸತು

### ಬಿಡಿ ಪ್ರತಿ ಮತ್ತು ಚಂದಾ ದರ ಪರಿಷ್ಕರಣೆ

ಪ್ರಿಯ ಓದುಗರೆ ಮತ್ತು ಚಂದಾದಾರರೆ,

ಕಾಗದ ಮತ್ತು ಮುದ್ರಣ ವೆಚ್ಚಗಳ ಹೆಚ್ಚಳದಿಂದ ಅನಿವಾರ್ಯವಾಗಿ ಪತ್ರಿಕೆ ಮತ್ತು ಚಂದಾ ದರವನ್ನು ಪರಿಷ್ಕರಿಸಬೇಕಾಗಿದೆ.

**ಬಿಡಿ ಪ್ರತಿ : ₹ ೧೫/– ರಿಂದ ₹ ೨೦/–**
**ವಿಶೇಷ ಸಂಚಿಕೆ : ₹ ೪೫/– ರಿಂದ ₹ ೫೦/–**
**ವಾರ್ಷಿಕ ಚಂದಾ : ₹ ೨೦೦/– ರಿಂದ ₹ ೨೫೦/–**
**ಮೂರು ವರ್ಷಕ್ಕೆ : ₹ ೪೫೦/– ರಿಂದ ₹ ೫೦೦/–**

ಈ ಬದಲಾವಣೆಯು ಜನವರಿ ೨೦೧೬ರಿಂದ ಅನ್ವಯವಾಗಲಿದೆ.

ಜನವರಿ ೨೦೧೬ಕ್ಕೆ ಮತ್ತು ತದ ನಂತರ ಚಂದಾ ಅವಧಿ ಮುಗಿಯುವವರು ೩೧ ಡಿಸೆಂಬರ್ ೨೦೧೫ರೊಳಗೆ ಚಂದಾ ನವೀಕರಿಸಿದ್ದಲ್ಲಿ ಹಳೆಯ ದರದಲ್ಲೇ ಸ್ವೀಕರಿಸಲಾಗುವುದು.

– ವ್ಯವಸ್ಥಾಪಕ

*(ಈ ತಿಂಗಳು : ೩ನೇ ಪುಟದಿಂದ)*

ರೂಪಾಯಿಗಳು. ಬೋಯಿಂಗ್ ಕಂಪನಿಗೆ "ಬೊನಾನ್ಸಾ" ಇದು. ಅಂದರೆ, ಸಮೃದ್ಧ ಕಾಣಿಕೆ. ನಮಗೆ ಹೂಡಿಕೆಯ ಆಶ್ವಾಸನೆ, ಅವರಿಗೆ ಅಪ್ಪಟ ಕಾಣಿಕೆ. ಬ್ರಿಟನ್ನಿಗೆ ಹೋದಾಗ ಪ್ರಧಾನಿ ಅದೆಷ್ಟು ಪೌಂಡುಗಳನ್ನು ಕೊಟ್ಟು ಏನೇನು ಕೊಂಡು ತರುತ್ತಾರೋ ಕಾದುನೋಡೋಣ.

ಮೋದಿಯವರು ವಿಶ್ವಸಂಸ್ಥೆಯ ಸಭೆಯನ್ನುದ್ದೇಶಿಸಿ ತಮ್ಮ ಎಂದಿನ ಕರ್ಕಶ ಶೈಲಿಯಲ್ಲಿ ಭಾಷಣ ಮಾಡಿದ ನಂತರ ಒಬಾಮ ಸಹ "ಭಾಷಿಸಿದರು". ಪದೇ ಪದೇ ಅವರು ಒಂದಂಶವನ್ನು ಒತ್ತಿಹೇಳಿದರು : "ಕೆಲವು ದೇಶಗಳು ನಿರಂತರವಾಗಿ ಅಂತರರಾಷ್ಟ್ರೀಯ ಕಾನೂನಿನ ಉಲ್ಲಂಘನೆ ಮಾಡುತ್ತಲೇ ಬಂದಿವೆ" ಎಂದು. ಬಹಳ ಸತ್ಯದ ಮಾತು ಇದು. ತಮಗೆ ತಾವು ಕನ್ನಡಿ ಹಿಡಿದುಕೊಂಡ ಪ್ರಸಂಗ ಇದು. ಏಕೆಂದರೆ, ಒಬಾಮ ದೇಶವು ಕಾನೂನು ಉಲ್ಲಂಘಿಸುವಷ್ಟು ಬೇರಾವ ದೇಶವೂ ಮಾಡಿಲ್ಲ, ಮಾಡಲಾರದು. ಅಂಥ ದೇಶದೊಡನೆ ಸಖ್ಯ ಬೆಳೆಸುವಾಗ ಎಚ್ಚರಿಕೆ ಅಗತ್ಯ.

* * *

ದೇಶದ ರಾಜಧಾನಿ ದೆಹಲಿಯ ಬಳಿ ದಾದ್ರಿಯ ಮಾಂಸದ ಕತೆ ಮತ್ತು ಹತ್ಯೆಯ ಭೀಕರ ಘಟನೆ ಯಾರಿಗೆ ಗೊತ್ತಿಲ್ಲ! ದೇಶದ ಅಧ್ಯಕ್ಷರು ಬುದ್ಧಿ ಹೇಳಿದ ನಂತರ ಮೌನಿ ಪ್ರಧಾನಿ ಸ್ವಲ್ಪ ಬಾಯಿಬಿಟ್ಟರು. "ಅಧ್ಯಕ್ಷರ ಸೂಚನೆಯು ಅನುಸರಣೆಗೆ ಯೋಗ್ಯವಾಗಿದೆ" ಎಂಬ ಸರ್ಟಿಫಿಕೇಟ್ ನೀಡಿದರು. ಆದರೆ ಅನುಸರಣೆಗೆ ಕ್ರಮಗಳು ಏನು, ಅವನ್ನು ತಾವೇ ಕೈಗೊಳ್ಳುವರೇ, ಎಂಬುದನ್ನು ಹೇಳಲಿಲ್ಲ. ಗೃಹಮಂತ್ರಿ ರಾಜನಾಥ್ ಸಿಂಗ್ ಎಲ್ಲ ರಾಜ್ಯಗಳಿಗೂ ಪತ್ರ ಬರೆದು "ಮತೀಯ ಗಲಭೆಗಳು ಆಗದಂತೆ ನೋಡಿಕೊಳ್ಳಿ" ಎಂದು ತಿಳಿಸಿದರು. ಅದರ ತರುವಾಯದಲ್ಲಿ "ಹಿಂದುಗಳೆಲ್ಲ ಆಯುಧಗಳನ್ನಿಟ್ಟುಕೊಂಡು ಓಡಾಡಿ" ಎಂದು ಶ್ರೀರಾಮಸೇನೆಯ ಪ್ರಮೋದ ಮುತಾಲಿಕ್ ಸಲಹೆ ನೀಡಿದ್ದಾರೆ. ಬಿಹಾರದ ಚುನಾವಣೆಯಲ್ಲಿ ಗೆಲುವು ಸಾಧಿಸಲು "ಮಾಂಸದ ಪ್ರಕರಣಗಳು" ಅಗತ್ಯವೆಂದು ಯಾರೂ ಬಹಿರಂಗವಾಗಿ ಹೇಳಿಕೊಂಡಿಲ್ಲ, ಆದರೆ ಅದು ಜನತೆಗೆ ತಿಳಿಯದಿರುವ ಸಂಗತಿಯಲ್ಲ. ಬಾಲ್ಯದಿಂದ ಮಕ್ಕಳ ತಲೆಯಲ್ಲಿ ಅಪಥ್ಯ ಭಾವನೆಗಳನ್ನು ತುಂಬುವುದು, ಸುಳ್ಳು ಇತಿಹಾಸವನ್ನು ಹೇಳಿಕೊಡುವುದು, ಮತೀಯ ದ್ವೇಷವನ್ನು ಬೋಧಿಸುವುದು, ರಾಜಕೀಯ ದಾಳವನ್ನಾಗಿ ಮತೀಯ ಸಂಘರ್ಷಗಳನ್ನು ಬಳಸಿಕೊಳ್ಳುವುದು, ಎಲ್ಲಾ ಮಾಡಿ "ಗಲಭೆಗಳಾಗದಂತೆ ನೋಡಿಕೊಳ್ಳಿ" ಎಂದು ಆಜ್ಞೆ ಹೊರಡಿಸಿದರೆ ಏನನ್ನು ಸಾಧಿಸಿದಂತಾಗುತ್ತದೆ ಎಂಬುದನ್ನು ವಿಚಾರ ಮಾಡಬೇಕು. ಪ್ರಧಾನಿಯವರು "ಹಿಂದುಗಳು ಮತ್ತು ಮುಸಲ್ಮಾನರು ಬಡತನದ ವಿರುದ್ಧ ಹೋರಾಡಬೇಕು, ಪರಸ್ಪರರಲ್ಲಿ ಹೋರಾಡಬಾರದು" ಎಂಬ ಅಮೂಲ್ಯ ಮಾತು ಹೇಳಿದ್ದಾರೆ. ಅದಕ್ಕೆ ತಕ್ಕುದಾದ ವಾತಾವರಣ ಮತ್ತು ವ್ಯವಸ್ಥೆ ನಿರ್ಮಾಣ ಮಾಡಬೇಕಾದ್ದು ಅವರ ಸರ್ಕಾರದ ಹೊಣೆ. ತಮ್ಮ ಸೈನ್ಯಗಳಿಗೆ ನೀತಿಬೋಧೆ ಮಾಡಿ, ಅದನ್ನು ಅನುಷ್ಠಾನಕ್ಕೆ ತಂದರೆ ಪ್ರಧಾನಿಯವರ ಮಾತಿಗೆ ಮೌಲ್ಯವಿರುತ್ತದೆ. ದೆಹಲಿಯ ತಿಹಾರ್ ಜೈಲಿನಲ್ಲಿರುವ ಅಸೀಮಾನಂದ ಎಂಬ ವ್ಯಕ್ತಿ ಹೇಳಿರುವುದನ್ನು ಮಾನ್ಯ ಮೋದಿಯವರು ಗಮನಿಸಬೇಕು. ಅವರಿಗೆ ಚೆನ್ನಾಗಿ ಪರಿಚಯವಿರುವ ವ್ಯಕ್ತಿ ಈ ಅಸೀಮಾನಂದ. ಆತ ಭಯೋತ್ಪಾದನೆಯನ್ನು ಸಮರ್ಥಿಸಿಕೊಂಡಿದ್ದಾನೆ, ತನ್ನ ಮತ್ತು ಪ್ರಜ್ಞಾ ಸಿಂಗ್‌ರ ಮಾಲೆಗಾಂವ್, ಅಜ್ಮೀರ್, ಸಮಜೌತಾ ರೈಲು ಸ್ಫೋಟ, ಇತ್ಯಾದಿಗಳಿಗೆ ಶ್ರೀ. ಮೋಹನ್ ಭಾಗವತ್‌ರ ಸಮ್ಮತಿ ಇದ್ದಿತೆಂದು "ಕ್ಯಾರವಾನ್" ಪತ್ರಿಕೆಯ ಸಂದರ್ಶನದಲ್ಲಿ ಹೇಳಿದ್ದಾನೆ. ಒಟ್ಟಿನಲ್ಲಿ, ನಮ್ಮ ದೇಶದ ಸಾಂಸ್ಕೃತಿಕ ವಾತಾವರಣವು ಸಂಕೀರ್ಣವಾಗಿದೆ, ಅನೂಹ್ಯ ಪ್ರಮಾಣದಲ್ಲಿ ಕಲುಷಿತಗೊಂಡಿದೆ. ಪ್ರಧಾನಿಯವರು ಇದನ್ನೆಲ್ಲಾ ಕೂಲಂಕಷವಾಗಿ ಪರಿಶೀಲಿಸಿ ಯೋಗ್ಯವಾದ ಹಾದಿಯನ್ನು ತೋರಿಸಬೇಕು. ಅದಕ್ಕೆ ಅಗತ್ಯವಾದ ನಿಷ್ಠೆಯು ಅವರ ಈವರೆಗಿನ ಮಾತುಗಳಲ್ಲಿ ಪ್ರತಿಫಲಿತವಾಗಿಲ್ಲದಿರುವುದು ಶೋಚನೀಯ.

* * *

ದಾದ್ರಿ ಹತ್ಯೆಯ ನಂತರ ವೀರಾವೇಶದಿಂದ ಗುಡುಗಿರುವ ಲೋಕಸಭಾ ಸದಸ್ಯ ಸಂಗೀತ್ ಸೋಮ್ ಅವರ ವಿರುದ್ಧ ಮುಜಾಫರ್‌ನಗರದ ಹಿಂಸಾಪ್ರಕರಣ ಸಂಬಂಧದಲ್ಲಿ ಎರಡು ಮೊಕದ್ದಮೆಗಳಿವೆಯೆಂದು ವರದಿಯಾಗಿದೆ. ಅವು ಮುಂದೊಂದು ದಿನ ವಜಾ ಆದರೆ ಅಚ್ಚರಿಯಿಲ್ಲ. ಆದರೆ ಅವರ ಬಗೆಗಿನ "ದಿ ಹಿಂದು" ಪತ್ರಿಕೆಯ ಒಂದು ವರದಿಯು ಖಂಡಿತ ಅಚ್ಚರಿಯುಂಟುಮಾಡುತ್ತದೆ. ಶ್ರೀಯುತರು ದನದ ಮಾಂಸವನ್ನು ರಫ್ತು ಮಾಡುವ ಒಂದು ಕಂಪನಿಯ ನಿರ್ದೇಶಕರು ಹಾಗೂ ಷೇರುದಾರರಂತೆ. ಅದಕ್ಕೇನೂ ಆಕ್ಷೇಪವಿಲ್ಲ, ಏಕೆಂದರೆ ಅದನ್ನು ಕಾನೂನುಬದ್ಧವಾಗಿಯೇ ಮಾಡಿದ್ದಾರೆಂದು ಹೇಳಲಾಗಿದೆ. ಈ ಸಂದರ್ಭದಲ್ಲಿ ಮುಂಬೈನ ಒಂದು ಕಂಪನಿಯ ವ್ಯವಹಾರವನ್ನು ತನಿಖೆ ಮಾಡಬೇಕೆಂಬ ಸೂಚನೆ ಬಂದಿದೆ. ಆ ಕಂಪನಿ ಕಬೀರ್ ನಾಮಧೇಯ ಹೊಂದಿದೆ ಮತ್ತು ಯಾರೋ ಅಗರವಾಲ ಎಂಬುವವರು

ಅದರ ಮಾಲಿಕತ್ವದಲ್ಲಿ ಪ್ರಮುಖ ಸ್ಥಾನ ಪಡೆದಿದ್ದಾರೆ. ಅದು ಗೋಮಾಂಸವನ್ನು ರಫ್ತು ಮಾಡುವ ಕಂಪನಿ ಎಂದು ಹೇಳಲಾಗಿದೆ. ಇದರ ಸತ್ಯಾಸತ್ಯತೆಯನ್ನು ತನಿಖೆ ಮಾಡಿ ವಸ್ತುಸ್ಥಿತಿಯನ್ನು ಜನತೆಗೆ ತಿಳಿಸುವ ಕೆಲಸ ಆಗಬೇಕಾಗಿದೆ.

* * *

ಕೊಳಲು ಮಾಂತ್ರಿಕ ಶ್ರೀ. ಟಿ. ಆರ್. ಮಹಾಲಿಂಗಂ ಅವರ ಶ್ರೇಷ್ಠ ಶಿಷ್ಯ ವಿದ್ವಾನ್ ಎನ್. ರಮಣಿ ಅಕ್ಟೋಬರ್ ಮೊದಲ ವಾರದಲ್ಲಿ ಗತಿಸಿದರು. ಅವರಿಗೆ 'ಹೊಸತು' ಗೌರವಪೂರ್ವಕ ನಮನ ಸಲ್ಲಿಸುತ್ತದೆ. ನಿಗರ್ವಿಯಾಗಿದ್ದ ಈ ಕೊಳಲು ವಾದಕರು ಅತ್ಯುಚ್ಚ ಮಟ್ಟದ ಸಾಧಕರು. ಅವರ ಕಚೇರಿಗಳ ಅನುಭವವು ಚಿರಸ್ಮರಣೀಯ. ಬೆಂಗಳೂರಿನ ಅನನ್ಯ ಸಂಸ್ಥೆಯ ಸಭಾಂಗಣದಲ್ಲಿ ಅನೇಕ ವರ್ಷಗಳ ಹಿಂದೆ ಅವರದೊಂದು ಅದ್ಭುತ ಕಚೇರಿ ನಡೆಯಿತು. ಅಂದು ಡಾ॥ ಯು. ಆರ್. ಅನಂತಮೂರ್ತಿಯವರು ಉಪಸ್ಥಿತರಿದ್ದು ಕಚೇರಿ ಮುಕ್ತಾಯವಾದ ನಂತರ ಕಲಾವಿದರನ್ನು ಸನ್ಮಾನಿಸಿ ಆಲಂಗಿಸಿಕೊಂಡರು. ಇಬ್ಬರ ಕಣ್ಣುಗಳೂ ಒದ್ದೆ ಯಾಗಿದ್ದುದು ರಮಣಿಯವರ ಅಂದಿನ ಕಚೇರಿಯ ಮಹತ್ತರ ಮಜಲಿನ ದಾಖಲೆಯಾಗಿತ್ತು. ಅಂತಹ ಅದೆಷ್ಟು ಕಚೇರಿಗಳಲ್ಲಿ ಸಂಗೀತಾಸಕ್ತರಿಗೆ ರಸದೌತಣ ನೀಡಿದ್ದಾರೆ ವಿದ್ವಾನ್ ರಮಣಿ! ತಿರುವಯ್ಯಾರಿನ ತ್ಯಾಗರಾಜ ಆರಾಧನೆಗೆ ಸಾಮಾನ್ಯವಾಗಿ ತಪ್ಪಿಸಿಕೊಳ್ಳದ ರಮಣಿ ಎಲ್ಲರ ಕಣ್ಮಣಿಯಾಗಿದ್ದರು.

* * *

ಕರ್ನಾಟಕಕ್ಕೆ ಕಾಂಗ್ರೆಸ್ ಉಪಾಧ್ಯಕ್ಷ ರಾಹುಲ್ ಗಾಂಧಿ ಎರಡು ದಿನಗಳು ಭೇಟಿ ನೀಡಿದ್ದಾಯಿತು. ಹಿಂದಿರುಗಿಯೂ ಆಯಿತು. ಆತ್ಮಹತ್ಯೆ ಮಾಡಿಕೊಂಡ ರೈತರಿಗೆ ಈ ಸಂದರ್ಭದಲ್ಲಿ ಪರಿಹಾರ ಧನವನ್ನು ಹೆಚ್ಚಿಸಿದ್ದೂ ಆಯಿತು; ಮೃತನ ಪತ್ನಿಗೆ ಮಾಸಾಶನ ಪ್ರಕಟಿಸಿದ್ದೂ ಆಯಿತು. ಇಷ್ಟಕ್ಕಾಗಿ ಮುಖ್ಯಮಂತ್ರಿ ಸಿದ್ದರಾಮಯ್ಯ ರಾಜೀವ ಗಾಂಧಿ ಬರವಿಗೆ ಕಾಯಬೇಕಾಗಿತ್ತೇ ? ಅಲ್ಲಿಗೆ ಮುಗಿಯಿತು ರೈತರ ಎಲ್ಲ ಸಮಸ್ಯೆಗಳಿಗೆ ಪರಿಹಾರ. ಇನ್ನೊಂದು ಆತ್ಮಹತ್ಯೆ ಸರಣಿಯವರೆಗೆ ಸರಕಾರಕ್ಕೆ ಚಿಂತೆ ಇಲ್ಲ. ರೈತರು ಆತ್ಮಹತ್ಯೆಯ ಸಮಸ್ಯೆ ಪ್ರಾರಂಭವಾಗಿ ಹದಿನೈದು ವರ್ಷಗಳೇ ಆಯಿತು. ಕರ್ನಾಟಕ, ಮಹಾರಾಷ್ಟ್ರ ಈ ವಿಚಾರದಲ್ಲಿ ಮುಂದೆ ಇದೆ. ಈ ವರ್ಷ ಒಂದರಲ್ಲೇ ಸಾಕಷ್ಟು ದೊಡ್ಡ ಸಂಖ್ಯೆಯಲ್ಲಿ ರೈತರು ಸಾವಿಗೆ ಈಡಾಗಿದ್ದಾರೆ. ಆದರೆ ಸರಕಾರ ಮಾತ್ರ ಈ ಸಮಸ್ಯೆಗೆ ಖಾಯಂ ಪರಿಹಾರ ಕಾಣುವುದರಲ್ಲಿ ವಿಫಲಗೊಂಡಿದೆ. 'ಎಣ್ಣೆ ಬಂದಾಗ ಕಣ್ಣುಮುಚ್ಚಿಕೋ' ಅಂದ ಹಾಗೆ ತಾತ್ಕಾಲಿಕ ಪರಿಹಾರ ಒದಗಿಸಿ ಸರಕಾರ ಸುಮ್ಮನಿರುತ್ತದೆ. ರೈತರ ಬೆಳೆಗೆ ವೈಜ್ಞಾನಿಕವಾದ ಬೆಂಬಲ ಬೆಲೆ, ಮಧ್ಯವರ್ತಿಗಳ ದಲ್ಲಾಳಿ ತಗ್ಗಿಸುವುದಕ್ಕೆ ಕ್ರಮ, ರೈತರಿಗೆ ಅನುಕೂಲವಾಗುವಂಥ ಮಾರುಕಟ್ಟೆ ವ್ಯವಸ್ಥೆ ಇವು ಯಾವುದಕ್ಕೂ ಸರಕಾರ ಶಾಶ್ವತವಾದ ವ್ಯವಸ್ಥೆ ಮಾಡಿಲ್ಲ. ಮಾಡುವ ಸೂಚನೆಯೂ ಇಲ್ಲ. ಸಿದ್ದರಾಮಯ್ಯ ಸರಕಾರ ಕಬ್ಬು ಬೆಳೆಯುವ ರೈತರಿಗೆ ಸಂದಾಯವಾಗಬೇಕಾಗಿರುವ ಬಾಕಿ ಹಣದ ಬಗ್ಗೆ ಏನು ಕ್ರಮ ಕೈಗೊಂಡಿತು ಎನ್ನುವುದನ್ನು ಕಂಡಿದ್ದೇವೆ. ಸಕ್ಕರೆ ಕಾರ್ಖಾನೆ ಮಾಲೀಕರು ಕೋಟಿಗಟ್ಟಲೆ ಹಣ ನುಂಗಿ ಹಾಯಾಗಿದ್ದಾರೆ ಇವತ್ತೂ ಕೂಡ. ಕಬ್ಬು ಬೆಳೆದ ರೈತರು ಬೆಳೆಗೆ ಬೆಂಕಿಹಾಕಿ ಹಾರಿದ ಪ್ರಕರಣವೂ ನಡೆದಿದೆ. ಸರಕಾರ ಮಾತ್ರ ಇದುವರೆಗೆ ಈ ಸಮಸ್ಯೆಗೆ ಶಾಶ್ವತ ಪರಿಹಾರ ಒದಗಿಸಲು ಮುಂದಾಗಿಲ್ಲ. ಬಹುತೇಕ ಸಕ್ಕರೆ ಕಾರ್ಖಾನೆಗಳು ನಮ್ಮ ದೇಶದಲ್ಲಿ ರಾಜಕಾರಣಿಗಳ, ಸಚಿವರುಗಳ ಒಡೆತನದಲ್ಲಿರುವುದೇ ಇದಕ್ಕೆ ಕಾರಣ. ಸಕ್ಕರೆ ಕಾರ್ಖಾನೆಗಳ ದೊಡ್ಡ ಲಾಬಿಯೇ ಇದ್ದು ರೈತರನ್ನು ಸುಲಿಯುತ್ತಿದೆ. ಬಡತನ, ಸಾಲದ ಬಾಧೆಯಲ್ಲಿ ಮುಳುಗಿರುವ ರೈತರಿಗೆ ಆತ್ಮಹತ್ಯೆ ಅಂತಿಮ ದಾರಿಯಾಗುತ್ತಿರುವುದು ಆಶ್ಚರ್ಯ ವೇನಲ್ಲ. ಮೃತರ ಕುಟುಂಬಗಳಿಗೆ ಸಾಂತ್ವನ ಹೇಳಿ, ತಾತ್ಕಾಲಿಕ ಪರಿಹಾರ ಒದಗಿಸಿ ಕೈತೊಳೆದುಕೊಂಡರೆ ಸಮಸ್ಯೆ ಬಗೆಹರಿಯುವುದಿಲ್ಲ. ಇನ್ನಾದರೂ ಸರಕಾರ ರೈತರ ಸಮಸ್ಯೆಗಳಿಗೆ ಶಾಶ್ವತ ಪರಿಹಾರ ಒದಗಿಸಲು ಕ್ರಮ ವಹಿಸಲಿ.

* * *

ಬಹುಮತದ ದಬ್ಬಾಳಿಕೆ ಯಾವತ್ತೂ ಅಪಾಯಕಾರಿ. ಸ್ವತಂತ್ರ ಭಾರತದಲ್ಲಿ ಅದನ್ನು ನಾವು ಅನುಭವಿಸಿದ್ದೇವೆ. ತುರ್ತು ಪರಿಸ್ಥಿತಿಯ ಕಾಲಾವಧಿ ಇದಕ್ಕೆ ಒಳ್ಳೆಯ ಉದಾಹರಣೆ. ಈಗ ಅಧಿಕಾರದಲ್ಲಿರುವ ಭಾಜಪ ಲೋಕಸಭೆಯಲ್ಲಿ ಭಾರಿ ಬಹುಮತ ಪಡೆದಿದೆ ಎನ್.ಡಿ.ಎ. ಪರಿವಾರವೂ ಸೇರಿ. ಅಲ್ಲಿಂದಲೇ ಪ್ರಾರಂಭವಾಯಿತು ಹಿಂದುತ್ವವಾದಿಗಳ ಅಬ್ಬರ. ಸಂಘಪರಿವಾರದ ಸರಸಂಗ ಚಾಲಕ ಮೋಹನ್ ಭಾಗವತ್ ಹಿಂದೂ ಬಹುಸಂಖ್ಯಾತರು ಹೇಳಿದ ಹಾಗೆ ಕೇಳಿಕೊಂಡು ಅನ್ಯಮತೀಯರು ತೆಪ್ಪಗಿರಬೇಕು ಎಂದು ಎಚ್ಚರಿಸಿದ್ದಾರೆ. ಹಿಂದೂ ರಾಷ್ಟ್ರದ ಗುರಿ ಹೊಂದಿರುವ ಸಂಘಪರಿವಾರ ಈಗ ಒಂದೊಂದಾಗಿ ಬತ್ತಳಿಕೆಯಿಂದ ಬಾಣಬಿಡತೊಡಗಿದೆ. ಈ ಪರಿವಾರದ 'ಅಂಚು', ಇಂಗ್ಲಿಷ್‌ನಲ್ಲಿ 'ಫ್ರಿಂಜ್' ಎಂದು ಕರೆಯುತ್ತಿರುವ ಹೊಸದೊಂದು ಕಿಚ್ಚು. ಬುಸು ಗುಡುತ್ತಿದೆ. ಈಚೆಗೆ ಈ ಅಂಚು ಒಡಲನ್ನೇ ಆವರಿಸುವ ಲಕ್ಷಣಗಳನ್ನು ತೋರುತ್ತಿದೆ. ನಡೆಯುತ್ತಿರುವ ನೈತಿಕ ಪೊಲೀಸುಗಿರಿಯಿಂದ ಹಿಡಿದು ಜನ ಏನು ಓದಬೇಕು, ಏನು ಓದಬಾರದು, ಏನು ತಿನ್ನಬೇಕು, ಏನು ತಿನ್ನಬಾರದು, ಏನು ನೋಡಬೇಕು, ಏನು ನೋಡಬಾರದು ಎನ್ನುವವರೆಗೆ ಸಂಘಪರಿವಾರದ ಈ ಅಂಚು ನಿರ್ಧರಿಸುತ್ತಿದೆ. ಕಳೆದ ಹದಿನೆಂಟು ತಿಂಗಳಿಂದ ಅಂದರೆ ಮೋದಿ ಸರಕಾರ ಬಂದ ಮೇಲೆ ನಡೆದಿರುವ ಘಟನೆಗಳನ್ನು ಅವಲೋಕಿಸಿದರೆ ಇದು ಗೊತ್ತಾಗುತ್ತದೆ. ಉತ್ತರಪ್ರದೇಶದ ದಾದ್ರಿ ಘಟನೆ ಇತ್ತೀಚಿನದು. ಇದು ದೇಶದಲ್ಲಿ ಒಂದು ಬಗೆಯ ಭಯದ ವಾತಾವರಣವನ್ನೇ ಸೃಷ್ಟಿಸಿದೆ. ಈ ಹಿಂದೆ ಶಾಲಾಮಕ್ಕಳಿಗೆ ಪೋಷಕಾಂಶ ಇರುವ ಆಹಾರ ಒದಗಿಸಲು ಮೊಟ್ಟೆ ನೀಡುವ ಸರಕಾರದ ಯೋಜನೆ ಕುರಿತು ಎದ್ದ ಆಕ್ಷೇಪ, ಹುಯಿಲು ನೆನಪಿಸಿಕೊಳ್ಳಬಹುದು. ಈಗ ಕಟ್ಟಾ ಹಿಂದುತ್ವವಾದಿಗಳು ಮಾಂಸಾಹಾರದ ಮೇಲೆ ದಾಳಿ ಪ್ರಾರಂಭಿಸಿದ್ದಾರೆ. ಗೋರಕ್ಷಣೆ ಕುರಿತು ಗೋಳಿಡುವ ಇವರು ರೈತ ಗೊಡ್ಡು ದನಗಳನ್ನು ಏನು ಮಾಡಬೇಕು ಎನ್ನುವುದನ್ನು ಯೋಚಿಸುವುದಿಲ್ಲ. ಹಾಲುಕೊಡುವ ಹಸುವಿಗೇ ಸರಿಯಾಗಿ ಮೇವು ಒದಗಿಸಲಾಗದ ರೈತ ಬೇರೆ ಕೆಲಸಕ್ಕೆ ಬಾರದ ದನ ಕಟ್ಟಿಕೊಂಡು ಎಲ್ಲಿಗೆ ಹೋಗಬೇಕು. ಸಂಘಪರಿವಾರದವರು ಈ ದನಗಳನ್ನೆಲ್ಲ ತೆಗೆದುಕೊಂಡು ಹೋಗಿ ಸಾಕಲಿ ಬೇಕಾದರೆ. ಮೋದಿ ಸರಕಾರದ ಅಭಿವೃದ್ಧಿ ಯೋಜನೆಯಲ್ಲಿ ಅದನ್ನು ಸೇರಿಸಲಿ. ದನದ ಮಾಂಸದ ರಫ್ತಿನಿಂದ ಸಾಕಷ್ಟು ವಿದೇಶೀ ವಿನಿಮಯ ಬರುತ್ತಿದೆ. ಬಡಜನರಿಗೆ, ದಲಿತರಿಗೆ, ಹಾಗೂ ಇತರರಿಗೆ ಅದು ಆಹಾರವಾಗಿದೆ. ಹಾಗಿರುವಾಗ ಈ ಅಬ್ಬರ ಏಕೆ ? ಯಾರು ಏನು ತಿನ್ನಬೇಕು ಎನ್ನುವ ಅಧಿಕಾರ ಯಾರಿಗೂ ಇಲ್ಲ. ಅದು ಅವರವರ ಇಚ್ಛೆಗೆ ಬಿಟ್ಟಿದ್ದು. ಅದು ಮನುಕುಲದ ಮೂಲ ಹಕ್ಕು.

* * *

ಭಾರತ ಸರಕಾರ ಸಾಹಿತ್ಯ ಅಕಾಡೆಮಿ ಸ್ಥಾಪನೆ ಮಾಡಲು ನಿರ್ಧರಿಸಿದ್ದು ೧೯೫೨ರಲ್ಲಿ. ಅದು ಅಸ್ತಿತ್ವಕ್ಕೆ ಬಂದದ್ದು ಕಾರ್ಯಾರಂಭ ಮಾಡಿದ್ದು ೧೯೫೪ರಲ್ಲಿ. ಅದರ ಮೊದಲ ಆಡಳಿತ ಮಂಡಳಿಯಲ್ಲಿ ದೇಶದ ದಿಗ್ಗಜಗಳಿದ್ದರು. ಪ್ರಧಾನಿ ನೆಹರೂ ಅದರ ಮೊದಲ ಅಧ್ಯಕ್ಷರಾಗಿದ್ದರು. ಮಂಡಳಿಯಲ್ಲಿ ಸರ್ವಪಲ್ಲಿ ರಾಧಾಕೃಷ್ಣನ್, ಸಿ. ರಾಜಗೋಪಾಲಾಚಾರಿ, ಮೌಲಾನ ಅಬುಲ್ ಕಲಾಮ್ ಆಜಾದ್, ಕೆ. ಎಂ. ಮುನಿಷಿ, ಕೆ. ಎಂ. ಪಣಿಕ್ಕರ್, ಡಿ. ವಿ. ಗುಂಡಪ್ಪ , ಹುಮಾಯೂನ್ ಕಬೀರ್, ಸುನೀತಿಕುಮಾರ ಚಟರ್ಜಿ, ವಲ್ಲತ್ತೋಳ್ ನಾರಾಯಣ ಮೆನನ್, ಮಾಸ್ತಿ ವೆಂಕಟೇಶ ಐಯ್ಯಂಗಾರ್, ಮಹಾದೇವಿ ವರ್ಮ, ಜಾಕಿರ್ ಹುಸೇನ್ ಮೊದಲಾದ ವರಿದ್ದರು. ಆಗ ನೆಹರೂ ಅಕಾಡೆಮಿಯ ಸ್ವಾಯತ್ತತೆ ಕುರಿತು ಹೇಳಿದ ಮಾತು ಇಲ್ಲಿ ಉಲ್ಲೇಖಾರ್ಹ. 'ನಿಜ ಹೇಳಬೇಕೆಂದರೆ ಅಕಾಡೆಮಿ ಅಧ್ಯಕ್ಷನಾಗಿರುವ ನಾನು ಪ್ರಧಾನ ಮಂತ್ರಿ ಹಸ್ತಕ್ಷೇಪವನ್ನು ಬಯಸುವುದಿಲ್ಲ.' ಇದು ಅಂದು ಅಕಾಡೆಮಿ ಹೊಂದಿದ್ದ ಮೌಲ್ಯ. ಈಗ ಸಂಭವಿಸುತ್ತಿರುವ ವಿದ್ಯಮಾನಗಳನ್ನು ಗಮನಿಸಿದರೆ ಆ ಮೌಲ್ಯವೆಲ್ಲ ಅದೃಶ್ಯವಾಗಿದೆ ಎನಿಸುತ್ತಿದೆ. ಲೇಖಕರ ಅಭಿವ್ಯಕ್ತಿ ಸ್ವಾತಂತ್ರ್ಯದ ಮೇಲೆ ಒಂದೇ ಸಮನಾಗಿ ಹಲ್ಲೆ ನಡೆಯುತ್ತಿದ್ದಾಗ್ಯೂ ಅಕಾಡೆಮಿ ಅಸಹಾಯಕವಾಗಿದೆ. ಇತ್ತೀಚೆಗೆ ಹಿರಿಯ ಸಂಶೋಧಕ ಕಲ್ಬುರ್ಗಿ ಹತ್ಯೆ ಕುರಿತು ಅಕಾಡೆಮಿ ವಹಿಸಿರುವ ಮೌನ ಅದಕ್ಕೆ ಉದಾಹರಣೆ. ಹಲವು ಲೇಖಕರು ತಮಗೆ ನೀಡಲಾಗಿದ್ದ ಪ್ರಶಸ್ತಿಗಳನ್ನು ಹಿಂದಿರುಗಿಸಿದ್ದರೂ, ಕಾರ್ಯಕಾರಿ ಮಂಡಳಿಯ ಸದಸ್ಯರು ಪ್ರತಿಭಟನಾರ್ಥವಾಗಿ ರಾಜೀನಾಮೆ ಸಲ್ಲಿಸಿದ್ದರೂ ಅಕಾಡೆಮಿ ಮಾತ್ರ ಮೌನವಾಗಿದೆ. ಈಗೇನೊ ಊರು ಕೊಳ್ಳೆಯಾದ ಮೇಲೆ ಕೋಟೆ ಬಾಗಿಲು ಮುಚ್ಚಿದರು ಎನ್ನುವಂತೆ ಅಕಾಡೆಮಿ ಅಧ್ಯಕ್ಷರು ತುರ್ತು ಸಭೆ ಕರೆದಿದ್ದಾರೆ. ಪ್ರಾಯಶಃ ಸಾಹಿತ್ಯ ಅಕಾಡೆಮಿ ಕೂಡ ಪ್ರಧಾನ ಮಂತ್ರಿಯವರ ಮೌನದ ಹಾದಿ ತುಳಿದಿದೆಯೇನೊ. ■




### ಹೆಚ್ಚಿದ ಹಾಲು ಉತ್ಪಾದನೆ ಮತ್ತು ಬೆಲೆ ಕುಸಿತ

**ಕ**ಳೆದ ಐದು ವರ್ಷಗಳಿಂದ ಹಾಲು ಉತ್ಪಾದನೆಯು ತೀವ್ರವಾಗಿ ಹೆಚ್ಚುತ್ತಿದೆ, ರಾಜ್ಯದಲ್ಲಿ ಪ್ರತಿದಿನ ೭೦ ಲಕ್ಷ ಲೀಟರ್ ಹಾಲಿನ ಶೇಖರಣೆ ಯಾಗುತ್ತಿದ್ದು, ಸುಮಾರು ೩೫ ಲಕ್ಷ ಲೀಟರ್ ಹಾಲು ಉಪಭೋಗವಾಗುತ್ತಿದೆ. ಹಾಲಿನ ಪುಡಿ ತಯಾರಿಕೆ, ದೀರ್ಘಕಾಲ ಸಂಸ್ಕರಣೆ ಮಾಡಿ ಇಡಬಹುದಾದ ಹಾಲು ಹಾಗೂ ಇತರ ಹಾಲಿನ ಉಪ ಉತ್ಪಾದನೆ ಮಾಡಿದ ಬಳಿಕವು ಹೆಚ್ಚುವರಿಯಾಗಿ ಉಳಿಯುತ್ತಿರುವ ಹಾಲಿಗೆ ಮಾರುಕಟ್ಟೆಯನ್ನು ಒದಗಿಸಲಾಗದ ಸ್ಥಿತಿಯಿಂದಾಗಿ ಹಾಲಿನ ಬೆಲೆಯಲ್ಲಿ ತೀವ್ರ ಇಳಿಕೆಯಾಗಿದೆ. ಈ ಮೊದಲು ಲೀಟರೊಂದಕ್ಕೆ ರೂ. ೨೨ ಹಾಗೂ ಸಹಾಯಧನ ರೂ. ೪ ನೀಡಲಾಗಿದ್ದು, ಪ್ರಸ್ತುತ ಲೀಟರಿಗೆ ರೂ. ೧೭ ಹಾಗೂ ಸಹಾಯಧನ ರೂ. ೪ ನೀಡಲಾಗುತ್ತಿದೆ, ಹಣ ಸಂದಾಯವು ಸಕಾಲದಲ್ಲಿ ಆಗುತ್ತಿಲ್ಲ, ಜೊತೆಗೆ ಸಹಾಯಧನ ಪಡೆಯಲು ಕನಿಷ್ಠ ಆರು ತಿಂಗಳಿಂದ ವರ್ಷವೇ ಬೇಕಾಗುತ್ತದೆ. ಅಕಾಲಿಕ ಮಳೆಯಿಂದಾಗಿ ಆರ್ಥಿಕ ಸಂಕಷ್ಟದಲ್ಲಿ ಇರುವ ರೈತರಿಗೆ ಗಾಯದ ಮೇಲೆ ಬರೆ ಎಳೆದಾಗ ಉಂಟಾಗುವ ನೋವಿನಷ್ಟೆ ಸಮಸ್ಯೆ ತೀವ್ರವಾಗಿದೆ. ಹಾಲಿನ ಬೆಲೆ ಪರಿಷ್ಕರಣೆ ಮಾಡದಿರುವುದು, ಹಾಲಿನ ಅಧಿಕ ಉತ್ಪಾದನೆಗೆ ಹಾಗೂ ಹಾಲಿನ ಕೊಬ್ಬಿನ ಪ್ರಮಾಣವನ್ನು ಹೆಚ್ಚಿಸಲು ನೆರವಾಗುವ ಬೂಸಾ, ಹಿಂಡಿ, ವಿಟಮಿನ್ ಮಾತ್ರೆ ಹಾಗೂ ಹಾರ್ಮೋನ್‌ಗಳ ಉತ್ಪಾದನೆಗೆ ಸಹಕರಿಸುವ ಔಷಧಿಗಳ ಬೆಲೆ ಹೆಚ್ಚುತ್ತಿರುವುದು ಒಂದುಕಡೆಯಾದರೆ ಮತ್ತೊಂದೆಡೆ ಮಿಶ್ರತಳಿ ಹಸುಗಳು ಕಾಲುಬಾಯಿ ಜ್ವರ, ಕೆಚ್ಚಲಬಾವು, ಕೆಚ್ಚಲಹುಣ್ಣು ಇವೇ ಮೊದಲಾದ ರೋಗಗಳಿಗೆ ಬಲಿಯಾಗುತ್ತಿವೆ. ಹಾಗೆಯೇ ಹೆಚ್ಚುತ್ತಿರುವ ಬಿಸಿಲಿನ ತಾಪಮಾನದಿಂದಾಗಿ ಮಾರಣಾಂತಿಕ ರೋಗಗಳಿಗೆ ಬಲಿಯಾಗುತ್ತಿರುವ ಮಿಶ್ರ ತಳಿಯ ಜಾನುವಾರುಗಳಿಗೆ ರೈತರು ಚಿಕಿತ್ಸೆ ಕೊಡಿಸಲಾರದ ಸ್ಥಿತಿಯಲ್ಲಿದ್ದಾರೆ. ಗ್ರಾಮೀಣ ಸಮುದಾಯಗಳಿಗೆ ಕಳೆದ ಒಂದು ದಶಕದಿಂದ ಸುಸ್ಥಿರ ಜೀವನ ಆಧಾರವನ್ನು ಒದಗಿಸಿರುವ ಹೈನುಗಾರಿಕೆಯನ್ನು ಬಲವರ್ಧಿಸಲು ಹಾಲಿಗೆ ಸ್ಪರ್ಧಾತ್ಮಕ ಬೆಲೆ, ಸಹಾಯಧನ, ಪಶುಗಳಿಗೆ ಉಚಿತ ಚಿಕಿತ್ಸೆ, ರಿಯಾಯಿತಿ ದರದಲ್ಲಿ ಹಿಂಡಿ–ಬೂಸಾಗಳ ಮಾರಾಟ, ವಿಮಾ ಸೌಲಭ್ಯ, ಬಡ್ಡಿರಹಿತ ಸಾಲ ಸೌಲಭ್ಯವನ್ನು ಒದಗಿಸುವುದು, ಕಲಬೆರಕೆ ಹಾಲನ್ನು ತಡೆಯುವುದು ಜೊತೆಗೆ ಹೊಸ ಮಾರುಕಟ್ಟೆಗಳ ಅನ್ವೇಷಣೆ ಹಾಗೂ ಹಾಲಿನ ಉಪ ಉತ್ಪನ್ನಗಳ ತಯಾರಿಕೆಗೆ ಆದ್ಯತೆ ನೀಡುವಲ್ಲಿ ಹಾಲು ಒಕ್ಕೂಟಗಳು, ರಾಜ್ಯ, ಕೇಂದ್ರ ಸರ್ಕಾರಗಳು ಸಾಂಘಿಕ ಪ್ರಯತ್ನ ಮಾಡುವುದರೊಂದಿಗೆ ಗ್ರಾಮೀಣ ನಿವಾಸಿಗಳ ಬದುಕಿನಲ್ಲಿ ಆತ್ಮವಿಶ್ವಾಸವನ್ನು ತುಂಬುವ ಕಾರ್ಯವನ್ನು ಮಾಡಬೇಕಾಗಿದೆ. ಕ್ಷೀರಭಾಗ್ಯ ಯೋಜನೆ ಅಡಿಯಲ್ಲಿ ಶಾಲಾ ವಿದ್ಯಾರ್ಥಿಗಳಿಗೆ ವಾರದಲ್ಲಿ ಮೂರು ದಿನ ವಿತರಿಸುವ ಹಾಲಿನ ಪುಡಿ ಆಧಾರಿತ ಹಾಲಿಗೆ ಬದಲಾಗಿ ಸ್ಥಳೀಯ ಹಾಲು ಶೇಖರಣಾ ಕೇಂದ್ರಗಳಲ್ಲಿ ದೊರೆಯುವ ತಾಜಾ ಹಾಲನ್ನು ರಜಾದಿನಗಳನ್ನು ಹೊರತುಪಡಿಸಿ ಉಳಿದ ಎಲ್ಲ ದಿನಗಳಲ್ಲಿಯೂ ವಿತರಿಸುವುದರಿಂದ ಮಕ್ಕಳ ಆರೋಗ್ಯವು ವೃದ್ಧಿಸುತ್ತದೆ ಹಾಗೂ ಹೆಚ್ಚುವರಿ ಹಾಲಿಗೆ




ಮಾರುಕಟ್ಟೆಯನ್ನು ಒದಗಿಸಿ ಹೈನುಗಾರಿಕೆಯನ್ನು ಜೀವನೋಪಾಯಕ್ಕೆ ಅವಲಂಬಿಸಿರುವವರ ಹಿತವನ್ನು ಕಾಪಾಡಲು ನೆರವಾಗುತ್ತದೆ. ಕ್ಷೀರ ಕ್ರಾಂತಿಯ ಪಿತಾಮಹ ಡಾ॥ ವರ್ಗಿಸ್ ಕುರಿಯನ್ ಅಭಿಪ್ರಾಯ ಪಟ್ಟಿರುವಂತೆ "ಸರ್ವರ ಸಮೃದ್ಧಿಗಾಗಿ ಹಾಲಿನ ಬೃಹತ್ ಪ್ರಮಾಣದ ಉತ್ಪಾದನೆ ಹಾಗೂ ಬೃಹತ್ ಪ್ರಮಾಣದ ಅನುಭೋಗ ಒಟ್ಟಿಗೆ ಸಾಗಬೇಕು" ಈ ನಿಟ್ಟಿನಲ್ಲಿ ಎಲ್ಲ ಪಾಲುದಾರರು ಕೈಜೋಡಿಸಿ ಅಮೃತ ನೀಡುವ ಹೈನುಗಾರರ ಸಂಕಷ್ಟವನ್ನು ನಿವಾರಿಸುವುದು ಅತಿ ಅವಶ್ಯಕ.

ಹಾಸನ **_ಭಾಷಾ ಕೆ._**

### ಅಂತರಂಗದ ಒಳಗಿನಿಂದ...

"ಹೊಸತು"ವಿನ ಈ ತಿಂಗಳು ಅಂಕಣದ ಸಂಪಾದಕೀಯ ಬರಹದಲ್ಲಿ ಹಿಂದಿನ ರಾಷ್ಟ್ರಾಧ್ಯಕ್ಷ ಅಬ್ದುಲ್ ಕಲಾಂ ಅವರ ಅಗಲಿಕೆಯ ಕುರಿತಾಗಿ ನಿರೂಪಿಸಿದ ಮೃತ್ಯುವಿನ ಎಂಗಡಣ ವಿಧಾನ – ಅಂದರೆ "ಆಪತ್ತೋ", "ಸಂಪತ್ತೋ" ಎಂದೆಂಬ ವಿಭಜನೆ ಹೊಸ ರೀತಿಯಲ್ಲಿ ಇದ್ದುದು ಖುಷಿ ಎನಿಸಿತು. ಆದರೆ ಇವರ ಮರಣವನ್ನು "ಆಪತ್ತು" – ಎಂದು ಪರಿಗಣಿಸಿದ ಕ್ರಮ ನನ್ನ ಮನಸ್ಸನ್ನು ಒಡಂಬಡಿಸಲಿಲ್ಲ. ಸಂಪಾದಕೀಯದಲ್ಲಿ ಭಾರತದ ಪ್ರಥಮ ಪ್ರಜೆಯಾಗಿದ್ದ ಶ್ರೀಯುತರ ಮೇಲೆ ಒದಗಿಸಲಾದ ಸವಲತ್ತುಗಳನ್ನು ಅವರು ಸಮರ್ಪಕ ವಾಗಿ ಬಳಸಲಿಲ್ಲ, ಅಂತಹ ಅನಿವಾರ್ಯತೆ ಅವರಿಗೆ ಒದಗಿಬರಲಿಲ್ಲ. ಬಂದಿದ್ದರೆ ಅಲ್ಲೇ ಇದ್ದ ಸೌಕರ್ಯ ತಾನಾಗಿಯೇ ಅವರೆಡೆಗೆ ಬರುತ್ತಿತ್ತು. ಹಾಗಿದ್ದರೆ ಹೇಳಿಕೊಳ್ಳುವಂತಹ ಯಾವುದೇ ಕಾಯಿಲೆ ಕಸಾಲೆ ಗಳಿಂದ ಮುಕ್ತರಾಗಿದ್ದ ಕಲಾಂ ಅವರು ಸುಖೀ ಮರಣ ಅನುಭವಿಸಿದರು.

ಹೆಣಗಳನ್ನುರುಳಿಸಿದವರು ಜೀವ ಉಳಿಸಿಯಾರೆ ? ಎನ್ನುವ ಡಾ॥ ಬಿ. ಶ್ರೀನಿವಾಸ ಕಕ್ಕಿಲ್ಲಾಯರ ಲೇಖನ ಎರಡೆರಡಾವರ್ತಿ ಓದಿಸಿಕೊಂಡರೆ ಕನ್ನಡಕ್ಕಾಗಿ ನಿರಂತರ ಹೋರಾಟಗೈದ, ಕರ್ನಾಟಕ ಏಕೀಕರಣ ಚಳುವಳಿಯ ಪ್ರಮುಖ ಮುಂದಾಳುವೂ ಆಗಿದ್ದ ಕಾಸರಗೋಡಿನ ಹೆಮ್ಮೆಯ ಕವಿ ಕಯ್ಯಾರ ಕಿಞ್ಞಣ್ಣ ರೈಗಳ ಸ್ಮರಣೆ ಅಭೂತಪೂರ್ವ.

ಕಾಸರಗೋಡು **_ಕೀರಿಕ್ಕಾಡು ವನಮಾಲಾ ಕೇಶವಭಟ್ಟ_**

### ಪರಿಸರ

ಪರಿಸರ ಎಂದರೆ ನಮ್ಮ ಸುತ್ತಲಿರುವ ಜಗತ್ತಿನ ವಾತಾವರಣ, ವಾತಾಯನ. ಇವು ಭೌತಿಕ, ಭೌಗೋಳಿಕ, ಆರ್ಥಿಕ ಹಾಗೂ ಸಾಮಾಜಿಕ ಪರಿಸರ ಎಂಬ ನಾಲ್ಕು ಬಗೆಗಳಲ್ಲಿವೆ. ಪರಸ್ಪರ ಜೀವಿಗಳ ಮತ್ತು ಅವುಗಳ ಪರಿಸರಗಳ ನಡುವಿನ ಅಧ್ಯಯನ ವನ್ನು 'ಪರಿಸರ ವಿಜ್ಞಾನ' ಎಂದು ಹೇಳುವರು.

ಇಂಗಾಲ ಚಕ್ರ, ಸಾರಜನಕ ಚಕ್ರ, ಆಮ್ಲಜನಕ ಚಕ್ರ ಹಾಗೂ ಜಲಜನಕ ಪೂರೈಕೆಗಳಿಂದಾಗಿ ಸಸ್ಯಗಳು, ಪ್ರಾಣಿಗಳು ಮತ್ತು ಅವುಗಳ ಪರಿಸರಕ್ಕೆ ಪರಸ್ಪರ ಸಂಬಂಧವಿದ್ದು, ಅವುಗಳ ನಡುವೆ ಸಮತೋಲನ ಏರ್ಪಟ್ಟಿದೆ.

ಪರಿಸರದ ಪ್ರಾಣಿಗಳ ಸಂರಕ್ಷಣೆ ಬಲು ಮುಖ್ಯ. ನೀರು ನಮ್ಮ ಪರಿಸರದ ಒಂದು ಮುಖ್ಯ ಘಟಕ. ಪರಿಸರದ ಒಂದು ದೊಡ್ಡ ಘಟಕ ಅರಣ್ಯ; ವೃಕ್ಷಗಳು ನಮ್ಮ ಗೆಳೆಯರಂತೆ. 'ಕಾಡು ಉಳಿಸಿ, ಪರಿಸರ ರಕ್ಷಿಸಿ' ಎಂಬ ಮಾತು ಬಹಳ ಅರ್ಥಗರ್ಭಿತವಾದುದು.

ಮಲಿನತೆ ಒಂದು ಶಾಪ. ಪರಿಸರ ಮಲಿನ ವಾಗುವುದರಿಂದ ಮನುಷ್ಯನ ಜೀವನ ಕಷ್ಟಕರ ವಾಗುತ್ತದೆ. ಪರಿಸರದ ಗುಣಮಟ್ಟದ ಅಪಮೌಲ್ಯ ಎಂದರೆ ಗಾಳಿ, ನೀರು ಮತ್ತು ಸಸ್ಯಗಳ ಗುಣಮಟ್ಟದ ನಾಶ. ಅರಣ್ಯ ನಾಶವಾದರೆ ಪರಿಸರವೇ ನಾಶವಾದಂತೆ.

ಗಾಳಿಯನ್ನು ಮಲಿನಗೊಳಿಸುವ ಕಾರಕಗಳೆಂದರೆ ಹೊಗೆ, ಧೂಳು, ಬೂದಿ, ಕೆಲವು ಪರಾಗರೇಣುಗಳು, ವಿಷಾನಿಲಗಳು. ಗಾಳಿ ಅಶುದ್ಧವಾಗುವುದನ್ನು ವಾಯು ಮಾಲಿನ್ಯ ಎನ್ನುವರು. ನೀರು ಮಲಿನವಾಗುವುದನ್ನು ಜಲಮಾಲಿನ್ಯ ಎನ್ನುವರು. ಜಲಮಾಲಿನ್ಯದಿಂದ ರೋಗರುಜಿನಗಳು ಹೆಚ್ಚಾಗುತ್ತವೆ. ಶಬ್ದ ಮಾರಕವಾಗ ಬಾರದು ಏಕೆಂದರೆ ಅದು ಅತಿಯಾದರೆ ಅಪಾಯಕಾರಿ.

ನಾವು ಪರಿಸರ ಮಾಲಿನ್ಯದ ನಿವಾರಣೆ ಕಡೆಗೆ ಹೆಚ್ಚು ಗಮನಹರಿಸಬೇಕು. ಮನೆಯ ಒಳಗೆ-ಹೊರಗೆ ಚೊಕ್ಕಟವಾಗಿಡಲು ಯತ್ನಿಸಬೇಕು. ಕಸ-ಕಡ್ಡಿಗಳನ್ನು ಕಾಂಪೋಸ್ಟ್ ಪಿಟ್‌ಗಳಲ್ಲಿ ಹಾಕಬೇಕು. ಕಾರ್ಖಾನೆ ವಾಸಸ್ಥಳದಿಂದ ದೂರವಿರಬೇಕು. ಬಾವಿಯೊಳಗೆ ಕಸಬೀಳದಂತೆ ಎಚ್ಚರವಹಿಸಬೇಕು.

ಮರಗಳನ್ನು ಮನೆ, ಶಾಲೆ, ಕಛೇರಿಗಳ ಮುಂದೆ, ರಸ್ತೆಬದಿಗಳಲ್ಲಿ ಬೆಳೆಸಿ ಪರಿಸರದ ನೈರ್ಮಲ್ಯವನ್ನು ಕಾಪಾಡಬಹುದು. ಸ್ವಚ್ಛತೆಯಿಂದ ಮನಸ್ಸಿನ ಆರೋಗ್ಯ ಮತ್ತು ದೇಹಾರೋಗ್ಯ ಸುಧಾರಿಸುವುದು.

***ಡಿ. ಗಾಯಿತ್ರಿ***

**ಗೋಮಾತೆಯನ್ನು ತಿಂದವನನ್ನು ನಾವು ತಿನ್ನುತ್ತೇವೆ !**

ಗೋಹತ್ಯೆ ನಿಷೇಧ ಕಾನೂನು ತರುವುದು, ಗೋವನ್ನು ಮಾಂಸಕ್ಕಾಗಿ ಬಳಸುವುದು ಅಪರಾಧ ವೆನ್ನುವುದು, ಗೋವನ್ನು ವಧಿಸಿದರೆ ಅದು ಅಪರಾಧ ವಷ್ಟೇ ಅಲ್ಲ ಗೋವನ್ನು ವಧಿಸಿದವನನ್ನು ನಾವು ವಧಿಸುತ್ತೇವೆನ್ನುವಂಥ ವಿಕೃತ ಧೋರಣೆ ಎಷ್ಟು ಸರಿ ?

ಇತ್ತೀಚೆಗೆ ದಾದ್ರಿಯಲ್ಲಿ ಮೊಹಮ್ಮದ್ ಇಖ್ಲಾಕ್ ಶಫಿಯವರನ್ನು ಗೋವನ್ನು ವಧಿಸಿ ಅದರ ಮಾಂಸವನ್ನು ತಿಂದಿರುವನೆಂಬ ಅನುಮಾನದ ಮೇಲೆಯೇ ಆತನನ್ನು ಪಟ್ಟಭದ್ರರು ವಧಿಸಿಬಿಟ್ಟರಲ್ಲ ಇದೆಂಥ ಕ್ರೌರ್ಯ ? ಯಾವುದೇ ಧರ್ಮದಲ್ಲಿ ದಯೆ ಇರಬೇಕು ಭಯವಿರಬಾರದು. ಸಸ್ಯಾಹಾರವೋ ಮಾಂಸಾಹಾರವೋ ಅದು ಅವರವರ ಆಹಾರದ ಕ್ರಮವೇ ಹೊರತು ಯಾವುದೂ ಮೇಲಲ್ಲ, ಕೀಳಲ್ಲ. ಅಷ್ಟಕ್ಕೂ ಇಂಥವರು ಇಂಥದ್ದೇ ಆಹಾರವನ್ನು ಸೇವಿಸ ಬೇಕೆಂದು ಹೇಳಲು ಯಾರಿಗೂ ಅಧಿಕಾರವಿಲ್ಲವಲ್ಲ. ಇಲ್ಲಿ ಪ್ರಶ್ನೆ ಇರುವುದು ಮಾಂಸಾಹಾರ ತಪ್ಪೇ ಅಥವಾ ಸರಿಯೇ ? ಎಂಬುದು. ಒಂದುವೇಳೆ ಮಾಂಸಾಹಾರ ಸರಿ ಎಂದಾದರೆ ಗೋವಿನ ಮಾಂಸವೇಕೆ ತಪ್ಪು ? ಗೋವಿನದ್ದಾಗಲೀ ಯಾವುದೇ ಪ್ರಾಣಿಯ ಮಾಂಸ ವನ್ನಾಗಲೀ ತಿನ್ನುವವರನ್ನು ಇಷ್ಟೊಂದು ನಿಕೃಷ್ಟವಾಗಿ ಕಾಣುವುದು ಖಂಡಿತಾ ಸರಿಯಲ್ಲ.

ಮಾಂಸಾಹಾರದಲ್ಲಿ ಯಾವುದೇ ಪ್ರಾಣಿಯ ಮಾಂಸವನ್ನಾದರೂ ಸಮಾನವಾಗಿ ಗೌರವಿಸಲೇ ಬೇಕಾಗುತ್ತದೆ. ಮಾಂಸಾಹಾರದಲ್ಲಿ ಗೋವಷ್ಟೇ ಪವಿತ್ರ ವಾದದ್ದೆಂದರೆ ಉಳಿದ ಕುರಿ ಕೋಳಿ ಕೋಣಗಳೆಲ್ಲ ನಿಕೃಷ್ಟವಾದವುಗಳೇ ?

ಇವೆಲ್ಲ ಇತ್ತೀಚಿನ ಕೆಲವು ವಿಕೃತ ಮನಸ್ಸುಗಳ ಅತಿರೇಕವಷ್ಟೆ. ಧಾರ್ಮಿಕ ಆಚರಣೆಗಳನ್ನು ಇನ್ನೊಂದು ಧರ್ಮದವರ ಮೇಲೆ ಒತ್ತಾಯಪೂರ್ವಕವಾಗಿ ಹೇರುವುದು. ಇವೆಲ್ಲ ಇತ್ತೀಚೆಗೆ ಹಿಂದುತ್ವದ ಹೆಸರಿನಲ್ಲಿ ಹಲವು ಬಗೆಯ ಹೇರಿಕೆಗಳಾಗಿವೆ. ಇಂಥ ಮನಸ್ಥಿತಿ ಗಳನ್ನು ನಿಯಂತ್ರಿಸದಿದ್ದರೆ ಭಾರತವೂ ಸಹ ಕೋಮುವಾದಿ ರಾಷ್ಟ್ರವಾಗುವುದರಲ್ಲಿ ಆಶ್ಚರ್ಯವೇ ಇಲ್ಲ.

*ಕನಕಗಿರಿ* ***ವೆಂಕಟೇಶ ಕೆ. ಜನಾದ್ರಿ***

ಹೊಸತು ಮಾಸಪತ್ರಿಕೆಯ ಅಕ್ಟೋಬರ್ ಸಂಚಿಕೆಯಲ್ಲಿ 'ಈ ತಿಂಗಳು' ಎಂಬ ಶೀರ್ಷಿಕೆಯ ಕೆಳಗೆ ಉಚ್ಚನ್ಯಾಯಾಲಯದ ಗುಲ್ಬರ್ಗಾ ಪೀಠ, ಗುರುಮಠಕಲ್‌ನಲ್ಲಿ ಮೋಹನರೆಡ್ಡಿ ಎನ್ನುವವರು ಕಟ್ಟುತ್ತಿರುವ ಕಟ್ಟಡವು ವಾಸಗೃಹಕ್ಕೆಂದು ಲೈಸೆನ್ಸ್ ಪಡೆದು ವಾಣಿಜ್ಯ ಸಂಕೀರ್ಣವನ್ನು ಕಟ್ಟುತ್ತಿರುವು ದಾಗಿಯೂ; ಅದನ್ನು ಪ್ರಶ್ನಿಸಿ ಗುಲ್ಬರ್ಗಾ ಜಿಲ್ಲಾ ಕರವೇ ಘಟಕವು ರಿಟ್ ಅರ್ಜಿಯನ್ನು ದಾಖಲು ಮಾಡಿದರು ಎಂದೂ, ಆ ರಿಟ್ ಅರ್ಜಿಯನ್ನು ವಿಚಾರಣೆಗೆ ತೆಗೆದುಕೊಂಡ ನ್ಯಾಯಪೀಠ 'ಈ ಶಾಸನೋಲ್ಲಂಘನೆ ಮಾಡಿದವರ ಮೇಲೆ ನೀವೇಕೆ ಈ ರಿಟ್ ಅರ್ಜಿ ದಾಖಲು ಮಾಡಿದಿರಿ' ಎಂದು ಕೇಳಿದರಂತೆ. ಅವರು ಯಾವ ಉತ್ತರವನ್ನು ಹೇಳಿದರೋ ? ನಿಮ್ಮ ವರದಿಯಲ್ಲಿ ತಿಳಿಸಿಲ್ಲ. ಆದರೆ ನ್ಯಾಯಪೀಠ ಅರ್ಜಿದಾರರ ವಕೀಲರನ್ನು ತರಾಟೆಗೆ ತೆಗೆದುಕೊಂಡರು ಎಂದು ಉಚ್ಚನ್ಯಾಯಾಲಯದ ನ್ಯಾಯಮೂರ್ತಿಗಳನ್ನು ಟೀಕಿಸಿದ್ದೀರಿ.

ಈ ಕೇಸಿನ ಸಂಗತಿಗಳೇನು ? ಅರ್ಜಿದಾರರು ಮಾಡಿಕೊಂಡ ಪರಿಹಾರದ ಪ್ರಾರ್ಥನೆಯೇ ? ಎಂಬುದು ಪೂರ್ಣ ಗೊತ್ತಿಲ್ಲದೆ; ನ್ಯಾಯಾಧೀಶರ ಈ ವರ್ತನೆ ಸರಿಯೆ ? ಅಲ್ಲವೇ ? ಎಂಬುದನ್ನು ಹೇಳುವುದು ಕಷ್ಟ. ಆದರೆ ನಿಮ್ಮ ಟೀಕೆ-ಟಿಪ್ಪಣಿಯನ್ನು ಓದುವು ದರಿಂದ ಅವರ ದೃಷ್ಟಿ ಸರಿಯೇ ? ಅಲ್ಲವೇ ಎಂದು ಖಚಿತವಾಗಿ ಹೇಳಲಾಗದು. ಆದರೂ ಒಂದು ಮಾತನ್ನು ಹೇಳಬಹುದು. ಮನೆ ಕಟ್ಟಿಸಲಿರುವ ಆ ಮಾಲಕರು ಕಟ್ಟಡ ನಿರ್ಮಾಣ ನಿಯಮಗಳನ್ನು ಉಲ್ಲಂಘಿಸಿದ್ದಾರೆ ಎಂಬುದಾಗಿ ಕಾಣುತ್ತದೆ. ಈ ಮಾತು ನಿಜವಾದರೆ ನಿಯಮೋಲ್ಲಂಘನೆ ಮಾಡಿದವರ ವಿರುದ್ಧವಾಗಿ ಮಹಾನಗರ ಪಾಲಿಕೆಯ ಅಧಿಕಾರಿ ಗಳಿಗೆ ತಿಳಿಸಿ ತಕ್ಕ ಕ್ರಮ ಕೈಗೊಳ್ಳಬೇಕೆಂದು ಮನವಿ ಮಾಡಬೇಕು. ಆ ಮನವಿಯಂತೆ ಸಂಬಂಧಪಟ್ಟ ಮಹಾನಗರ ಪಾಲಿಕೆಯ ಅಧಿಕಾರಿಗಳು ಸ್ಪಂದಿಸ ದಿದ್ದರೆ ಆಗ ನ್ಯಾಯಾಲಯಕ್ಕೆ ರಿಟ್ ಅರ್ಜಿ ದಾಖಲು ಮಾಡಬಹುದು. ಒಂದು ವೇಳೆ ನಿಮ್ಮ ಮನವಿಗೆ ಉತ್ತರವನ್ನು ಕೊಡದೆ ಯಾವ ಕ್ರಮಗಳನ್ನು ಕೈಗೊಳ್ಳದಿದ್ದರೆ, ಆಗ ಸರ್ಕಾರಿ ಅಧಿಕಾರಿ ತನ್ನ ಕರ್ತವ್ಯವನ್ನು ಮಾಡಬೇಕೆಂದು ನಿರ್ದೇಶನ (Writ of mandamus) ಕೊಡಬಹುದು. ಸಂಬಂಧಪಟ್ಟ ವರಿಗೆ ನೇರವಾಗಿ ಸೂಚಿಸಲು ಉಚ್ಚ ನ್ಯಾಯಾಲಯಕ್ಕೆ ಬರುವುದಿಲ್ಲ. ಏಕೆಂದರೆ Writ of mandamus ಕೊಡಬೇಕಾದರೆ Demand and Rejection ಆಗಿರ ಬೇಕು ಹಾಗೂ ಯಾವ ಕಾನೂನನ್ನು ಉಲ್ಲಂಘಿಸ ಲಾಗಿದೆಯೋ ಆ ಕಾನೂನಿನಲ್ಲಿಯೇ ಪರಿಹಾರ ಮಾರ್ಗವನ್ನು ಹುಡುಕಿ ಸಂಬಂಧಪಟ್ಟವರಿಗೆ ಅಧಿಕಾರ ವನ್ನು ಕೊಡಲಾಗಿದೆ. ಹೀಗೆ Alternative remedy ಇರುವಾಗ ರಿಟ್ ಆಜ್ಞೆಯನ್ನು ಕೊಡಲಾಗುವುದಿಲ್ಲ. ಈ ದೃಷ್ಟಿಯಿಂದ ನ್ಯಾಯಮೂರ್ತಿಗಳ ಅಭಿಪ್ರಾಯ ಈ ದೃಷ್ಟಿಯಿಂದ ಕಾನೂನಿಗೆ ಸಮ್ಮತವಾಗಿದೆ. ಇದನ್ನು ನಿಮ್ಮ ಓದುಗರಿಗೆ ತಿಳಿಸಬೇಕಾಗಿ ವಿನಂತಿ.

*ಬೆಂಗಳೂರು* ***ಕೋ. ಚೆ.***

**ಒಂದು ಚರ್ಚೆ**

ಪ್ರೊ॥ ಕಲ್ಬುರ್ಗಿಯವರ ಹತ್ಯೆಯ ಹಿನ್ನೆಲೆಯಲ್ಲಿ ಸ್ವಾತಂತ್ರ್ಯದ ಚರ್ಚೆ ಬಿರುಸಿನಿಂದ ಸಾಗುತ್ತಿರುವ ನಮ್ಮ ಪ್ರಸಕ್ತ ಸನ್ನಿವೇಶದಲ್ಲಿ ಒಂದು ವ್ಯಂಗ್ಯವಿದೆ : ಪ್ರತಿಯೊಂದು ನಿಲುವಿನ ಸಮರ್ಥಕರೂ ಅವರ ವಿರೋಧಿ ಬಣಕ್ಕೆ ಸಂಯಮ ಮತ್ತು ಸಹನೆಯ ಬಗ್ಗೆ ಕಿವಿಮಾತು ಹೇಳುವುದು ಮತ್ತು ಪ್ರಜಾಪ್ರಭುತ್ವದ ಮೌಲ್ಯಗಳನ್ನು ಕುರಿತು ತಿಳಿವಳಿಕೆ ನೀಡುವುದು ಆ ವ್ಯಂಗ್ಯ. ಇತರರಿಗೆ ಅನ್ವಯಯೋಗ್ಯವಾದ ಮಾದರಿಗಳೂ ನಮಗೂ ಅನ್ವಯವಾಗುತ್ತವೆಂದು ಹೇಳಿದರಷ್ಟೇ ಸಾಲದು, ಅದು ಪ್ರಾಯೋಗಿಕವಾಗಿ ಅನುಷ್ಠಾನದಲ್ಲಿರಬೇಕಾದ್ದು ಅಗತ್ಯ.

ಇತ್ತೀಚಿನ ಚರ್ಚೆಯಲ್ಲಿ ಡಾ॥ ರಾಜಾರಾಮ ಹೆಗಡೆಯವರು "ವಿಚಾರವಾದಿ"ಗಳನ್ನು ಕುರಿತು ಹೇಳುವಾಗ "ತಮ್ಮ ಐಡಿಯಾಲಜಿಯನ್ನು ಮುಂದೊತ್ತಲು ಈ ಅಭಿವ್ಯಕ್ತಿ ಸ್ವಾತಂತ್ರ್ಯದ ಮಂತ್ರವನ್ನು ಬಳಸುತ್ತಿದ್ದಾರೆ ಎಂದೆನಿಸುತ್ತದೆ" ಎಂಬ ಪ್ರತಿಪಾದನೆಯನ್ನು ಮಂಡಿಸಿದ್ದಾರೆ (ಪ್ರಜಾವಾಣಿ, ಸೆಪ್ಟೆಂಬರ್ ೧೨, ೨೦೧೫). ಈ ಮಾತು ಬೇರಾರಿಗೂ ಅನ್ವಯಿಸುವುದಿಲ್ಲವೆ ? ಸೈದ್ಧಾಂತಿಕ ಸಂಘರ್ಷಗಳಿಲ್ಲದ ಕಾಲವೊಂದು ಈವರೆಗಿನ ಭಾರತೀಯ ಇತಿಹಾಸದಲ್ಲಂತೂ ಇಲ್ಲ. ಇತಿಹಾಸ ಮತ್ತು ಸಮಾಜಶಾಸ್ತ್ರ ವಿದ್ಯಾರ್ಥಿಗಳೆಲ್ಲಾ ಇದನ್ನು ಬಲ್ಲವರೇ ಆಗಿದ್ದಾರೆ. ಮುಂದುವರಿದು ಡಾ॥ ಹೆಗಡೆಯವರು "ವಾದೇವಾದೇ ಜಾಯತೇ ಕಂಠಶೋಷಃ" ಎಂಬ ತೀರ್ಮಾನಕ್ಕೆ ಬಂದಿದ್ದಾರೆ. ವಾದದಿಂದ ತತ್ವಬೋಧೆಯಾಗುತ್ತದೆಂದು ನಮ್ಮ ದಾರ್ಶನಿಕರು ಭಾವಿಸಿದಂತಿತ್ತು, ಆದರೆ ಹೆಗಡೆಯವರು ಬಹಳ ನಿರಾಶೆಯಿಂದ ಹೇಳುತ್ತಾರೆ "ಇದರ ಒಂದೇ ಪರಿಣಾಮವೆಂದರೆ" ಸಾಮಾಜಿಕ ಸಂಘರ್ಷ ಹಾಗೂ ಅಶಾಂತಿ" ಎಂದು. ಮಾನವನ ಇತಿಹಾಸದಲ್ಲಿ ನಾಗರಿಕತೆಯ ಉನ್ನತ ಹಂತಗಳಿಗೆ ಸಾಗಲು ಸಂಘರ್ಷವಿಲ್ಲದೆ ಎಂದು ಎಲ್ಲಾ ಸರಾಗವಾಗಿ ನಡೆದಿತ್ತು ? ಒಂದು ಸಿದ್ಧಾಂತದ ಮಂಡನೆಯಾದಾಗ ಪ್ರತಿಸಿದ್ಧಾಂತದ ಮಂಡನೆ ಮಾಡಬೇಡವೆ ? ಇಂದಿನ ಪ್ರವೃತ್ತಿ ಹೇಗೆ ಭಾಸ ವಾಗುತ್ತಿದೆಯೆಂದರೆ, ಏನಾದರೊಂದು ತರ್ಕಶುದ್ಧ ವಾದವನ್ನು ಮುಂದಿಟ್ಟರೆ "ಅದು ಕೂಡದು, ಅದು ನಮ್ಮ ಮನಸ್ಸಿಗೆ ನೋವುಂಟುಮಾಡಿದೆ, ಆದ್ದರಿಂದ ನಿಮ್ಮ ಮೇಲೆ ಮೊಕದ್ದಮೆ ಹೂಡುತ್ತೇವೆ" ಎನ್ನುವಂತಾಗಿದೆ. ಒಂದು ಬೌದ್ಧಿಕ-ಸಾಮಾಜಿಕ ಚರ್ಚೆಯಲ್ಲಿ ಮನಸ್ಸನ್ನು ಗಟ್ಟಿಮಾಡಿಕೊಳ್ಳುವಷ್ಟು ಸಾಮರ್ಥ್ಯವೂ ನಮ್ಮಲ್ಲಿಲ್ಲವೆ ? ಅದೆಷ್ಟು ಶತಮಾನ ಗಳಿಂದ ನಮ್ಮ ದೇಶದಲ್ಲಿ ನಾಸ್ತಿಕರನ್ನು ಹಿಗ್ಗಾಮುಗ್ಗಾ ನಿಂದಿಸುತ್ತಾ ಬಂದಿದ್ದೇವೆ ಮತ್ತು ಈಗಲೂ ಅದನ್ನು ಮನಸೋ ಇಚ್ಛೆ ಮಾಡುತ್ತಿದ್ದೇವೆ ? ಅವರ ಮನಸ್ಸುಗಳಿಗೆ ಘಾಸಿಯುಂಟಾಗುವುದಿಲ್ಲವೇಕೆ ? "ನಮ್ಮ ಮನಸ್ಸಿಗೆ ನೋವುಂಟಾಗಿದೆ" ಎಂದು ಅವರು ಮೊಕದ್ದಮೆ ಹೂಡಹೊರಟರೆ ನಮ್ಮ ನ್ಯಾಯಾಲಯ ಗಳು ಪರಿಹಾರ ನೀಡಿಯಾವೆ ? ಆದ್ದರಿಂದ, ಸೈದ್ಧಾಂತಿಕ ಪ್ರತಿಪಾದನೆಯಿಂದ ಸಾಮಾಜಿಕ

ಸಂಘರ್ಷ ಮತ್ತು ಅಶಾಂತಿ ನೆಲೆಗೊಳ್ಳದಂತೆ ಮಾಡುವುದು ಪ್ರತಿಪಾದಕರ ಕೈಯಲ್ಲೇ ಇದೆ. ಡಾ॥ ಹೆಗಡೆಯವರು ಸರಿಯಾಗಿಯೇ ಹೇಳಿರುವಂತೆ ಸಂಪ್ರದಾಯಸ್ಥರಿಗೆ ಮತ್ತು ಮತ ಶ್ರದ್ಧೆಯುಳ್ಳವರಿಗೆ ಇತರ ಯಾರಿಗೇ ಇರುವಂತೆ "ಅಭಿವ್ಯಕ್ತಿ ಸ್ವಾತಂತ್ರ್ಯ" ಖಂಡಿತ ಉಂಟು. ಆದರೆ ಆ ಸ್ವಾತಂತ್ರ್ಯವು ಯಾವ ಸ್ವರೂಪ ಧರಿಸಬೇಕು ಎಂಬುದು ಮೂಲಪ್ರಶ್ನೆ. ಮಾನ್ಯ ಹೆಗಡೆಯವರು ಒಂದು ಉದಾಹರಣೆ ನೀಡಿರುವುದು ಹೀಗೆ : "ದೇವಮೂರ್ತಿಗಳ ಮೇಲೆ ಮೂತ್ರ ವಿಸರ್ಜನೆ ಮಾಡಿದರೆ ತಪ್ಪಿಲ್ಲ ಎನ್ನುವುದು ವಿಚಾರವಾದಿಯೊಬ್ಬನ ಸ್ವಾತಂತ್ರ್ಯವಾದರೆ, ಅದನ್ನು ಅಷ್ಟೇ ಕೆಟ್ಟದಾಗಿ ವಿರೋಧಿಸುವುದು ಸಂಪ್ರದಾಯವಾದಿಯ ಸ್ವಾತಂತ್ರ್ಯವೇಕಲ್ಲ ?" ಇಲ್ಲಿ ಎರಡು ಅಂಶಗಳಿವೆ : (ಅ) "ಅಷ್ಟೇ ಕೆಟ್ಟದಾಗಿ" ಎಂಬುದರ ವ್ಯಾಪ್ತಿ ಏನು ? (ಆ) ವಿಚಾರವಾದಿಯು ನಿಜಕ್ಕೂ ಹೇಳಿರಬಹುದಾದದ್ದು ಏನು ? – ಉತ್ತರಗಳೇನು ? ವಿಚಾರವಾದಿಯ ಮೂರ್ತಿ ರಚಿಸಿ ಅದರ ಮೇಲೆ ಮೂತ್ರ ವಿಸರ್ಜಿಸಬಹುದು, ಅದನ್ನು ತಿಪ್ಪೆಗೆ ಎಸೆಯಬಹುದು ಇಲ್ಲವೆ ಸುಡಬಹುದು, ಎನ್ನೋಣವೆ ? ಎರಡನೆಯ ಪ್ರಶ್ನೆ ಹೆಚ್ಚು ಸಂಗತವಾದ್ದು. ಡಾ॥ ಹೆಗಡೆಯವರು ಗುರುತಿಸಿರುವಂತೆ "ಸಂಶೋಧನಾ ಕ್ಷೇತ್ರಕ್ಕೆ ಹೊರತಾದ ವಿಧಾನಗಳು" ಪ್ರಯೋಗಕ್ಕೆ ಬರುವ ಸಾಧ್ಯತೆಯೇನೋ ಇದೆ; ಅದಕ್ಕೆ ಕಾರಣ ವಿಚಾರವಾದಿ ಸಂಶೋಧಕನ ಮಾತನ್ನು ಸರಿಯಾಗಿ ಅರಿಯದೆ ಹೋಗುವುದೂ ಆಗಿರಲು ಸಾಧ್ಯ. ಡಾ॥ ಕಲ್ಬುರ್ಗಿಯವರ ಹತ್ಯೆಯ ಹಿನ್ನೆಲೆಯಲ್ಲಿ ಈ ಮಾತುಗಳು ಬಂದಿರುವುದರಿಂದ ಅವರು ನಿಜಕ್ಕೂ ಹೇಳಿದ್ದೇನು ಮತ್ತು ಸಾಹಿತಿಯಾಗಿ ಅವರು ಸಾಹಿತ್ಯಿಕ ಭಾಷೆ ಬಳಸಿದ್ದಿರಬಹುದೆ ಎಂಬ ಪರಾಮರ್ಶೆ ಅಗತ್ಯ. "ಹುಡುಗ ನಾಗಿದ್ದಾಗ ಯಾರೋ ಒಬ್ಬ ಹೀಗೆ ಮಾಡಿದ್ದನಂತೆ" ಎಂದು ಹೇಳುವುದು, "ಅವನು ಮಾಡಿದ್ದು ಸರಿ, ಎಲ್ಲರೂ ಹಾಗೆ ಮಾಡಬೇಕು" ಎಂಬರ್ಥ ಕೊಡುವುದಿಲ್ಲ. ಮಾನವ ಜನಾಂಗದಲ್ಲಿ ದೇವರು ಮತ್ತು ಅವನ ಮೂರ್ತಿಗಳು ಕುತೂಹಲ ಕೆರಳಿಸುವ ಅಂಶಗಳಾಗಿ ಉಳಿದಿವೆಯೆಂಬುದು ಮತ್ತು ಅವನ ಮೂರ್ತಿಗಳು ಕುತೂಹಲ ಕೆರಳಿಸುವ ಅಂಶಗಳಾಗಿ ಉಳಿದಿವೆಯೆಂಬುದು ಅದರರ್ಥವಲ್ಲವೆ ? ಇದು ವ್ಯಕ್ತಿ ಸ್ವಾತಂತ್ರ್ಯಕ್ಕೆ ಸಂಬಂಧಿಸಿದ್ದಲ್ಲ, ಮಾನವಶಾಸ್ತ್ರಕ್ಕೆ ಸಂಬಂಧಿಸಿದ್ದು. ಈಚಿನ ದಿನಗಳಲ್ಲಿ ಕೆಲವು ದೇವಾನಾಂಪ್ರಿಯರು "ಋಗ್ವೇದವು ಕ್ರಿ. ಪೂ. ೮೦೦೦ ಕ್ಕಿಂತಲೂ ಹಿಂದಿನದು" ಎಂಬ ಮಾತನ್ನಾಡುತ್ತಿದ್ದಾರೆ. ಅದನ್ನು ತರ್ಕರಹಿತವಾದ ಮಾತೆಂದು ತಳ್ಳಿಹಾಕಿದರೆ ಅವರು ಸಿಟ್ಟಾಗಬೇಕೆ ? ಅಂದರೆ, ಇಂತಹ ಮಾತುಗಳಲ್ಲಿ ಸೀಮಾರೇಖೆಯನ್ನು ನಿರ್ಧರಿಸುವುದು ಯಾರು ಮತ್ತು ಹೇಗೆ ?

ಪ್ರಾಚೀನ ಕಾಲದಿಂದಲೂ ನಮ್ಮ ದೇಶದಲ್ಲಿ ಭೌತವಾದಿ ಚಾರ್ವಾಕ ಅಥವಾ ಲೋಕಾಯತವನ್ನು ಹೀನಾಯವಾಗಿ ಟೀಕೆ ಮಾಡುತ್ತಾ ಬರಲಾಗಿದೆ. ಅವರು ನಾಸ್ತಿಕರೆಂಬುದು ಅವರ ಮೇಲೆ ಗೂಬೆ ಕೂರಿಸಲು ಪ್ರಧಾನ ಕಾರಣ. ಅವರಂಥವರ ಅಭಿವ್ಯಕ್ತಿ ಸ್ವಾತಂತ್ರ್ಯಕ್ಕೆ ಕಡಿವಾಣ ಹಾಕಲಾಗಿತ್ತು, ಈಗಲೂ ಹಾಕಲಾಗಿದೆ. ಕಡಿವಾಣ ಹಾಕುವುದರಲ್ಲಿ ಅಸಮಾನತೆ ಇದೆ. ಅಂದು ಕಡಿವಾಣ ಹಾಕಿದವರು ಇಂದೂ ಹಾಕುತ್ತಿದ್ದಾರೆ, ಆದರೆ ಅವರಿಗೆ ಕಡಿವಾಣ ಹಾಕಲು ಪ್ರಭುತ್ವ ಹಾಗೂ ನ್ಯಾಯಾಲಯಗಳೂ ಮುಂದೆ ಬರುತ್ತಿಲ್ಲ. ಇದು ಏಕಪಕ್ಷೀಯವಾದ ಸವಲತ್ತು ಮತ್ತು ಅದನ್ನು ಹೋಗಲಾಡಿಸಿ ಮುಕ್ತ ಚರ್ಚೆಗೆ ಅವಕಾಶ ಮಾಡಿಕೊಳ್ಳಬೇಕಾಗಿದೆ. ಸ್ವಾಮಿಗಳೂ ಕಲ್ಬುರ್ಗಿಯವರನ್ನು ಚೆನ್ನಾಗಿ ಬಯ್ದು ಅವರ ಮಾನ ಹರಾಜು ಹಾಕಬಹುದು, ಆದರೆ ಕಲ್ಬುರ್ಗಿಯವರು ಸ್ವಾಮಿಗಳಿಗೆ ಹಾಗೆ ಮಾಡುವಂತಿಲ್ಲ ಇದೊಂದು ಮೂರ್ಖತನದ ಅಲಿಖಿತ ನಿಯಮ, ಎಲ್ಲರೂ ಮನಸ್ಸು ಗಟ್ಟಿಮಾಡಿಕೊಂಡಾಗ ಮಾತ್ರ ಬಹುಮುಖೀ ಸಂವಾದ, ವ್ಯಕ್ತಿತ್ವ ವಿಕಾಸ ಮತ್ತು ಸತ್ವಯುಕ್ತ ಸಂಸ್ಕೃತಿ ಸಾಧ್ಯ. ದೇವರಿದ್ದಲ್ಲಿ ಅವನಿಗೆ ಅಥವಾ ಅವಳಿಗೆ ಯಾರು ಎಷ್ಟು ಶಾಪ ಹಾಕಿದರೂ ಅವನ ಅಥವಾ ಅವಳ ಅಸ್ತಿತ್ವಕ್ಕೆ, ಘನತೆಗೆ ಚ್ಯುತಿಯುಂಟಾಗುವುದಿಲ್ಲ. ಅಂತಹ ಸರ್ವಶಕ್ತನ(ಳ) ರಕ್ಷಣೆಗೆ ನಾವು ಧಾವಿಸಬೇಕಾಗಿಲ್ಲ, ದೇವರ ಟೀಕಾಕಾರರನ್ನು ಕೊಲ್ಲಬೇಕಾಗಿಲ್ಲ.

* * *

ಪ್ರೊ॥ ಕೆ. ಎಸ್. ಭಗವಾನ್ ಅವರು ಸಂಸ್ಕೃತದಲ್ಲಿರುವುದೆಲ್ಲಾ ಬ್ರಾಹ್ಮಣರದ್ದು, ಶೂದ್ರರದ್ದೇನೂ ಇಲ್ಲ, ಆದ್ದರಿಂದ ಸಂಸ್ಕೃತದಲ್ಲಿ ಏನನ್ನೂ ಓದಬೇಕಾಗಿಲ್ಲವೆಂದು ಅಭಿವ್ಯಕ್ತಿಸಿದ್ದಾರೆ. ಒಂದು ಚರಿತ್ರಾಂಶ ತಿಳಿಯೋಣ : ಜನಪರ ಕಾಳಜಿಯು ಇಂದಿನ ಆವಿಷ್ಕಾರವಲ್ಲ, ಅದು ತಲೆತಲಾಂತರದಿಂದ ವ್ಯಕ್ತವಾಗುತ್ತಾ ಬಂದಿದೆ. ಸಂಸ್ಕೃತ ಭಾಷೆಯಲ್ಲಿಯೂ ಅದನ್ನು ಮಾಡಿದ ಶ್ರೇಯಸ್ಸು ನೂರಾರು ಮಂದಿಗಿದೆ. ವಾಲ್ಮೀಕಿ, ಆರ್ಯಭಟ, ಮುಂತಾದವರು ಅ–ಬ್ರಾಹ್ಮಣರು. ವರ್ಣವ್ಯವಸ್ಥೆಯನ್ನು ಪ್ರಶ್ನಿಸಿ ಸರ್ವಜನರ ಬಗ್ಗೆ ಉದಾತ್ತವಾಗಿ ವಾದ ಮಂಡಿಸುವ ಪರಂಪರೆ ನಮ್ಮಲ್ಲಿ ಅವ್ಯಾಹತವಾಗಿ ನಡೆದುಬಂದಿದೆ. "ಸಂಸ್ಕೃತದಲ್ಲಿ ಏನಿಲ್ಲ ? ಎಲ್ಲವೂ ಇದೆ," ಎನ್ನುವವರು ಎಷ್ಟು ಅಸಂಗತರೋ, "ಸಂಸ್ಕೃತದಲ್ಲಿ ಏನೇನೂ ಇಲ್ಲ" ಎನ್ನುವವರು ಸಹ ಅಷ್ಟೇ ಅಸಂಗತರು. ಬೇರೆ ಭಾಷಿಕ ಸಾಹಿತ್ಯಗಳಲ್ಲಿರುವಂತೆ ಸಂಸ್ಕೃತದಲ್ಲೂ ಜನಪರ ಹಾಗೂ ಜನವಿರೋಧಿ ನೆಲೆಗಳಲ್ಲಿ ಚಿಂತನೆ ನಡೆದಿದೆ. ಸಂಸ್ಕೃತದಲ್ಲಿ ಜನವಿರೋಧಿ ನೆಲೆಯು ಸ್ವಲ್ಪ ವಿಶಾಲವಾದ್ದು, ಏಕೆಂದರೆ ಅದು ಅಂದಿನ "ಶಿಷ್ಟ"ರ ಅಭಿವ್ಯಕ್ತಿ ಮಾಧ್ಯಮ. ಶಿಷ್ಟರಿಗೆ ಯಾವಾಗಲೂ ಪರಿಶಿಷ್ಟರ ಬಗ್ಗೆ ಅಸಡ್ಡೆ ಸ್ವಲ್ಪ ಜಾಸ್ತಿ. ಎಲ್ಲ ಭಾಷೆಗಳಲ್ಲೂ ಡಾ॥ ಎಸ್. ಎಲ್. ಭೈರಪ್ಪ ಮತ್ತು ಡಾ॥ ದೇವನೂರು ಮಹಾದೇವ ಇಬ್ಬರೂ ಇರುತ್ತಾರೆ. ಮಾನ್ಯ ಭಗವಾನ್ ಅವರು ಅದನ್ನು ಮರೆಯಬಾರದು. ವಿಚಾರವಂತರು ಅವೈಚಾರಿಕ ತೀರ್ಮಾನಗಳಿಗೆ ಬಂದಾಗ ಅವರೂ ನಿಶ್ಚಿತವಾಗಿ ಅಸಂಗತರೇ ಆಗುತ್ತಾರೆ. "ಸಮಾನೀ ವ ಆಕೂತಿಃ ಸಮಾನಾ ಹೃದಯಾನಿ ವಃ" ಎಂದ ಋಗ್ವೇದದ ಅಭಿವ್ಯಕ್ತಿ ನಮ್ಮೆಲ್ಲರದೂ ಆಗಬೇಕಿದೆ. ಬೌದ್ಧಿಕ ವಿಷಾನಿಲ ಹರಡಲು ಯಾರಿಗೂ ಸ್ವಾತಂತ್ರ್ಯ ಕೂಡದು. ಆದರೆ ಆ ಸ್ವಾತಂತ್ರ್ಯವನ್ನು ಪ್ರತಿಗಾಮಿಗಳು ಅಗಾಧವಾಗಿ ತಮ್ಮದಾಗಿಸಿಕೊಂಡಿದ್ದಾರೆ ! ದೈಹಿಕ ದಂಡನೆಯೊಂದೇ ನಮ್ಮ ಅಸ್ತ್ರ ಎಂಬುವವರ ಕೈಗಳನ್ನು ಕಟ್ಟಿಹಾಕುವ ಸ್ವಾತಂತ್ರ್ಯ ಸಮಾಜಕ್ಕಿದೆ.

*ಬೆಂಗಳೂರು* — ***ಡಾ॥ ಜಿ. ರಾಮಕೃಷ್ಣ***

# ಅಥರ್ವವೇದದ ಒಂದು ಕಿರುನೋಟ

ಸ್ವರ್ಗಕಾಮಿಯು ಜ್ಯೋತಿಷ್ಟೋಮ ಯಜ್ಞ ಮಾಡಬೇಕಂತೆ. ಈಚಿನ ದಿನಗಳಲ್ಲಿ ಸ್ವರ್ಗಕ್ಕೆ ಹೋಗಬಯಸುವವರು ಕಡಿಮೆ ಯಾಗಿದ್ದಾರೆ. ಅಂತಹ ಯಜ್ಞ ಮಾಡುವ ಆರ್ಥಿಕ ಚೈತನ್ಯವಿರುವವರು ಇಲ್ಲೇ ಸ್ವರ್ಗ ನಿರ್ಮಿಸಿಕೊಂಡಿರುವುದು ಒಂದು ಕಾರಣವಿರಬಹುದು. ಸ್ವರ್ಗವೆಂಬುದು ಇರುವುದರ ಬಗ್ಗೆ ಸಂಶಯ ಹಾಗೂ ಈ ಯಜ್ಞದ ತಥಾಕಥಿತ ಶಕ್ತಿಯ ಬಗ್ಗೆ ಇರುವ ಅನುಮಾನ ಸಹ ಕಾರಣಗಳಿರಬಹುದು. ಅಷ್ಟು ಸಾಹಸ ಮಾಡಿ ಸ್ವರ್ಗಕ್ಕೆ ಹೋದವರ ಪುಣ್ಯವು ಕ್ಷೀಣಿಸಿದಾಗ ಮತ್ತೆ ಮರ್ತ್ಯಲೋಕಕ್ಕೆ ಬರಬೇಕಾಗುತ್ತದಂತೆ. ಆದ್ದರಿಂದ ಇಂದಿನ ಪುರೋಹಿತರು ಮುಂಜಿ, ಮದುವೆ, ತಿಥಿ, ಹೋಮ, ಮುಂತಾದುವನ್ನು ಮಾಡಿಸುವ ಉದ್ಯೋಗದಲ್ಲಿರುತ್ತಾರೆ. ಯಥಾಪ್ರಕಾರ ಪುರೋಹಿತರಲ್ಲೂ ಶ್ರೇಣೀಕರಣವಿರುತ್ತದೆ : ರಾಜಪುರೋಹಿತ, ವ್ಯಾಪಾರಿಗಳ ಪುರೋಹಿತ, ಬ್ರಾಹ್ಮಣರ ಪುರೋಹಿತ, ಶೂದ್ರರ ಪುರೋಹಿತ, ಇತ್ಯಾದಿ. ತಮ್ಮತಮ್ಮಲ್ಲಿ ಮಾತನಾಡಿಕೊಳ್ಳುವಾಗ ಇಂತಹ ಪುರೋಹಿತರು ಬೇರೆ ಕೆಲವು ಪುರೋಹಿತರ ತುಚ್ಛೀಕರಣ ಮಾಡಬೇಕಾದರೆ ಅಥವಾ ಬೈಗುಳ ಸುರಿಸಬೇಕಾದರೆ 'ಅವನೊಬ್ಬ ವ್ರಾತ್ಯ' ಎಂದು ಉದ್ಗರಿಸುತ್ತಾರೆ. ಇಂದಿನ ಅನೇಕ ಪುರೋಹಿತರಿಗೆ ಆ ಬೈಗುಳ ಸಹ ಗೊತ್ತಿಲ್ಲ. ಉಪನಯನಾದಿ ಸಂಸ್ಕಾರಗಳಿಲ್ಲದಿರುವವನು ಅವರ ಪ್ರಕಾರ ವ್ರಾತ್ಯ. ವ್ರತವಿಲ್ಲದವನು ವ್ರಾತ್ಯ ಎಂಬ ವ್ಯುತ್ಪತ್ತಿ ಇಲ್ಲ. ಅಥರ್ವವೇದದಲ್ಲಿ ವ್ರಾತ್ಯರ ಪ್ರಸ್ತಾಪ ಹಲವಾರು ಬಾರಿ ಬರುತ್ತದೆ. ಅವರನ್ನು ಕುರಿತ ಹಲವು ಸೂಕ್ತಗಳು ೧೫ನೆಯ ಕಾಂಡದಲ್ಲಿವೆ. ಅವರು ಹೀನರೆಂಬ ಸೂಚನೆಯೇನೂ ಅಲ್ಲಿ ಕಂಡುಬರುವುದಿಲ್ಲ.

ಈ ಕಾಂಡವು ಕ್ಲಿಷ್ಟವಾದ್ದು ಮತ್ತು ಸ್ವಲ್ಪ ಅಸ್ಪಷ್ಟವಾದ್ದು. ವ್ರಾತ್ಯರನ್ನು ಬಣ್ಣಿಸಲಾಗಿದೆ ಮತ್ತು ಶ್ಲಾಘಿಸಲಾಗಿದೆ ಎಂಬುದಂತೂ ಪೂರ್ತಿ ಸ್ಪಷ್ಟವೇ ಆಗಿದೆ. ಅವರ ಆದರ್ಶವನ್ನು ಎತ್ತಿಹಿಡಿಯಲಾಗಿದೆ, ಆದರೆ ಯಾರಿವರು ಎಂಬುದಕ್ಕೆ ಉತ್ತರವು ಕಠಿಣವೆನಿಸಿದೆ. ಅವರು ಋಗ್ವೇದದ ಆರ್ಯರಿಗಿಂತಲೂ ಭಿನ್ನರು, ಆದರೆ ದಸ್ಯುಗಳು ಅಥವಾ ಪಣಿಗಳ ಶ್ರೇಣಿಗೂ ಸೇರುವುದಿಲ್ಲ. ಇವರನ್ನು ಅಲೆಮಾರಿಗಳಂತೆ ಚಿತ್ರಿಸಲಾಗಿದೆ ಮತ್ತು ಕೆಲವು ಆಚರಣೆಗಳ ಮೂಲಕ ಆರ್ಯರ ಪಂಗಡಕ್ಕೆ ಸೇರಿಕೊಳ್ಳುವ ಅರ್ಹತೆ ಪಡೆದರೆಂಬ ಸೂಚನೆ ಕೆಲವೆಡೆ ದೊರಕುತ್ತದೆ. ಮೂಲತಃ ಇವರು ಯಾವುದಾದರೂ ಸೈನಿಕ ಬಣಕ್ಕೆ ಸೇರಿದವರಾಗಿದ್ದಿರಬೇಕೆಂಬ ಊಹೆಗೆ ಸಹ ಅವಕಾಶವಿದೆ. ವಿಶೇಷವೆಂದರೆ, ವ್ರಾತ್ಯರಲ್ಲಿ ಶ್ರೇಣೀಕರಣವಿಲ್ಲ. ಅದಿರದಿದ್ದ ಹಂತಕ್ಕೆ ಸೇರಿದ ಒಂದು ಗುಂಪು ಇವರದು.

ತಾಂಡ್ಯ ಬ್ರಾಹ್ಮಣ ಎಂಬ ಗ್ರಂಥದಲ್ಲಿ ವ್ರಾತ್ಯಸ್ತೋಮಗಳೆಂಬ ಭಾಗವಿದೆ. ಅದರ ಪ್ರಕಾರ ಇವರೂ ಆರ್ಯರೇ, ಆದರೆ ಅವರ ಆಚರಣೆಗಳಿಲ್ಲದ ಒಂದು ಕೆಳಸ್ತರಕ್ಕೆ ಸೇರಿದವರು. ಆರ್ಯರ ಬೇರೆ ಕೆಲವು ಪದ್ಧತಿಗಳನ್ನು ಅನುಸರಿಸಿ ಇವರು ಆರ್ಯ ಬಣಕ್ಕೆ ಸೇರಲು ಅರ್ಹರು. (ಪಣಿಗಳು, ಪಂಚಜನರು, ದಸ್ಯುಗಳು, ಇಂತಹ ಅರ್ಹತೆ ಗಳಿಸಲು ಸಾಧ್ಯವಿಲ್ಲ). ರಮೇಶ ಚಂದ್ರ ದತ್ ತನ್ನ "ಪ್ರಾಚೀನ ಭಾರತ" (ಸಂಪುಟ ೧)ದಲ್ಲಿ ವ್ರಾತ್ಯರ ಕೆಲವು ಲಕ್ಷಣಗಳನ್ನು ದಾಖಲಿಸಿರುವುದುಂಟು, ಆದರೆ ಅದಕ್ಕೆ ಅಥರ್ವವೇದಕ್ಕೆ ಹೊರತಾದ ಬೇರಾವ ಆಕರವೂ ಇಲ್ಲ. ತೆರೆದ ರಥಗಳಲ್ಲಿ ಸೈನ್ಯಬಲದಂತೆ ಸಂಚರಿಸುವುದು, ಬಿಲ್ಲು-ಭರ್ಜಿ ಹೊಂದಿರುವುದು, ಪೇಟ ಧರಿಸುವುದು, ಕುರಿತುಪ್ಪಟದ ಬಟ್ಟೆ ತೊಡುವುದು, ಇವು ಅವರ ಕೆಲವು ಲಕ್ಷಣಗಳು. ಋಗ್ವೇದದ ಆರ್ಯರಲ್ಲಿ ಕೂಡ ಇಂಥವೇ ಕೆಲವು ಲಕ್ಷಣಗಳನ್ನು ಕಾಣುತ್ತೇವೆ. ಆದರೆ ಆರ್ಯರು ಕೃಷಿ ಮತ್ತು ವ್ಯಾಪಾರಗಳತ್ತ ವಿಕಾಸ ಹೊಂದಿದಂತೆ ವ್ರಾತ್ಯರು ವಿಕಾಸಗೊಳ್ಳಲಿಲ್ಲ. ಇವರದು ಆರ್ಯರದೇ ಭಾಷೆ ಎಂಬುದರಲ್ಲಿ ಅನುಮಾನವಿಲ್ಲ.

ವ್ರಾತ್ಯನು ಇಂದ್ರನ ಬಿಲ್ಲನ್ನು, ಅಂದರೆ ಕಾಮನಬಿಲ್ಲನ್ನು, ಹೊತ್ತು ನಡೆದ (೧೫.೧.೬ : ಸ ಏಕವ್ರಾತ್ಯೋಽಭವತ್ ಸ ಧನುರಾದತ್ತ ತದೇವೇಂದ್ರಧನುಃ). ಅವನ ಹೊಟ್ಟೆ ಕಡುನೀಲಿ, ಬೆನ್ನು ಕೆಂಪು (೭ : ನೀಲಮಸ್ಯೋದರಂ ಲೋಹಿತಂ ಪೃಷ್ಠಂ). ಅವನ ಬಗೆಗಿರುವ ಭಾವನೆಯೆಂದರೆ ಅವನು ಅಪ್ರಿಯರಾದ ವಿರೋಧಿಗಳನ್ನು ಕೆಂಪು ಆಯುಧದಿಂದ ಹಿರಿಯುತ್ತಾನೆ, ಎಂದು

ಜಿ. ರಾಮಕೃಷ್ಣ

(೮ : ನೀಲೇನೈವ ಅಪ್ರಿಯಂ ಭ್ರಾತೃವ್ಯಂ ಪ್ರೋರ್ಣೋತಿ ಲೋಹಿತೇನ। ದ್ವಿಷಂತಂ ವಿಧ್ಯತಿ...). ಅವನು ಜನರ ನಡುವೆ ಸೇರಿಕೊಂಡ, ಆಗ ಅವನನ್ನು ಸಭೆ, ಸಮಿತಿ, ಸೇನೆ ಮತ್ತು ಸುರೆ ಕೂಡಿಕೊಂಡವು (೧೫.೯.೧–೨ : ಸ ವಿಶೋಽನು ವ್ಯಚಲತ್। ತಂ ಸಭಾ ಚ ಸಮಿತಿಶ್ಚ ಸೇನಾ ಚ ಸುರಾ ಚ ಅನುವ್ಯಚಲನ್). ಆಪಸ್ತಂಬ ಧರ್ಮಸೂತ್ರದಲ್ಲಿ (೨.೩.೭.೧೩–೧೭) ವ್ರಾತ್ಯನ ಶ್ರೇಷ್ಠತೆ ಮತ್ತು ಯಜ್ಞಸಂಬಂಧಿ ಅಧಿಕಾರವನ್ನು ಪ್ರಸ್ತಾಪಿಸಲಾಗಿದೆ. ಅವನೊಬ್ಬ ಶ್ರೋತ್ರೀಯನೆನಿಸಿಕೊಳ್ಳಲು ಅರ್ಹ. ಒಂದು ವೇದವನ್ನಾದರೂ ಕರಗತ ಮಾಡಿಕೊಂಡಿರುವವನು ಶ್ರೋತ್ರೀಯ. ವ್ರಾತ್ಯನ ಅನುಜ್ಞೆ ಇಲ್ಲದೆ ಯಜ್ಞ ಮಾಡುವಂತಿಲ್ಲ, ಏಕೆಂದರೆ ಯಜ್ಞವನ್ನು ತಿಳಿದವನು ಅವನು. ಹಾಗೇನಾದರೂ ಅವನ ಅನುಜ್ಞೆ ಇಲ್ಲದೆ ಯಜ್ಞ ಮಾಡಿದರೆ ಅದರಿಂದ ಯಾವ ಸಿದ್ಧಿಯನ್ನೂ ಪಡೆಯಲಾಗದು (೧೫.೧೨.೮ : ಅಥ ಯ ಏವಂ ವಿದುಷಾ ವ್ರಾತ್ಯೇನ ಅನತಿಸೃಷ್ಟೋ ಜುಹೋತಿ। ನ ಪಿತೃಯಾಣಂ ಪಂಥಾಂ ಜಾನಾತಿ ನ ದೇವಯಾನಂ).

ವ್ರಾತ್ಯನಿಗೆ ಸಂಬಂಧಿಸಿದಂತೆ ಒಟ್ಟು ಹದಿನೆಂಟು ಸೂಕ್ತಗಳಿವೆ. ಅಲ್ಲಿ ಚಿತ್ರಿತವಾಗಿರುವಂತೆ ಅವನು ಅಲೆಮಾರಿ, ಎಲ್ಲ ದಿಕ್ಕುಗಳಲ್ಲೂ ಸಂಚರಿಸುತ್ತಾನೆ. ಕೆಲವೇಳೆ ಅವನು ಸಾಧು, ಕೆಲವೇಳೆ ಅಲೌಕಿಕ ಶಕ್ತಿ ಅಥವಾ ಸರ್ವದೇವತಾತ್ಮಕ ಶಕ್ತಿ ಹೊಂದಿರುವವನು. ಅವನಲ್ಲಿ ಎಲ್ಲ ದೇವತೆಗಳೂ ಸಮ್ಮಿಳಿತರಾಗಿದ್ದಾರೆ. ಇನ್ನು ಕೆಲವೇಳೆ ಅವನು ಭಿಕ್ಷೆ ಬೇಡಿ ಕಾಲ ನೂಕುವ ದೀನ.

ಎಲ್ಲೋ ಲಭ್ಯವಿಲ್ಲದೆ ಹೋಗಿದ್ದ ಹತ್ತು ಖಿಲ ಸೂಕ್ತಗಳನ್ನು ೨೦ನೆಯ ಕಾಂಡದಲ್ಲಿ ಸಂಗ್ರಹಿಸಲಾಗಿದೆ (೧೨೭ – ೧೩೬). ಅವನ್ನು ಕುಂತಾಪ ಸೂಕ್ತಗಳೆನ್ನುತ್ತಾರೆ. ಹೊಟ್ಟೆಯಲ್ಲಿವೆಯೆನ್ನಲಾದ ಇಪ್ಪತ್ತು ಗ್ರಂಥಿಗಳನ್ನು 'ಕುಂತಾಪ' ಎಂದು ಕರೆಯಲಾಗುತ್ತದೆ ಎಂಬ ಒಂದು ಅಭಿಪ್ರಾಯವಿದೆ. ಆದರೆ ಸಂಕೀರ್ಣತೆಯುಳ್ಳ ಕುಂತಾಪ ಸೂಕ್ತಗಳಲ್ಲಿ ಅಂತಹ ತಾತ್ಪರ್ಯ ಎಲ್ಲೂ ಇಲ್ಲ. ಬದಲಾಗಿ, ಇಲ್ಲಿ ಯಜ್ಞಸಂಬಂಧಿ ಸೂತ್ರಗಳು, ಒಗಟುಗಳು, ಇತ್ಯಾದಿ ವಿಷಯಕ ಪ್ರತಿಪಾದನೆಗಳಿವೆ. ಧಾರ್ಮಿಕ ಹಿನ್ನೆಲೆ ಇಲ್ಲದ ಸೂಕ್ತಗಳಿವು ಎನ್ನಬಹುದು. ೧೨೭ನೆಯ ಸೂಕ್ತದಲ್ಲಿ ಉದಾರಿ ನೇತಾರನೆನಿಸಿಕೊಂಡ ಕೌರಮನ ಪ್ರಶಂಸೆ ಇದೆ. ಅವನು ರುಶಮರ ನಾಯಕ. ರುಶಮರು ಯಾರೆಂದು ತಿಳಿಯುವುದಿಲ್ಲ. ಅವರೂ ಒಂದು ಬುಡಕಟ್ಟು ಅಥವಾ ಬಣದವರಿರಬಹುದು. ಕೌರಮನು ಯಾವನೋ ಋಷಿಗೆ ೧೦೦ ಚಿನ್ನದ ಸರಗಳನ್ನು, ೧೦ ಮಾಲೆಗಳನ್ನು, ೩೦೦ ಕುದುರೆಗಳನ್ನು ಮತ್ತು ೧೦,೦೦೦ ಗೋವುಗಳನ್ನು ಕೊಟ್ಟಿದ್ದನಂತೆ (೩ : ಏಷ ಇಷಾಯ ಮಾಮಹೇ ಶತಂ ನಿಷ್ಕಾನ್ ದಶ ಸ್ರಜಃ। ತ್ರೀಣಿ ಶತಾನಿ ಅರ್ವತಾಂ ಸಹಸ್ರಾ ದಶ ಗೋನಾಂ ॥). ಇನ್ನೊಬ್ಬ ರಾಜ ಅಥವಾ ನೇತಾರ ಪರೀಕ್ಷಿತ್. ಅವನನ್ನು ಕೌರವ್ಯ (ಕೌರವರವನು) ಎನ್ನಲಾಗಿದೆ. ಅಥರ್ವವೇದದ ಕೆಲವು ಶತಮಾನಗಳ ನಂತರದ ಮಹಾಭಾರತದ ಪಾತ್ರಗಳಲ್ಲಿ ಕೌರವ್ಯರು ಮತ್ತು ಪರೀಕ್ಷಿತ್ ಇದ್ದಾರೆಂಬುದನ್ನು ನೆನೆಯಬಹುದು. ವೇದದ ಪರೀಕ್ಷಿತ್ ಜನರ ಅಭಿಮಾನ ಗಳಿಸಿದ್ದ ದೇವಮಾನವ. ಒಬ್ಬ ಕೌರವ್ಯನ ಪ್ರಕಾರ ಅವನು ಜನರಿಗೆ ಸುಖ ಮತ್ತು ಶಾಂತಿ ಕೊಟ್ಟವನು (೭–೯ : ... ಪರಿಚ್ಛಿನ್ನಃ ಕ್ಷೇಮಮಕರೋತ್ ...).

೧೨೮ನೆಯ ಸೂಕ್ತದಲ್ಲಿ ಬೇರೆ ಬೇರೆ ಕರ್ಮಗಳನ್ನು ಮಾಡಿದವರು ಅಧೋಗತಿಗಿಳಿಯುತ್ತಾರೆ ಎಂಬುದನ್ನು ಹೇಳಲಾಗಿದೆ. ಉದಾಹರಣೆಗೆ, ಸೋದರಿಯ ಮಾನಭಂಗ ಮಾಡುವವನು ಪಾತಾಳದಲ್ಲಿ ಶೋಕಿಸುತ್ತಾನೆ (೨ : ಯೋ ಜಾಮ್ಯಾ ಅಪ್ರಥಯಸ್ತದ್ಯತ್ ಸಖಾಯಂ ದುಧೂರ್ಷತಿ। ಜ್ಯೇಷ್ಠೋ ಯದಪ್ರಚೇತಾಃ ತದಾಹುರಧರಾಗಿತಿ ॥). ಬೇರೆಯಂತೆ ಈ ಕಾಂಡದಲ್ಲಿ ಕೆಲವು ಒಗಟುಗಳನ್ನು ದಾಖಲಿಸಲಾಗಿದೆ (೧೩೪).

ಹಿಂದೆಯೇ ವಿವರಿಸಿದ್ದಂತೆ ಅಥರ್ವವೇದದಲ್ಲಿ ಅಧಿಕವಾಗಿರುವ ಸೂಕ್ತಗಳೆಂದರೆ ಪ್ರಾಚೀನ ಮಾಂತ್ರಿಕತೆಯನ್ನು ಸೂಚಿಸುವಂಥವು. ಉದಾಹರಣೆಗೆ, ಮಾನವ ಶರೀರದಲ್ಲಿ ಅಡಗಿಕೊಳ್ಳುವ ಪರತಂತ್ರಜೀವಿ ಹುಳುಗಳನ್ನು ನಿವಾರಣೆ ಮಾಡಿಕೊಳ್ಳುವ ಪ್ರಸಂಗವೊಂದಿದೆ (೫.೨೩). "ಕ್ರಿಮಿನಾಶನಂ" (೨.೩೨) ಎಂಬ ಸೂಕ್ತಕ್ಕೆ ಸಂವಾದಿಯಾದ್ದು ಇದು, ಕವಿಗೆ ಜಂತುಗಳನ್ನು ನಾಶಮಾಡುವ ಓಷಧಿ–ವನಸ್ಪತಿಗಳ ತಿಳಿವು ಇದ್ದಂತೆ ತೋರುವುದಿಲ್ಲ. ಅವನು ದ್ಯುಲೋಕ, ಪೃಥ್ವಿ, ಸರಸ್ವತಿ, ಇಂದ್ರ ಮತ್ತು ಅಗ್ನಿ ಶರೀರದಲ್ಲಿ ಹೊಕ್ಕಿರುವ ಹುಳುಗಳನ್ನು ನಾಶಗೊಳಿಸಬೇಕೆಂದು ಆಶಿಸುತ್ತಾನೆ (೧ : ಓತೇ ಮೇ ದ್ಯಾವಾಪೃಥಿವೀ ಓತಾ ದೇವೀ ಸರಸ್ವತೀ। ಓತೌ ಮ ಇಂದ್ರಶ್ಚಾಗ್ನಿಶ್ಚ ಕ್ರಿಮಿಂ ಜಂಭಯತಾಂ ಇತಿ ॥). ಬಾಲಕನೊಬ್ಬನನ್ನು ಬಾಧಿಸುವ ಕ್ರಿಮಿಯನ್ನು ಇಂದ್ರನೇ ಉತ್ಪಾಟಿಸಬೇಕು (೨ : ಅಸ್ಯೇಂದ್ರ ಕುಮಾರಸ್ಯ ಕ್ರಿಮೀನ್ ಧನಪತೇ ಜಹಿ). ಕ್ರಿಮಿಗಳು ಕಣ್ಣು, ಮೂಗು, ಹಲ್ಲುಗಳ ನಡುವೆಯೆಲ್ಲಾ ಸೇರಿಕೊಂಡುಬಿಡುತ್ತವೆ (೩). ಅವು ಹದ್ದು ಮತ್ತು ತೋಳಗಳಂತೆ ವಿವಿಧ ಬಣ್ಣಗಳವು (೪ : ಬಭ್ರುಶ್ಚ ಬಭ್ರುಕರ್ಣಶ್ಚ ಗೃಧ್ರಃ ಕೋಕಶ್ಚ ತೇ ಹತಾಃ). ಮಾನವನು ಮಾಡದಿದ್ದರೇನಂತೆ, ಸೂರ್ಯನಂತೂ ಉದಯಿಸುತ್ತಿರುವಂತೆಯೇ ಕಣ್ಣಿಗೆ ಕಾಣುವ ಮತ್ತು ಕಾಣದಿರುವ ಕ್ರಿಮಿಗಳನ್ನೆಲ್ಲಾ ನಾಶ ಮಾಡುತ್ತಲೇ ಇರುತ್ತಾನೆ (೬ : ಉತ ಪುರಸ್ತಾತ್ ಸೂರ್ಯ ಏತಿ ವಿಶ್ವದೃಷ್ಟೋ ಅದೃಷ್ಟಹಾ। ದೃಷ್ಟಾಂಶ್ಚ ಘ್ನನ್ ಅದೃಷ್ಟಾಂಶ್ಚ ಸರ್ವಾಂಶ್ಚ ಪ್ರಮೃಣನ್ ಕ್ರಿಮೀನ್). ಕಾಡುಗಳ ಸನಿಹದಲ್ಲಿ ವಾಸಿಸುತ್ತಿದ್ದ ಅಥರ್ವವೇದದ ಕಾಲದ ಜನಸಮುದಾಯಕ್ಕೆ ಕ್ರಿಮಿಗಳ ಕಾಟ ಇರುತ್ತಿದ್ದರೆ ಆಶ್ಚರ್ಯವೇನಿದೆ! ಯೇವಾಷ, ಕಷ್ಕಷ, ಏಜತ್ಕ, ಶಿಪವಿತ್ನುಕ, ಹೀಗೆ ಎಲ್ಲ ತರಹದ ಕ್ರಿಮಿಗಳೂ ನಾಶವಾಗಿಹೋಗುತ್ತವೆ (೭). ಕಲ್ಲಿನಿಂದ ಜಜ್ಜಿಹಾಕುವಂತೆ ಕ್ರಿಮಿಗಳನ್ನು ಕವಿಯು ಪುಡಿಗುಟ್ಟುತ್ತಾನೆ (೮ : ...ಸರ್ವಾನ್ ನಿ ಮಷ್ಮಷಾಕರಂ ದೃಷದಾ ಖಲ್ವಾನ್ ಇವ). ಅವನ ಪೌರುಷ ಎಂತಹುದೆಂದರೆ ಅತ್ರಿ, ಕಣ್ವ, ಜಮದಗ್ನಿಗಳಂತೆ ಅವನು ಕ್ರಿಮಿಗಳನ್ನು ನಾಶಮಾಡಬಲ್ಲ (೧೦ : ಅತ್ರಿವತ್ ವಃ ಕ್ರಿಮಯೋ ಹನ್ಮಿ ಕಣ್ವವತ್ ಜಮದಗ್ನಿವತ್). ಇಲ್ಲವೇ, ಅಗಸ್ತ್ಯನ ಮಂತ್ರದಿಂದ ಅವನ್ನವನು ಕೊಲ್ಲುತ್ತಾನೆ (೧೦ : ಅಗಸ್ತ್ಯಸ್ಯ ಬ್ರಹ್ಮಣಾ ಸಂ ಪಿನಷ್ಮಿ ಅಹಂ ಕ್ರಿಮೀನ್). ಒಟ್ಟಿನಲ್ಲಿ, ಕ್ರಿಮಿಗಳ ಬಾಧೆಯಿಂದ ತಪ್ಪಿಸಿಕೊಳ್ಳಲು ಅವನು ತಹತಹಿಸಬಹುದು, ಅಷ್ಟೆ. ೨೧ನೆಯ ಶತಮಾನದಲ್ಲಿ ನಾವಿನ್ನೂ ಮಾಡಲಾಗದಿರುವುದನ್ನು ಅಥರ್ವವೇದದ ಕಾಲದ ಜನ ಅಂದೇ ಮಾಡಿರಬೇಕಿತ್ತೆಂದು ನಿರೀಕ್ಷಿಸುವುದೇ ತಪ್ಪು. ವೇದದಿಂದ ಆ ಕಾಲದ ಬಾಧೆಗಳನ್ನು ನಾವು ತಿಳಿಯಬಹುದೇ ವಿನಾ ವೇದಮಂತ್ರಗಳಿಂದ ಬಾಧೆಯನ್ನು ನಿವಾರಿಸಿಕೊಳ್ಳಲಾಗುವುದಿಲ್ಲ.

ಕ್ರಿಮಿಗಳ ಬಾಧೆಯ ತರುವಾಯದಲ್ಲಿ ಕವಿಯು ಜ್ವರದ ಬಾಧೆಯನ್ನು ಪರಿಚಯಿಸಿದ್ದಾನೆ. ಅದಕ್ಕೆ "ತಕ್ಮನ್" ಎಂದು ಹೆಸರು (೫.೨೨). ಅದನ್ನು ಮಲೇರಿಯಾ ಎಂದು ಕೆಲವು ವಿದ್ವಾಂಸರು ಗುರುತಿಸಿದ್ದಾರೆ. ತಕ್ಮನಾಶನ ಮಾಡಬೇಕಾದರೂ ಮತ್ತೆ ದೇವತೆಗಳ ಮೊರೆ ಹೋಗಬೇಕು. ಅಗ್ನಿ, ಸೋಮ, ವರುಣ, ಇತ್ಯಾದಿಗಳೆಲ್ಲಾ ತಕ್ಮನ್‌ಅನ್ನು ದೂರಮಾಡಬೇಕು, ದುಷ್ಟವಾದುವನ್ನೆಲ್ಲಾ ದೂರ ಇರುವಂತೆ ಮಾಡಬೇಕು (೧). ಅಥರ್ವವೇದದ ಮಂತ್ರಗಳಿಂದ ರೋಗನಾಶ ಮಾಡಿಕೊಳ್ಳಬಹುದೆಂಬ ಐತಿಹ್ಯವನ್ನು ಹಲವು ಕಾಲದಿಂದ ಹರಡುತ್ತಾ ಬರಲಾಗಿದೆ. ನಿಜಕ್ಕೂ ಅಲ್ಲಿಯ ಮಂತ್ರಗಳಲ್ಲಿರುವುದು ಆಶಯವೇ ಹೊರತು

ನಾಶಪ್ರಕ್ರಿಯೆ ಅಲ್ಲ. ಅಗ್ನಿಗೆ ಅಹವಾಲು ಸಲ್ಲಿಸುವಂತೆ ಮಾರಮ್ಮನಿಗೂ ಸಲ್ಲಿಸಬಹುದು. ಆದರೆ ವೈದ್ಯಕೀಯವು ಉನ್ನತಹಂತ ಮುಟ್ಟಿದಾಗ ಮಾತ್ರವೇ "ದೈವ ವ್ಯಪಾಶ್ರಯ"ದಿಂದ "ಯುಕ್ತಿ ವ್ಯಪಾಶ್ರಯ"ಕ್ಕೆ ಕಾಲಿರಿಸಲು ಸಾಧ್ಯ. ತಕ್ಮನ್ ಮಾನವ ಶರೀರವನ್ನು ಹಳದಿ ಮಾಡಿಬಿಡುತ್ತದೆ, ಅಗ್ನಿಯಂತೆ ಶರೀರವು ಸುಡಲಾರಂಭಿಸುತ್ತದೆ. "ಮೇಲಕ್ಕೋ, ಕೆಳಕ್ಕೋ, ಶರೀರವನ್ನು ಬಿಟ್ಟು ಎಲ್ಲಿಗಾದರೂ ಹೋಗಿಬಿಡು" ಎಂದು ಕವಿಯು ಅಂಗಲಾಚುತ್ತಾನೆ (೩ : ...ತಕ್ಮಾನಂ ವಿಶ್ವಧಾವೀರ್ಯಾಧರಾಂಚಂ ಪರಾ ಸುವಾ). ಜ್ವರವು ಸಗಣಿ ಮೂಲದ್ದು (೪ : ಶಕಂಭರಸ್ಯ ಮುಷ್ಟಿಹಾ), ಅದು ಮಹಾವೃಷರಲ್ಲಿಗೆ ತೊಲಗಿಹೋಗಬೇಕು. ಮೂಲತಃ ಅದು ಬಾಹ್ಲೀಕರಲ್ಲಿದ್ದ ರೋಗ, ಈಗ ಅದು ಅಥರ್ವರ ಕವಿಯನ್ನು ತಟ್ಟಿಬಿಟ್ಟಿದೆ (೫). ಅದು ಸರ್ಪ, ಅದು ನಿರಂಗಿ (ಅಂದರೆ, ಅಂಗರಹಿತವಾದ್ದು). ಅದು ದೂರ ಎಲ್ಲಿಗಾದರೂ ಹೋಗಬೇಕು, ಬೇಕಾದರೆ ಯಾವುದಾದರೂ ದಾಸಿಯ ಹುಡುಗಿಗೆ ಸಿಡಿಲಿನಂತೆ ಬಡಿಯಬೇಕು, ದಷ್ಟಪುಷ್ಟವಾದ ಆ ಶೂದ್ರ ಹುಡುಗಿಯನ್ನು ತಬ್ಬಿ ಅಲ್ಲಾಡಿಸಿಬಿಡಬೇಕು (೬–೭ : ದಾಸೀಂ ನಿಷ್ಟಕ್ವರೀಂ ಇಚ್ಛ ತಾಂ ವಜ್ರೇಣ ಸಮರ್ಪಯ। ...ಶೂದ್ರಾಮಿಚ್ಛ ಪ್ರಫರ್ವ್ಯಂ ತಾಂ ತಕ್ಮನ್ ವೀವ ಧೂನುಹಿ). ವೈದಿಕ ಮೌಲ್ಯಗಳ ಶ್ರೇಷ್ಠತೆಯನ್ನು ವಿಜೃಂಭಿಸುವ ವಿದ್ವಾಂಸರು "ಹಾಳು ಜ್ವರವೇ, ನನಗೇಕೆ ತ್ರಾಸ ಕೊಡುತ್ತೀಯೆ, ಹೋಗಿ ಆ ಕೆಲಸದ ಹುಡುಗಿಗೆ ಬೇಕಾದರೆ ತ್ರಾಸ ಉಂಟುಮಾಡು, ಶೂದ್ರ ಹುಡುಗಿಯನ್ನು ಹಿಂಡಿ ಹಿಪ್ಪೆ ಮಾಡು" ಎಂದು ಹೇಳುವ ಮಟ್ಟಕ್ಕೆ ವೇದ ಸೂಕ್ತವು ಇಳಿದು ಬಿಡುತ್ತದೆಯೇ ಎಂದು ಸಂಕೋಚ ಮತ್ತು ಅಚ್ಚರಿ ಅನುಭವಿಸಬೇಕು ಎಂದರ್ಥ. ನಮ್ಮಲ್ಲಿ ಕೆಲವು ಬಾಡಿಗೆ ವಿದ್ವಾಂಸರಿದ್ದಾರೆ; ವಿದೇಶಗಳಲ್ಲಿ ನೆಲೆಸಿ ಸಂಶೋಧನೆ ಮಾಡಿ ಭಾರತದಲ್ಲಿ ಜಾತಿಯೆಂಬುದೆಂದೂ ಉಪಟಳ ನೀಡಲಿಲ್ಲ, ಜಾತಿ ವ್ಯವಸ್ಥೆ ಎಂಬುದೇನೂ ಇರಲಿಲ್ಲ, ಎಂದು ಹೇಳುತ್ತಾ ಗಂಟಲು ಹರಿದುಕೊಳ್ಳುತ್ತಾರೆ. ಈಗತಾನೆ ನಾವು ಗಮನಿಸಿದ ಅಥರ್ವವೇದದ ಮಂತ್ರಗಳನ್ನು ಅವರು ಗಮನಿಸುವ ಕಷ್ಟ ತೆಗೆದುಕೊಳ್ಳುವುದಿಲ್ಲ ಮತ್ತು ಇಂತಹ ಮಾತುಗಳು ವೈದಿಕ ಸಾಹಿತ್ಯದಲ್ಲಿ ನೂರಾರು ಬಾರಿ ಮತ್ತು ನೂರಾರು ಸಂದರ್ಭಗಳಲ್ಲಿ ಬಂದಿವೆಯೆಂಬುದು ಅವರಿಗೆ ಗೋಚರಿಸುವುದಿಲ್ಲ. ಅಥರ್ವವೇದದ ಕಾಲಕ್ಕಾಗಲೇ ವರ್ಣವಿಭಜನೆಯು ಪೂರ್ಣಪ್ರಮಾಣದಲ್ಲಿ ಅಸ್ತಿತ್ವಕ್ಕೆ ಬಂದಿದ್ದಿತೆಂಬುದು ವೇದವಾಕ್ಯಗಳಿಂದಲೇ ತಿಳಿಯಬಹುದು : ತಿಳಿಯುವ ಇಚ್ಛೆಯಿದ್ದಲ್ಲಿ ಮತ್ತು ತಿಳಿಯುವ ಬೌದ್ಧಿಕ ಸಾಮರ್ಥ್ಯವಿದ್ದರೆ !

ಜ್ವರದ ಬಳಿ ಹಲವು ಬಾಣಗಳಿವೆ. ಒಮ್ಮೆ ಶೀತ, ಒಮ್ಮೆ ಶಾಖ, ಒಮ್ಮೆ ಕೆಮ್ಮು; ಹೀಗೆ ಬಾಣಗಳ ಪ್ರಯೋಗ ನಡೆಯುತ್ತದೆ. "ಆ ಬಾಣಗಳಿಂದ ನಮ್ಮನ್ನು ಬಾಧಿಸಬೇಡ" ಎಂದು ಮಾಂತ್ರಿಕ ಕವಿ ಕೇಳಿಕೊಳ್ಳುತ್ತಾನೆ (೧೦ : ಯತ್ ತ್ವಂ ಶೀತೋಽಥೋ ರೂರಃ ಸಹ ಕಾಸಾವೇಪಯಃ। ಭೀಮಾಸ್ತೇ ತಕ್ಮನ್ ಹೇತಯಃ ತಾಭಿಃ ಸ್ಮ ಪರಿ ವೃಂಗ್ಧಿ ನಃ॥). ಜ್ವರಕ್ಕೆ




ಯಕ್ಷ್ಮರೋಗವು ಸೋದರ, ಕೆಮ್ಮು ಸೋದರಿ. ಅಂತೆಯೇ 'ಪಾಮನ್' ಎಂಬುದು ದಾಯಾದಿ. (ಪಾಮನ್ ಎಂದರೆ ಇಂದಿನ 'ಹರ್ಪಿಸ್' ಅಥವಾ ಸರ್ಪಸುತ್ತು). ಇಂತಹ 'ತಕ್ಮನ್'ನಿಂದ ತಪ್ಪಿಸಿಕೊಳ್ಳುವುದು ಹೇಗೆ ? ಒಂದು ಹಾದಿ ತೆರೆದುಕೊಳ್ಳುತ್ತದೆ : ಅದನ್ನು ಇಂತಿಷ್ಟು ಕ್ರಯಕ್ಕೆಂದು ಬೇರಾರಿಗಾದರೂ ತಗುಲಿಸಬೇಕು, ಅದೊಂದು ಮಾರಾಟದ ವಸ್ತುವಾಗಬೇಕು. ಆಗ ಇವರ ಹಿತ ಬಯಸದ ವಿರೋಧಿಗಳಾದ ಗಂಧಾರರಿಗೋ ಮೂಜವರಿಗೋ ಅಂಗರಿಗೋ ಇದನ್ನು ತಲೆಗೆ ಕಟ್ಟಬಹುದು (೧೪ : ಗಂಧಾರಿಭ್ಯೋ ಮೂಜವದ್ಭ್ಯೋ ಅಂಗೇಭ್ಯೋ ಮಗಧೇಭ್ಯಃ। ಪ್ರೈಷ್ಯನ್ ಜನಮಿವ ಶೇವಧಿಂ ತಕ್ಮಾನಂ ಪರಿ ದದ್ಮಸಿ॥). ಒಂದಂಶವು ಸ್ಪಷ್ಟವಾಗಿದೆ : ಅಥರ್ವವೇದದ ಕರ್ತೃಗಳು ಗಂಗಾ ಬಯಲಿಗೆ ಪ್ರವೇಶಿಸಿದ್ದಾರೆ, ಅವರಿಗೆ ಅಂಗರು, ಮಗಧರು, ಎಲ್ಲಾ ಗೊತ್ತು. ಅಂತೆಯೇ, ಅವರು ಯಾವ ದಾರಿ ಹಿಡಿದು ಸಿಂಧೂ ಪ್ರಾಂತ್ಯಕ್ಕೆ ಬಂದರೋ ಅಲ್ಲಿಯ ಗಂಧಾರರೂ ಗೊತ್ತು. ಕಾಬೂಲ್ ನದಿಯ ದಕ್ಷಿಣ ಭಾಗವನ್ನು ಗಂಧಾರ ಎನ್ನುತ್ತಾರೆ. ಸ್ವಾರಸ್ಯದ ಸಂಗತಿಯೆಂದರೆ, ಲಾಸೆನ್ ಎಂಬ ವಿದ್ವಾಂಸನು ಡೇರಿಯಸ್‌ನ ಶಿಲಾಶಾಸನವೊಂದನ್ನು ಪ್ರಸ್ತಾಪಿಸಿ ಆ ಶಾಸನದಲ್ಲಿ ಗಂಧಾರರು ಮತ್ತು "ಹಿದುಗಳು" ಉಲ್ಲೇಖಿಸಲ್ಪಟ್ಟಿದ್ದಾರೆಂದು ತಿಳಿಸಿದ್ದಾನೆ; ಎರಡು ಪಂಗಡಗಳವರೂ ತನ್ನ ಅಧೀನದಲ್ಲಿದ್ದವರೆಂದು ಡೇರಿಯಸ್ ಹೇಳಿಕೊಂಡಿದ್ದಾನೆ. "ಹಿದು" ಎಂಬುದರ ನಂತರದ ರೂಪ 'ಹಿಂದು.' ಡೇರಿಯಸ್‌ನ ಶಾಸನಕ್ಕಿಂತಲೂ ಮೊದಲು ಎಲ್ಲಾದರೂ 'ಹಿಂದು' ಎಂಬ ನಾಮಧೇಯವು ಕಾಣಿಸಿಕೊಂಡಿದೆಯೋ ಇಲ್ಲವೋ ತಿಳಿಯದು.

ಅಥರ್ವವೇದದ ಅತಿಸಂಕ್ಷಿಪ್ತ ಪರಿಚಯವನ್ನು ಮುಕ್ತಾಯ ಮಾಡುವ ಮುನ್ನ ಬೇರೆ ಮೂರು–ನಾಲ್ಕು ಸೂಕ್ತಗಳತ್ತ ಗಮನಹರಿಸೋಣ. ಅವುಗಳಲ್ಲಿ ಒಂದು ಪುಂಸವನಂ ಎಂಬುದು (೬.೧೧). ಕುಟುಂಬಕ್ಕೆ ಮಗ ಬೇಕು, ಮಗಳು ಬೇಡ, ಎನ್ನುವ ಸೂಕ್ತ ಅದು. ಪ್ರಾಚೀನಕಾಲದಲ್ಲಿ ಮಹಿಳೆಯ "ಶ್ರೇಷ್ಠ" ಪದವಿಯ ಬಗ್ಗೆ ಉದ್ದುದ್ದ ಮಾತನಾಡುವವರು ಇದನ್ನು ಮತ್ತು ಇಂತಹ ಬೇರೆ ಅನೇಕವನ್ನು ಗಮನಿಸಬೇಕು. ಮಹಿಳೆಯನ್ನು ತಾತ್ಸಾರದಿಂದ ನೋಡುವ ದನಿ ಋಗ್ವೇದದಲ್ಲೇ ವ್ಯಕ್ತವಾಗಿದೆ ಮತ್ತು ಕ್ರಮೇಣ ಅದು ಬೆಳೆಯುತ್ತಾ ಬಂದಿದೆ. ಅಥರ್ವವೇದದಲ್ಲಿ ಗಂಡಿಗಾಗಿ ಬೇಡಿಕೆ ಇಡುವುದು ಸಾಮಾನ್ಯ ಸಂಗತಿ. ಮುಂದಿನ ಹಂತದಲ್ಲಿ ಐತರೇಯ ಬ್ರಾಹ್ಮಣದಂತಹ ಗ್ರಂಥಗಳು ಹೆಣ್ಣಿನ ಬಗ್ಗೆ ಇನ್ನೂ ಹೆಚ್ಚು ಅನಾದರ ತೋರಿಸುತ್ತವೆ. ಐತರೇಯದ ಒಂದು ಆಖ್ಯಾನದಲ್ಲಿ ಮಕ್ಕಳಿಲ್ಲದ ರಾಜ ಹರಿಶ್ಚಂದ್ರನು ಸಂತತಿಯ ಸೌಭಾಗ್ಯ ಬಯಸುತ್ತಾನೆ. ಅವನ ಆಸ್ಥಾನದಲ್ಲಿ ಪರ್ವತ ಮತ್ತು ನಾರದ ಎಂಬಿಬ್ಬರು ಸಲಹೆಗಾರರಿದ್ದಾರೆ. ಅವರ ಸಲಹೆ ಇದು : "ಸಂತತಿ ಅಗತ್ಯ, ಆದರೆ ಗಂಡುಮಗನನ್ನು ಪಡೆ; ಹೆಣ್ಣು ಕುಟುಂಬಕ್ಕೆ ಹೊರೆ (ಮತ್ತು ಹೊರಗಿನವಳು), ಅವಳು ತಂದೆಯ ಹೃದಯವನ್ನೇ ಇರಿದುಬಿಡುತ್ತಾಳೆ" (ದಾರಿಕಾ ಹೃದಯದಾರಿಕಾ ಪಿತುಃ). ಅಥರ್ವವೇದದಲ್ಲಿಯೂ ಪುತ್ರಾಕಾಂಕ್ಷೆ ಮಿತಿಮೀರಿ ವ್ಯಕ್ತವಾಗಿದೆ. ಪ್ರಸ್ತುತ ಸೂಕ್ತದಲ್ಲಿ ಚಿತ್ರಿತವಾಗಿರುವುದು ಹೀಗೆ : ಶಮೀ ವೃಕ್ಷದ ಮೇಲೆ ಅಶ್ವತ್ಥ ವೃಕ್ಷವು ಹತ್ತಿದಾಗ ಗಂಡುಮಗುವಿನ ಜನನವಾಗುತ್ತದೆ; ಇದನ್ನು ಸ್ತ್ರೀಯರ ಮನಸ್ಸಿನಲ್ಲಿ ಬೇರೂರುವಂತೆ ಮಾಡಬೇಕು (೬.೧೧.೧ : ಶಮೀಂ ಅಶ್ವತ್ಥ ಆರೂಢಸ್ತತ್ರ ಪುಂಸವನಂ ಕೃತಂ। ತದ್ವೈ ಪುತ್ರಸ್ಯ ವೇದನಂ ತತ್ ಸ್ತ್ರೀಷು ಆ ಭರಾಮಸಿ ॥). ಅರಣಿಗಳಿಂದ ಬೆಂಕಿ ಹೊತ್ತಿಸುವ ಪ್ರಕ್ರಿಯೆಯನ್ನು ಇಲ್ಲಿ ಸ್ಮರಿಸಲಾಗಿದೆ. ಬನ್ನಿಮರದ ಕಡ್ಡಿಯ ಮೇಲೆ ಅಶ್ವತ್ಥ (ಅರಳಿ) ಮರದ ಕಡ್ಡಿಯನ್ನು ಉಜ್ಜಿದಾಗ ಬೆಂಕಿ ಕಾಣಿಸಿಕೊಳ್ಳುತ್ತದೆಂಬ ವಿಷಯದ ಹಿನ್ನೆಲೆಯಲ್ಲಿ ಮಗುವಿನ ಜನನವನ್ನು ಹೇಳಲಾಗಿದೆ. ಅರಣಿಗಳಿಂದ ಅಗ್ನಿಯ ಉತ್ಪಾದನೆಯ ಪ್ರಸ್ತಾಪವು ವೈದಿಕ ಸಾಹಿತ್ಯದಲ್ಲಿ ಹೇರಳವಾಗಿದೆ. ಸಂಭೋಗದ ಸಂಕೇತವಾಗಿಯೂ ಅದನ್ನು ನೋಡಬಹುದು. ಶಮಿ ಹೆಣ್ಣು, ಅಶ್ವತ್ಥ ಗಂಡು. ಹಿಂದೊಮ್ಮೆ ತಿರುಪತಿಯ ವೆಂಕಟೇಶ್ವರ ವಿಶ್ವವಿದ್ಯಾನಿಲಯದಲ್ಲಿ ನಡೆದ ವಿಚಾರ ಸಂಕಿರಣದಲ್ಲಿ "ಅರಣಿಗಳ ಉಜ್ಜುವಿಕೆಯನ್ನು ಸಂಭೋಗದ ಸಂಕೇತವೆಂದು ದೇವಿಪ್ರಸಾದ ಚಟ್ಟೋಪಾಧ್ಯಾಯ ಹೇಳಿದ್ದಾರೆ, ಅದು ಅನುಚಿತ ಮತ್ತು ಖಂಡನೀಯ" ಎಂದು ಅರಿಂದಮ ಚಕ್ರವರ್ತಿ ಎಂಬ ವಿದ್ವಾಂಸ ಸಿಟ್ಟು ಪ್ರದರ್ಶಿಸಿದ್ದ. ಆತ ಈಗ ಅಮೇರಿಕಾದ ಯಾವುದೋ ವಿಶ್ವವಿದ್ಯಾನಿಲಯದಲ್ಲಿ ಭಾರತೀಯ ತತ್ವಶಾಸ್ತ್ರ ಮತ್ತು ಸಂಸ್ಕೃತಿಯ ಪ್ರಾಧ್ಯಾಪಕ. ಈಗಲಾದರೂ ಆತನಿಗೆ ಅಥರ್ವವೇದದ ಈ ಮಂತ್ರವು ಗೊತ್ತಿದೆಯೋ ಇಲ್ಲವೋ ಎಂಬ ಸಂಶಯವಿದೆ. ವೇದದ ಕರ್ತೃಗಳಿಗೆ ಸಂಭೋಗದ ಮಾತಾಡುವುದು ಅಸಭ್ಯವೆನಿಸಿರಲಿಲ್ಲ. ಅಂತಹ ಮಾತಿದ್ದರೆ ವೈದಿಕ ಸಾಹಿತ್ಯದ ಹಿರಿಮೆಗೆ ಕಪ್ಪುಚುಕ್ಕೆ ಅಂಟಿಕೊಳ್ಳುತ್ತದೆಂದು ಭಾವಿಸುವುದು ಅನಗತ್ಯ. ಇಂದ್ರನು ಎಂತಹ ಸಂಭೋಗಪ್ರಿಯನೆಂಬುದನ್ನು ಋಗ್ವೇದದ ಹಲವು ಸೂಕ್ತಗಳಲ್ಲಿ ಸ್ವಾರಸ್ಯಕರವಾಗಿ

ವರ್ಣಿಸಲಾಗಿದೆ, ಅದಕ್ಕೆ ನಾವೇನೂ ಸಂಕೋಚ ಪಡಬೇಕಾಗಿಲ್ಲ! ಪ್ರಸ್ತುತ ಸೂಕ್ತದ ಎರಡನೆಯ ಮಂತ್ರದಲ್ಲಿ ತಂದೆಯ ಬೀಜ ಮತ್ತು ತಾಯಿಯಲ್ಲಿ ಅದು ಪೋಷಿಸಲ್ಪಡುವುದು ಪುತ್ರ ಜನನಕ್ಕೆ ಕ್ರಮವೆಂದು ಹೇಳಲಾಗಿದೆ (೨ : ಪುಂಸಿ ವೈ ರೇತೋ ಭವತಿ ತತ್ ಸ್ತ್ರಿಯಾಂ ಅನುಷಿಚ್ಯತೇ। ತದ್ವೈ ಪುತ್ರಸ್ಯ ವೇದನಂ ತತ್ ಪ್ರಜಾಪತಿಃ ಅಬ್ರವೀತ್॥). ಸಂಭೋಗದಿಂದ ಶಿಶು ಜನನವೆಂಬುದು ಪ್ರಜಾಪತಿಯ ವಿಧಿಯಂತೆ. ಇರಲಿ, ಕಡೆಗೆ ಕವಿ ಹೇಳುತ್ತಾನೆ, "ಬೇರೆಡೆಗಳಲ್ಲಿ (ಸಂಭೋಗ ದಿಂದ) ಹೆಣ್ಣು ಬೇಕಾದರೆ ಜನಿಸಲಿ, ಆದರೆ ನನಗೆ ಗಂಡುಮಗುವಾಗಲಿ" ಎಂದು (೩ : ಪ್ರಜಾಪತಿರನುಮತಿಃ ಸಿನೀವಾಲೀ ಅಚೀಕ್ಲೃಪತ್। ಸ್ತ್ರೈಷು ಅಯಮನ್ಯತ್ರ ದಧತ್ ಪುಮಾಂಸಮು ದಧದಿಹ॥). ತನಗೆ ಗಂಡು ಮಗು ಹುಟ್ಟಬೇಕೆಂಬುದು ಸಹ ಪ್ರಜಾಪತಿಯ ಆದೇಶ. ಅನುಮತಿ ಮತ್ತು ಸಿನೀವಾಲೀ ಎಂಬುವು ಚಂದ್ರನ ವರ್ಧನೆ ಮತ್ತು ಕ್ಷೀಣಿಸುವಿಕೆಗಳನ್ನು ತಿಳಿಸುತ್ತವೆ. ಚಂದ್ರನ ವಿವಿಧ ಹಂತಗಳು ಪುತ್ರಜನನದ ಸಂಕೇತವೆಂಬುದು ಇಲ್ಲಿಯ ಇಂಗಿತ.

ಬುಡಕಟ್ಟುಗಳಲ್ಲಿ ನಾಯಕನಿಗೆ ರಾಜನೆಂಬ ಅಭಿಧಾನವಿದೆ. ಅವನನ್ನು ಆ ಬಣದ ಜನ ಆಯ್ಕೆ ಮಾಡಿಕೊಳ್ಳುತ್ತಾರೆ. ಅದನ್ನು ಅಥರ್ವವೇದದಲ್ಲಿ, ಅಂತೆಯೇ ಋಗ್ವೇದದಲ್ಲಿ, ಹಲವು ಬಾರಿ ಹೇಳಲಾಗಿದೆ. "ತ್ವಾಂ ವಿಶೋ ವೃಣತಾಂ ರಾಜ್ಯಾಯ" ಎಂಬ ಮಾತು ಅಥರ್ವದಲ್ಲಿದೆ (೩.೪.೨). "ಪ್ರಜೆಗಳಿಂದ ರಾಜನ ಆಯ್ಕೆ" ಎಂಬುದು ಆ ಸೂಕ್ತದ ಶೀರ್ಷಿಕೆ. ಅಂಥದೇ ಇನ್ನೊಂದು ಸೂಕ್ತದಲ್ಲಿ (೬.೮೭) ಅವನ ಆಯ್ಕೆ ಹಾಗೂ ಹೊಸದಾಗಿ ಆಯ್ಕೆಗೊಂಡಿರುವ ಅವನ ಶ್ಲಾಘನೆ ಇದೆ. ಋಗ್ವೇದದಲ್ಲೂ ಅಂತಹ ಸೂಕ್ತವೊಂದಿದೆ (೧೦.೧೭೩). "ನಿನ್ನನ್ನು ರಾಜನಾಗಿ ಆಯ್ಕೆ ಮಾಡಿದ್ದಾರೆ, ನೀನು ಗಟ್ಟಿಯಾಗಿ ನಿಲ್ಲು, ಎಲ್ಲ ಬಣಗಳೂ ನಿನ್ನನ್ನು ಮಾನ್ಯ ಮಾಡುವಂತಾಗಲಿ, ನಿನ್ನ ರಾಜ್ಯ ಅಳಿಯದಿರಲಿ" ಎಂದು ಸೂಕ್ತವು (ಅ.ವೇ. ೬.೮೭) ಆರಂಭ ಗೊಂಡಿದೆ (೧ : ಆ ತ್ವಾಹಾರ್ಷಂ ಅಂತರಭೂಃ ಧ್ರುವಃ ತಿಷ್ಠ ಅವಿಚಾಚಲತ್। ವಿಶಸ್ತ್ವಾ ಸರ್ವಾ ವಾಂಛಂತು ಮಾತ್ವತ್ ರಾಷ್ಟ್ರಂ ಅಧಿ ಭ್ರಶತ್॥). ನೀನು ಇಂದ್ರನಂತೆ, ಪರ್ವತದಂತೆ, ಸುಭದ್ರವಾಗಿರು; ಎಲ್ಲವನ್ನೂ ಸ್ವಾಧೀನಮಾಡಿಕೊ (೨). ಹಿಂದೆ ಪ್ರಸ್ತಾಪಿಸಿದ ಸೂಕ್ತದಲ್ಲಿ (೩.೪) ಕವಿಯು ಹೇಳಿದ್ದಾನೆ : "ಇಂದ್ರನೇ, ಇಂದ್ರನನ್ನು ನಮ್ಮ ಸಮುದಾಯಕ್ಕೆ ಕೊಡು; ಅವನನ್ನು ಹಿಂದಿನ ರಾಜನ ಜಾಗದಲ್ಲಿರಿಸು," ಎಂದು (೩.೪.೬ : ಇಂದ್ರ ಇಂದ್ರಂ ಅನುಷ್ಯಾಃ ಪರೇಹಿ ಸಂ ಹಿ ಅಜ್ಞಾಸ್ಥಾ ವರುಣೈಃ ಸಂವಿದಾನಃ). ಒಟ್ಟಿನಲ್ಲಿ ಮಾನವಶಾಸ್ತ್ರವು ಬುಡಕಟ್ಟು ಜನಾಂಗಗಳನ್ನು ಕುರಿತು ಕಲೆಹಾಕಿರುವ ಮಾಹಿತಿಗೆ ಋಗ್ವೇದ-ಅಥರ್ವವೇದಗಳು ಸಹ ಸಮರ್ಥನೆ ಒದಗಿಸುತ್ತವೆ.

ಅಥರ್ವವೇದದ ಕೆಲವು ಸೂಕ್ತಗಳು ಇಡಿಯಾಗಿ ಗದ್ಯರೂಪದಲ್ಲಿವೆ. ಅಂತಹ ಒಂದು ಸೂಕ್ತವು (೯.೭) ಗೋವನ್ನು ಕುರಿತಾದದ್ದು. ವೇದಕಾಲೀನ ಸಂಪತ್ತುಗಳಲ್ಲಿ ಗೋವಿಗೆ ಪ್ರಮುಖ ಸ್ಥಾನವಿದೆ. ಕೆಲವು ಮುನಿಗಳು ಲಕ್ಷಗಟ್ಟಲೆ ಗೋವುಗಳನ್ನು ಬಲುವಳಿಯಾಗಿ ಪಡೆಯುತ್ತಿದ್ದರೆಂದು ಬೃಹದಾರಣ್ಯಕ ಮುಂತಾದ ಉಪನಿಷತ್ತುಗಳಲ್ಲಿ ಹೇಳಲಾಗಿದೆ. ಅವನ್ನು ಮುನಿಗಳು ಹೇಗೆ ಸಾಕುತ್ತಿದ್ದರೆಂಬುದನ್ನು ಎಲ್ಲೂ ವಿಶದೀಕರಿಸಿದಂತೆ ತೋರುವುದಿಲ್ಲ. ಅಥರ್ವವೇದದ ಗೋಸೂಕ್ತವು (೯.೭) ಗೋವನ್ನು "ದೇವತೆಗಳ ತಾಣ"ವೆಂದು ನೇರವಾಗಿ ಹೇಳದಿದ್ದರೂ ಗೋವಿನ ಅಂಗಾಂಗಗಳನ್ನು ವಿವಿಧ ದೇವತೆಗಳೊಡನೆ ಸಮೀಕರಿಸುತ್ತದೆ. ಉದಾಹರಣೆಗೆ, ಗೋವಿನ ಎರಡು ಕೊಂಬುಗಳೂ ಪ್ರಜಾಪತಿ, ತಲೆಯು ಇಂದ್ರ, ಹಣೆಯು ಅಗ್ನಿ, ಕುತ್ತಿಗೆಯು ಯಮ, ಮಿದುಳು ಸೋಮ, ಮೇಲ್ದವಡೆಯು ಆಕಾಶ, ಕೆಳದವಡೆಯು ಭೂಮಿ, ನಾಲಿಗೆಯು ಮಿಂಚು, ಹಲ್ಲುಗಳು, ಮರುತ್ತುಗಳು, ಭುಜಗಳು ಕೃತ್ತಿಕೆಯರು (ಭುಜಗಳು ಎರಡು, ಆದರೆ ಕೃತ್ತಿಕೆಯರು ಏಳು), ಕೆಚ್ಚಲು ಮಳೆದೇವತೆ, ಇತ್ಯಾದಿ. ದೇವತೆಗಳೊಡನೆ ಗೋವಿನ ಅಂಗಾಂಗಗಳ ಸಮೀಕರಣಕ್ಕಿಂತಲೂ ಹೆಚ್ಚು ಮುಖ್ಯವಾದದ್ದು ಈ ಸೂಕ್ತದಲ್ಲಿ ಗೋವಿನ ಎಲ್ಲ ಅಂಗಗಳನ್ನೂ ಹೆಸರಿಸಲಾಗಿದೆ ಎಂಬುದು. ಹೀಗೆ ಹೆಸರಿಸಲಾಗಿರುವ ಭಾಗಗಳನ್ನು ಭಾಗಶಃ ಮಾತ್ರ ಪಟ್ಟಿ ಮಾಡಬಹುದು : ಕೊಂಬು, ತಲೆ, ಹಣೆ, ಕುತ್ತಿಗೆ, ನಾಲಿಗೆ, ಹಲ್ಲುಗಳು, ಭುಜಗಳು, ಬೆನ್ನೆಲುಬು, ಸ್ನಾಯು, ಎದೆ, ಹೊಟ್ಟೆ, ಮುಂಗೈಗಳು, ಕೈಗಳು, ಹಿಂಭಾಗ, ಬಾಲ, ಕೂದಲು, ಪೃಷ್ಠಗಳು, ತೊಡೆ, ಮಂಡಿಕೀಲುಗಳು, ಕಾಲುಗಳು, ಗೊರಸುಗಳು (ಅವು ಅದಿತಿಯಂತೆ), ಹೃದಯ, ಪಿತ್ತಜನಕಾಂಗ, ಹೃದಯ ಕೋಶ, ಗುದ, ಮೂತ್ರಪಿಂಡಗಳು, ವೃಷಣಗಳು (ವೃಷಭದಲ್ಲಿ), ಲಿಂಗ (ಯೋನಿ), ಗರ್ಭ (ಹಸುವಿನಲ್ಲಿ), ಕೆಚ್ಚಲುಗಳು, ತೊಗಲು, ಸಗಣಿ, ರಕ್ತ, ಮೇದಸ್ಸು (ಮಾಂಸಲ), ಮಜ್ಜೆ, ಇತ್ಯಾದಿ. ಅವಯವಗಳನ್ನು ಸಾಕಷ್ಟು ಕ್ಲುಪ್ತವಾಗಿ ಇಲ್ಲಿ ಹೆಸರಿಸಲಾಗಿದೆಯೆನ್ನಲು ಅಡ್ಡಿಯಿಲ್ಲ.

## ನಿಜ

**ಮದ್ಯ ನಿಷೇಧಿಸಿ**

**ಚಳುವಳಿಯ**

**ಮಧ್ಯದಲ್ಲೆ**

**ನಮ್ಮ ನಾಯಕರು**

**ಮಾಯವಾದದ್ದೇನೋ**

**ನಿಜ;**

**ಮರುದಿನ**

**ಪಕ್ಷದ ಕಚೇರಿಯ ಮೇಲೆ**

**ತಲೆ ಕೆಳಕಾಗಿ**

**ಹಾರುತ್ತಿತ್ತು ರಾಷ್ಟ್ರಧ್ವಜ**

ಡಾ॥ ವಿ. ಪುಗಳೇಂದಿ
ಬಳ್ಳಾರಿ

ಕಡೆಯದಾಗಿ, ಇಂದು ನಮ್ಮ ವಿಷಮ ವರ್ತನೆಯಿಂದಾಗಿ ಭುಗಿಲೆದ್ದಿರುವ ಕೊರತೆಗಳನ್ನು ತುಂಬಿಕೊಳ್ಳಲು, ಸಾಮಾಜಿಕ ಸೌಹಾರ್ದತೆಯನ್ನು ಕಾಪಾಡಿಕೊಳ್ಳಲು, ಅಥರ್ವವೇದದ ಯಾವುದಾದರೂ ಉದಾತ್ತ ಮೌಲ್ಯವು ನಮಗೆ ದಾರಿದೀಪವಾಗಬಹುದೆ ಎಂಬುದನ್ನು ಆಂತರ್ಯದಲ್ಲಿ ವಿಚಾರಮಾಡಿಕೊಳ್ಳೋಣ. ಆರನೆಯ ಕಾಂಡದಲ್ಲಿ ಅಂಥದೊಂದು ಪ್ರಸಂಗವಿದೆ (೬.೪೨). ವೇದಗಳ ಬಗ್ಗೆ ನಮಗೆ ಗೌರವವಿದ್ದರೆ ಈ ಸೂಕ್ತವನ್ನು ಮನನ ಮಾಡಿಕೊಳ್ಳೋಣ, ಅದರ ಆಶಯಗಳನ್ನು ಪ್ರಾಯೋಗಿಕವಾಗಿ ಪಾಲಿಸೋಣ. ಆ ಸೂಕ್ತವನ್ನು "ಪರಸ್ಪರ ಚಿತ್ತ ಏಕೀಕರಣಂ" ಎಂದು ಕರೆಯಲಾಗಿದೆ. ಅದರಲ್ಲಿ ಇರುವುದು ಮೂರೇ ಮಂತ್ರಗಳು :

೧. ಅವ ಜ್ಯಾಮಿವ ಧನ್ವನೋ ಮನ್ಯುಂ ತನೋಮಿ ತೇ ಹೃದಃ।
ಯಥಾ ಸಂಮನಸೌ ಭೂತ್ವಾ ಸಖಾಯಾವಿವ ಸಚಾವಹೈ॥

(ಬಿಲ್ಲಿನಿಂದ ಬಾಣವನ್ನು ಕಳಚಿಡುವಂತೆ ನಿನ್ನ ಹೃದಯದಲ್ಲಿರುವ ಕೋಪವನ್ನು ನಾನು ತಣಿಸುವೆ. ಆಗ ನಾವಿಬ್ಬರೂ ಏಕಮನಸ್ಕರಾಗಿ ಆತ್ಮೀಯ ಸ್ನೇಹಿತರಂತೆ ಜೊತೆಯಾಗಿ ಹೆಜ್ಜೆ ಹಾಕಬಲ್ಲೆವು.)

೨. ಸಖಾಯಾವಿವ ಸಚಾವಹಾ ಅವ ಮನ್ಯುಂ ತನೋಮಿ ತೇ।
ಅಧಸ್ತೇ ಅಶ್ಮನೋ ಮನ್ಯುಂ ಉಪಾಸ್ಯಾಮಸಿ ಯೋ ಗುರುಃ॥

(ನಾವು ನೇಹಿಗರಂತೆ ಜೊತೆಯಾಗಿ ನಡೆಯೋಣ; ನಿನ್ನ ಕೋಪದ ಭಾವನೆಯನ್ನು ನಾನು ಇಲ್ಲವಾಗಿಸುತ್ತೇನೆ. ಒಂದು ದೊಡ್ಡ ಬಂಡೆಯ ಕೆಳಗೆ ನಿನ್ನ ಕೋಪವನ್ನಿರಿಸಿ ಅದನ್ನು ಮುಚ್ಚಿಬಿಡುತ್ತೇನೆ.)

೩. ಅಭಿ ತಿಷ್ಠಾಮಿ ತೇ ಮನ್ಯುಂ ಪಾರ್ಷ್ಣ್ಯಾ ಪ್ರಪದೇನ ಚ।
ಯಥಾವಶೋ ನ ವಾದಿಷೋ ಮಮ ಚಿತ್ತಮುಪಾಯಸಿ॥

(ನಿನ್ನ ಕೋಪವನ್ನು ನಾನು ತುಳಿದುಹಾಕುವೆ, ನನ್ನ ಹಿಮ್ಮಡಿ ಮತ್ತು ಕಾಲ್ಬೆರಳುಗಳಡಿ ಹೊಸಕಿ ಹಾಕುವೆ. ನೀನು ನನ್ನೊಡನೆ ಆಗ ಸಮ್ಮಿಳಿತಗೊಳ್ಳುವೆ, ಎಂದಿಗೂ ನೀನು ಕ್ರುದ್ಧನಾಗಿ ಮಾತನಾಡುವುದಿಲ್ಲ.)

– ಇದು ಪರಸ್ಪರ ಕ್ರಿಯೆ. ನಾನವನಿಗೆ ಮಾಡುವುದನ್ನು ಅವನು ನನಗೆ ಮಾಡುತ್ತಾನೆ. ಆಗ ಮಾಂತ್ರಿಕತೆಯಿಂದ ಸ್ನೇಹವು ಸಿದ್ಧಿಸುತ್ತದೆ. ಇದು ಅಪೌರುಷೇಯವೆಂದು ವೃಥಾ ಹೇಳಲಾಗುವ ವೇದದ ಸಂದೇಶವಲ್ಲ, ಮಾನವರು ಅನುಭವದಿಂದ ಪರಸ್ಪರರಲ್ಲಿ ವಿಕಾಸಗೊಳಿಸಿಕೊಳ್ಳುವ ಮಾನಸಿಕ ಸಾಮ್ಯತೆ. ಅದು ವೇದದಿಂದ, ವೇದಕಾಲೀನ ಬುಡಕಟ್ಟು ಜೀವನದಿಂದ, ನಾವು ರೂಢಿಸಿಕೊಳ್ಳಬೇಕಾದ ಮೌಲ್ಯಸಂಪತ್ತು.

ಜಿ. ರಾಮಕೃಷ್ಣ
೨-ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್
೨೨/೧, ೪ನೇ ಕ್ರಾಸ್, ಕಾವೇರಿನಗರ, ಬನಶಂಕರಿ ೩ನೇ ಹಂತ
ಬೆಂಗಳೂರು - ೫೬೦ ೦೮೫



## ಸ್ವಾತಂತ್ರ್ಯಾನಂತರದ ಭಾರತ –೨೫

# ಮೋದಿ ಸರಕಾರದ ಆಡಳಿತ ಅಭಿವೃದ್ಧಿಗಿಂತ ಆತಂಕವೇ ಹೆಚ್ಚು

**ಮೋ**ದಿ ನೇತೃತ್ವದ ಎನ್‌ಡಿಎ ಸರಕಾರ ಕೇಂದ್ರದಲ್ಲಿ ಅಧಿಕಾರ ವಹಿಸಿಕೊಂಡು ಹದಿನೆಂಟು ತಿಂಗಳುಗಳು ಮುಗಿದಿವೆ. ಮುಂದಿನ ದಿನಗಳು ಹೇಗಿರುತ್ತವೆ ಎಂಬುದಕ್ಕೆ ಸೂಚನೆಗಳು ಪ್ರಕಟಗೊಂಡಿವೆ. ಇತ್ತೀಚೆಗೆ ಉತ್ತರಪ್ರದೇಶದ ದಾದ್ರಿ ಗ್ರಾಮದಲ್ಲಿ ನಡೆದ ಕಗ್ಗೊಲೆ, ಅದನ್ನು ಭಾಜಪ ಸಮರ್ಥಿಸಿಕೊಂಡಿರುವ ರೀತಿ, ಕೋಮುದ್ವೇಷದ ಕಿಚ್ಚೆಬ್ಬಿಸಲು ನಡೆಸುತ್ತಿರುವ ಅಬ್ಬರ ಅದಕ್ಕೆ ಸಾಕ್ಷಿ. ಗೋಮಾಂಸ ಭಕ್ಷಣೆಯ ಆರೋಪದ ಮೇಲೆ ಅಮಾಯಕ ಮುಸಲ್ಮಾನನ ಕುಟುಂಬದ ಮನೆಯ ಮೇಲೆ ನಡೆದ ದಾಳಿಯಲ್ಲಿ ಸಂಭವಿಸಿದ ಕೊಲೆ ಅದು. ರಾಷ್ಟ್ರಪತಿ ಪ್ರಣವ್ ಮುಖರ್ಜಿ ಕೂಡ ಘಟನೆಯ ಬಗ್ಗೆ ಕಳವಳ ವ್ಯಕ್ತಗೊಳಿಸಿ, ಸಾಮರಸ್ಯಕ್ಕೆ ಕರೆ ನೀಡಿದರು. ಆದರೂ ಪ್ರಮುಖ ಆರೋಪಿಗಳು ಮಾತ್ರ ಇನ್ನೂ ಆರಾಮವಾಗಿದ್ದಾರೆ. ಪ್ರಧಾನಿ ನರೇಂದ್ರ ಮೋದಿ ಇಷ್ಟೆಲ್ಲ ಆದಮೇಲೆ, ಹತ್ತುದಿನಗಳ ನಂತರ ಮೌನ ಮುರಿದು ಬೇಕೋ ಬೇಡವೋ ಎಂಬಂತೆ, ಘಟನೆಯನ್ನು ನೇರವಾಗಿ ಪ್ರಸ್ತಾಪಿಸದೆ ಕೋಮುಸೌಹಾರ್ದಕ್ಕೆ ಕರೆ ನೀಡಿ ಅಭಿವೃದ್ಧಿಮಂತ್ರ ಪಠಿಸಿದ್ದು ವಿಪರ್ಯಾಸ. ಯಾವುದೇ ವಿವಾದಾತ್ಮಕ ವಿಷಯವನ್ನು ಕುರಿತು ಮೌನವಾಗಿರುವುದನ್ನು ಪ್ರಧಾನಿ ರೂಢಿಸಿಕೊಂಡಿದ್ದಾರೆ. ಪ್ರಧಾನಿ ಮಾತ್ರ ಅಭಿವೃದ್ಧಿಮಂತ್ರ ಪಠಿಸುವುದು, ಉಳಿದವರು ಏನು ಬೇಕಾದರೂ ಮಾಡಬಹುದೆಂಬುದೇ ಸಂಘಪರಿವಾರದ ಆಣತಿ ಎಂದು ತೋರುತ್ತದೆ.

ಒಂದೂವರೆ ವರ್ಷದಲ್ಲಿ ದೇಶದಲ್ಲಿ ನಾನಾ ಕಡೆಗಳಲ್ಲಿ ನಡೆದಿರುವ ಪ್ರಚೋದನಕಾರಿ ಚರ್ಯೆಗಳಲ್ಲಿ ಉತ್ತರಪ್ರದೇಶದ ದಾದ್ರಿ ಘಟನೆ ಇತ್ತೀಚಿನದು. ಪ್ರಾಯಶಃ ಭಯದ ವಾತಾವರಣ ಸೃಷ್ಟಿಸಿ ಅಲ್ಪಸಂಖ್ಯಾತರನ್ನು ನಿಯಂತ್ರಣದಲ್ಲಿರಿಸಲು ಸಂಘ ಪರಿವಾರದ ಮುಂಚೂಣಿ ಸಂಘಟನೆಗಳು ರೂಪಿಸಿರುವ ತಂತ್ರ ಇದು ಎಂದು ತೋರುತ್ತದೆ. ಅದರಿಂದಲೇ ದೇಶದಲ್ಲಿ ವೈಚಾರಿಕ ವಾಣಿಯನ್ನು ಬಗ್ಗುಬಡಿಯಲು ಷಡ್ಯಂತರ ರೂಪಿಸಲಾಗಿದೆ. ಮಹಾರಾಷ್ಟ್ರದಲ್ಲಿ ಕಮ್ಯೂನಿಸ್ಟ್ ನಾಯಕ ಗೋವಿಂದ ಪಾನ್ಸರೆ, ಮೂಢನಂಬಿಕೆ ವಿರುದ್ಧ ಹೋರಾಟ ನಡೆಸಿದ ದಾಭೋಲ್ಕರ್, ಇತ್ತೀಚೆಗೆ ಕರ್ನಾಟಕದ ಸಂಶೋಧಕ, ವಿಚಾರವಾದಿ ಎಂ. ಎಂ. ಕಲ್ಬುರ್ಗಿಯವರ ಹತ್ಯೆ ಒಂದು ಎಚ್ಚರಿಕೆಯ ಗಂಟೆ. ಇದು ದೇಶದಲ್ಲಿ ವೈಚಾರಿಕತೆಯ ಕುರಿತು ಹೆಚ್ಚುತ್ತಿರುವ ಅಸಹನೆಗೆ ದ್ಯೋತಕ. ಅಭಿವ್ಯಕ್ತಿ ಸ್ವಾತಂತ್ರ್ಯದ ಮೇಲೆ ನಡೆದಿರುವ ಹಲ್ಲೆ. ಇದುವರೆಗೆ ಮೂರೂ ಕೊಲೆಗಳ ಪಾತಕಿಗಳನ್ನು ಹಿಡಿಯುವುದರಲ್ಲಿ ಪೊಲೀಸರು ವಿಫಲರಾಗಿದ್ದಾರೆ. ನೈತಿಕ ಪೊಲೀಸುಗಿರಿ ನಡೆಸುವವರು ಮಾತ್ರ ಯಾವ ಅಡ್ಡಿಯೂ ಇಲ್ಲದೆ ತಮ್ಮ ಚಟುವಟಿಕೆ ನಡೆಸಿಕೊಂಡು ಹೋಗುತ್ತಿದ್ದಾರೆ. ಇದು ಪ್ರಾಯಶಃ ಒಳ್ಳೆಯ ಆಡಳಿತದ ಒಂದು ಬಗೆಯೋ ಏನೋ.

ಆಡಳಿತ ವಹಿಸಿಕೊಂಡ ಹದಿನೆಂಟು ತಿಂಗಳುಗಳಲ್ಲಿ ಹದಿನೆಂಟು ದೇಶಗಳಲ್ಲಿ ಪ್ರಧಾನಿ ಪ್ರವಾಸಮಾಡಿದ್ದು ಒಂದು ದಾಖಲೆ. ಹಾಗೆಯೇ ಅಮೆರಿಕದ ಅಧ್ಯಕ್ಷ ಬರಾಕ್ ಒಬಾಮರನ್ನೂ ಒಂದೇ ವರ್ಷದಲ್ಲಿ ಮೂರು ಸಲ ಮುಖಾಮುಖಿಯಾಗಿ ಭೇಟಿಯಾಗಿದ್ದು ಕೂಡ. ಇಷ್ಟೆಲ್ಲ ಆದರೂ ವಿದೇಶೀ ಬಂಡವಾಳ ಹರಿದು ಬಂದಿರುವುದು ಅಷ್ಟಕ್ಕಷ್ಟೆ. 'ಭಾರತದಲ್ಲೇ ತಯಾರಿಸಿ' ಎನ್ನುವುದು ಘೋಷಣೆಯಾಗಿಯೇ ಉಳಿದಿದೆಯೇ ಹೊರತು ಬೇರೇನೂ ಆಗಿಲ್ಲ. ಹೊಸ ಹೊಸ ಆಶ್ವಾಸನೆಗಳನ್ನು, ಘೋಷಣೆಗಳನ್ನು ಹೊಸೆಯುವುದರಲ್ಲಿ ಮೋದಿ ತಮ್ಮ ಪ್ರಾವೀಣ್ಯತೆಯನ್ನು ತೋರಿದ್ದಾರೆ. ವಿದೇಶೀ ಯಾತ್ರೆಯ ಕಾಲದಲ್ಲಿ ತಮ್ಮ ದಿರಿಸಿನ ಪ್ರದರ್ಶನ ಒಂದು ಕಡೆಯಾದರೆ, ಭಾರತೀಯ ಸಂಜಾತರನ್ನು ಉದ್ದೇಶಿಸಿ ಮಾತನಾಡುವಾಗ ತಮ್ಮ ಪ್ರತಾಪ ಕೊಚ್ಚಿಕೊಳ್ಳುವುದು, ವಿಪಕ್ಷಗಳನ್ನು ಗೇಲಿ ಮಾಡುವುದು, ಹಿಂದಿನ ಆಡಳಿತಗಳನ್ನು ಮೂದಲಿಸುವುದು ಪರಿಪಾಠ. ತಮ್ಮ ಯಾವ ವಿದೇಶೀ ಪ್ರವಾಸ ಕಾಲದಲ್ಲೂ ವಿದೇಶಾಂಗ ಸಚಿವರನ್ನು ಕರೆದೊಯ್ಯದೆ ಕಡೆಗಣಿಸಿರುವುದನ್ನು ಕಾಣಬಹುದು. ಅಮೆರಿಕದೊಂದಿಗೆ ಕೈಜೋಡಿಸುವುದು ಭಾಜಪದ ನೀತಿಯ ಉದ್ದೇಶಗಳಲ್ಲಿ ಒಂದು. ರಕ್ಷಣಾ ಇಲಾಖೆಗೆ ಅಗತ್ಯವಾದ ಶಸ್ತ್ರಾಸ್ತ್ರಗಳ ಖರೀದಿಗೆ ದೊಡ್ಡ ಪ್ರಮಾಣದಲ್ಲೇ ಒಪ್ಪಂದವಾಗಿದೆ. ಇದುವರೆಗೆ ರಷ್ಯ ಪ್ರಧಾನವಾಗಿ ಶಸ್ತ್ರಾಸ್ತ್ರಗಳನ್ನು ಒದಗಿಸುತ್ತಿತ್ತು. ಪ್ರವಾಸದ ಕಾಲದಲ್ಲಿ ಮೋದಿ ಸಾಕಷ್ಟು ಒಪ್ಪಂದಗಳನ್ನು ಮಾಡಿಕೊಂಡು ಬಂದಿದ್ದಾರೆ. ಉದ್ಯಮಿಗಳನ್ನೂ ಭೇಟಿಯಾಗಿದ್ದಾರೆ. ಈ ಒಪ್ಪಂದಗಳನ್ನು ಇಂಗ್ಲಿಷ್‌ನಲ್ಲಿ 'ಮೆಮೊರಾಂಡಮ್ ಆಫ್ ಅಂಡರ್‌ಸ್ಟ್ಯಾಂಡಿಂಗ್', ಹ್ರಸ್ವವಾಗಿ 'ಎಂಓಯು' ಎನ್ನುತ್ತಾರೆ. ಇದನ್ನು ಕನ್ನಡದಲ್ಲಿ ಚಿಕ್ಕದಾಗಿ 'ತಿಳುವಳಿಕೆ ಪತ್ರ' ಎಂದು ಕರೆಯಬಹುದು. ಈ ಒಪ್ಪಂದದಲ್ಲಿ ಏನೇ ನಮೂದಾಗಿದ್ದಾಗ್ಯೂ ಅದು ಕಾರ್ಯಗತವಾಗಬೇಕೆಂದೇನಿಲ್ಲ. ಇದು ಒಂದು ಸಂಪ್ರದಾಯ, ಅಷ್ಟೆ. ವಿವರಗಳಿಗೆ ಬಂದಾಗಲೇ ತಕರಾರು. ಹಾಗಾಗಿ ಎಷ್ಟೋ 'ಎಂಓಯು'ಗಳು ಕಾಗದದ ಮೇಲೇ ಉಳಿಯುತ್ತವೆ. ಮೋದಿಗೆ ಇದು ತಿಳಿಯದ್ದೇನಲ್ಲ. ಪ್ರಚಾರಕ್ಕೆ ಉಪಯೋಗಕ್ಕೆ ಬಂದೀತು. ಪ್ರಪಂಚದ ಶಸ್ತ್ರಾಸ್ತ್ರ ಮಾರುಕಟ್ಟೆಯಲ್ಲಿ ಬಹುದೊಡ್ಡ ಪಾಲು ಅಮೆರಿಕಾಗೆ ಸೇರಿದ್ದು. ಹಾಗೆಯೇ ಅಮೆರಿಕದ ಉದ್ಯಮಗಳಲ್ಲಿ ಅದರ ತಯಾರಿಕೆಗೆ ಆದ್ಯತೆ. ಅಂಥದ್ದರಲ್ಲಿ ಅದು ಮಾರುಕಟ್ಟೆ ಕಳೆದುಕೊಳ್ಳುತ್ತದೆಯೇ ? ಏನೇ ಯೋಚಿಸಿದರೂ ಅದು ಭಾರತದಲ್ಲೇ ತಯಾರಿಸಲು ಮುಂದೆ ಬರುವುದು ಅನುಮಾನ.

ಇನ್ನು ನೆರೆರಾಷ್ಟ್ರಗಳ ಜೊತೆ ಸಂಬಂಧಗಳ ಕುರಿತು ಹೇಳುವಂಥದ್ದೇನಿಲ್ಲ. ಬಂಗ್ಲಾ ದೇಶದ ಗಡಿಯಲ್ಲಿ ಗ್ರಾಮಗಳ ಹೊಂದಾಣಿಕೆ ಕುರಿತು ಆಗಿರುವ ಒಪ್ಪಂದ ಹಾಗೂ ಅದು ಕಾರ್ಯಗತವಾಗಿರುವ ರೀತಿ ಒಂದು

ಪ್ರಮುಖ ಹೆಜ್ಜೆ. ಇದರಲ್ಲಿ ಪಶ್ಚಿಮ ಬಂಗಾಳ ಸರಕಾರದ ಪಾತ್ರ ದೊಡ್ಡದು. ನೇಪಾಳ ಈಚೆಗೆ ಹೊಸ ಸಂವಿಧಾನವೊಂದನ್ನು ಅಂಗೀಕರಿಸಿ ಜಾತ್ಯತೀತ ರಾಷ್ಟ್ರವೆಂದು ಘೋಷಿಸಿರುವುದು ಭಾಜಪ ಸರಕಾರಕ್ಕೆ ಇರಸುಮುರಸು. ಇದುವರೆಗೆ ಪ್ರಪಂಚದಲ್ಲಿ ಏಕೈಕ ಹಿಂದೂರಾಷ್ಟ್ರ ಎಂದು ಅಧಿಕೃತವಾಗಿ ಕರೆದುಕೊಂಡಿದ್ದು ಚಿಕ್ಕ ನೇಪಾಳ ಮಾತ್ರ. ಪಾಕಿಸ್ತಾನದೊಂದಿಗೆ ನಮ್ಮ ಸಂಬಂಧಗಳು ಮತ್ತೆ ಹಳಸಿಕೊಂಡಿರುವುದರಲ್ಲಿ ವಿಶೇಷವೇನಿಲ್ಲ.

ಉತ್ತಮ ಆಡಳಿತ ಹಾಗೂ ಅಭಿವೃದ್ಧಿ ಭರವಸೆ ನೀಡಿರುವ ಮೋದಿ ಸರಕಾರದ ನಡವಳಿಕೆಯನ್ನು ನೋಡುತ್ತಿದ್ದೇವೆ, ಅನುಭವಿಸುತ್ತಿದ್ದೇವೆ. ವಿವಾದಾತ್ಮಕವಾದ ಪ್ರಶ್ನೆಗಳ ಬಗ್ಗೆ ಮೌನ ವಹಿಸುವುದೇ ಉತ್ತಮ ಆಡಳಿತ ನೀಡಿಕೆ ಎಂದು ಪ್ರಧಾನಿ ಭಾವಿಸಿರುವಂತೆ ಕಾಣುತ್ತದೆ. ಅದು ಭ್ರಷ್ಟಾಚಾರದ ಆರೋಪವಾಗಿರಲಿ, ಭಾಜಪ ಸಚಿವರ, ಸಂಸದರ ಬೇಜವಾಬ್ದಾರಿ ಪ್ರಚೋದನಕಾರಿ ಹೇಳಿಕೆಗಳಾಗಿರಲಿ, ಬೇರೇನೇ ಆಗಿರಲಿ, ಪ್ರಧಾನಿ ಮಾತ್ರ ಚಕಾರವೆತ್ತುವುದಿಲ್ಲ. ವಿದೇಶಾಂಗ ಸಚಿವೆ ಸುಷ್ಮಾ ಸ್ವರಾಜ್, ರಾಜಾಸ್ಥಾನದ ಮುಖ್ಯಮಂತ್ರಿ ವಸುಂಧರಾ ರಾಜೇ ಕುರಿತ ಆರೋಪಗಳು, ಭೂಸ್ವಾಧೀನ ತಿದ್ದುಪಡಿ ಮಸೂದೆ, ಸರಕು, ಸೇವಾ ತೆರಿಗೆ ಮಸೂದೆ ಇವು ಪಾರ್ಲಿಮೆಂಟಿನ ಮಳೆಗಾಲದ ಅಧಿವೇಶನವನ್ನು ಸಂಪೂರ್ಣವಾಗಿ ಸ್ಥಗಿತಗೊಳಿಸಿದ್ದಾಗ್ಯೂ ಪ್ರಧಾನಿ ಮೋದಿ ಮಾತ್ರ ಮೌನವಾಗಿಯೇ ಇದ್ದುದನ್ನು ನೋಡಿದ್ದೇವೆ. ಇಡೀ ದೇಶದಲ್ಲಿ ಸಾಕಷ್ಟು ವಿವಾದವನ್ನು ಸೃಷ್ಟಿಸಿದ ಭೂಸ್ವಾಧೀನ ತಿದ್ದುಪಡಿ ಮಸೂದೆಯನ್ನು ಸರಕಾರ ಈಗ ತೆಪ್ಪಗೆ ಹಿಂತೆಗೆದುಕೊಂಡಿದೆ. ಕಾರ್ಪೊರೇಟ್ ವಲಯಕ್ಕೆ ಅನುಕೂಲವಾಗುವಂಥ, ಕೇಳಿದಷ್ಟು ಭೂಮಿಯನ್ನು ಅವರಿಗೆ ನೀಡುವುದಕ್ಕೆ ಅವಕಾಶ ನೀಡುವಂಥ, ಒಂದು ಬಗೆಯಲ್ಲಿ ವಿಶೇಷ ಆರ್ಥಿಕ ವಲಯವನ್ನು ಸೃಷ್ಟಿಸಲು ಬೇಕಾದ ವ್ಯವಸ್ಥೆ ಮಾಡುವ, ರೈತರ ಜಮೀನುಗಳನ್ನು ಬೇಕಾಬಿಟ್ಟಿಯಾಗಿ ಸ್ವಾಧೀನಪಡಿಸಿಕೊಳ್ಳುವ ರೈತವಿರೋಧಿ ಮಸೂದೆಯನ್ನು ಭಾಜಪ ಸರಕಾರ ಮೂರು ಸಲ ಸುಗ್ರೀವಾಜ್ಞೆ ಹೊರಡಿಸಿ ಜೀವಂತವಾಗಿರಿಸಿತ್ತು. ಸದ್ಯಕ್ಕೆ ಹಿಂದೆ ಸರಿದಿರುವ ಈ ಮಸೂದೆ ಇನ್ನಾವರೂಪ ಪಡೆದುಕೊಂಡು ಬರುವುದೋ ನೋಡಬೇಕು. ಸರಕು, ಸೇವಾ ತೆರಿಗೆ ಮಸೂದೆಯನ್ನು ಮುಂದಿನ ಚಳಿಗಾಲದ ಅಧಿವೇಶನದಲ್ಲಿ ಅಂಗೀಕರಿಸಲು ಭಾಜಪ ಸಿದ್ಧತೆ ನಡೆಸಿದೆ. ಲೋಕಸಭೆಯಲ್ಲಿ ಬಹುಮತ ಹೊಂದಿರುವ ಎನ್‌ಡಿಎಗೆ ರಾಜ್ಯಸಭೆಯಲ್ಲಿ ಬಹುಮತ ಇಲ್ಲದಿರುವುದು ಪ್ರತಿಕೂಲ ಪರಿಸ್ಥಿತಿ ಒಡ್ಡಿದೆ. ಎರಡೂ ಸದನಗಳಲ್ಲಿ ಬಹುಮತ ಪ್ರಾಪ್ತಿಯಾದರೆ ಭಾಜಪ ನಡೆದದ್ದೇ ದಾರಿಯಾಗುತ್ತದೆ.

ಕಾರ್ಪೊರೇಟ್ ವಲಯಕ್ಕೆ, ಉದ್ಯಮಿಗಳಿಗೆ ಅನುಕೂಲವಾಗುವ ಹಾಗೆ ಕಾರ್ಮಿಕ ಕಾಯಿದೆಗೆ ತಿದ್ದುಪಡಿ ತರಲಾಗಿದೆ. ಇದನ್ನು ಕಾರ್ಮಿಕ ಸಂಘಟನೆಗಳು ತೀವ್ರವಾಗಿ ವಿರೋಧಿಸಿವೆ. ಭಾಜಪಗೆ ಸೇರಿದ ಕಾರ್ಮಿಕ ಸಂಘಟನೆಗಳೂ ಕೂಡ ಇತ್ತೀಚೆಗೆ ನಡೆದ ದೇಶಾದ್ಯಂತದ ಮುಷ್ಕರದಲ್ಲಿ ಭಾಗಿಯಾಗಿದ್ದುದು ಗಮನಾರ್ಹ. ಈ ಸಾರ್ವತ್ರಿಕ ಮುಷ್ಕರ ಕಾರ್ಮಿಕರ ಐಕ್ಯತೆಯ ಪ್ರದರ್ಶನವಾಗಿತ್ತು. ಅಸಂಘಟಿತ ಕಾರ್ಮಿಕರು ಸಾಕಷ್ಟು ತೊಂದರೆ ಅನುಭವಿಸುತ್ತಿದ್ದು ತೀವ್ರ ಶೋಷಣೆಗೀಡಾಗಿದ್ದಾರೆ. ಮೋದಿ ಸರಕಾರ ಫ್ಯಾಕ್ಟರೀಸ್ ಕಾಯಿದೆಗೆ ತಂದಿರುವ ತಿದ್ದುಪಡಿ ಅವರ ಪರಿಸ್ಥಿತಿಯನ್ನು ಇನ್ನಷ್ಟು ಹದಗೆಡಿಸುತ್ತದೆ.






ಅಭಿವೃದ್ಧಿ ಕಾರ್ಯಗಳಿಗೆ ಅಧಿಕ ಪ್ರಾಶಸ್ತ್ಯ ನೀಡಲಾಗುವುದು ಎಂದು ಹೇಳುವ ಭಾಜಪ ಸರಕಾರ ಬಜೆಟ್‌ನಲ್ಲಿ ಸಾರ್ವಜನಿಕ ಆರೋಗ್ಯ, ವಿದ್ಯಾಭ್ಯಾಸ, ಕ್ಷೇಮಾಭಿವೃದ್ಧಿ ಮುಂತಾದ ಬಾಬ್ತುಗಳ ವಿನಿಯೋಗವನ್ನು ಕಡಿತಗೊಳಿಸಿದೆ. ಸ್ವಾಯತ್ತ ಸಂಸ್ಥೆಗಳ ಅಧಿಕಾರವನ್ನು ಕ್ರಮಬದ್ಧವಾಗಿ ಮೊಟಕುಗೊಳಿಸಲಾಗುತ್ತಿದೆ. ಎಲ್ಲ ಸಂಸ್ಥೆಗಳಲ್ಲೂ ಭಾಜಪ ಪರವಾಗಿರುವವರನ್ನು, ಆರೆಸ್ಸೆಸ್ ಕಾರ್ಯಕರ್ತರನ್ನು ನೇಮಿಸಲಾಗುತ್ತಿದೆ. ಇದಕ್ಕೆ ಮೊದಲು ಆಹುತಿಯಾಗಿರುವುದು ಶಿಕ್ಷಣ ಸಂಸ್ಥೆಗಳು. ಐಸಿಹೆಚ್‌ಆರ್‌ನಿಂದ ಹಿಡಿದು ಐಐಟಿ, ಐಐಎಂಗಳವರೆಗೆ ಎಲ್ಲವೂ ತಮ್ಮ ಸ್ವಾಯತ್ತತೆಯನ್ನು ಕಳೆದುಕೊಂಡಿವೆ. ಪುಣೆಯಲ್ಲಿರುವ ಫಿಲಂ ಇನ್‌ಸ್ಟಿಟ್ಯೂಟ್‌ನ ವಿದ್ಯಾರ್ಥಿಗಳು ನಡೆಸುತ್ತಿರುವ ಹೋರಾಟ ಅದಕ್ಕೇ ಸಂಬಂಧಪಟ್ಟಿದ್ದಾಗಿದೆ.

ಒಟ್ಟಿನಲ್ಲಿ ಒಂದೂವರೆ ವರ್ಷದಲ್ಲಿ ಮೋದಿ ಸರಕಾರ ದೇಶವನ್ನು ಯಾವ ದಿಶೆಯಲ್ಲಿ ಕೊಂಡೊಯ್ಯುತ್ತಿದೆ ಎನ್ನುವುದು ಸ್ಪಷ್ಟವಾಗಿ ವ್ಯಕ್ತಗೊಂಡಿದೆ. ಪ್ರತಿಪಕ್ಷಗಳ ದೌರ್ಬಲ್ಯ, ಎಡಪಕ್ಷಗಳ ಬಲಹೀನತೆ, ಬೀದಿಗಿಳಿದು ಪ್ರತಿಭಟನೆ ನಡೆಸುವ ಇಚ್ಛೆಯ ಕೊರತೆ – ಇವೆಲ್ಲ ಭಾಜಪಗೆ ವರದಾನವಾಗಿದೆ. ಆರೆಸ್ಸೆಸ್ ಪೊರೆ ಕಳಚಿ ಭಾಜಪ ಸರಕಾರದ ಮೇಲೆ ಕೂತಿದೆ. ಇದು ಮೋದಿ ಸರಕಾರದ ಸಾಧನೆಗಳಲ್ಲಿ ಒಂದೇನೋ.

*(ಮುಂದುವರಿಯುವುದು)*

**ಸಿ. ಆರ್. ಕೃಷ್ಣರಾವ್**
'ಚೌಬೀನ', ೮೪೪, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ, ೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂ.–೮೫

## ಸಮೇತನಹಳ್ಳಿ ರಾಮರಾಯರ ಬಹುಮಾನ

ಬೆಂಗಳೂರಿನ ಸಿಂಧು ಭೈರವಿ ಕುಟೀರದ ಪರವಾಗಿ ಅದರ ಅಧ್ಯಕ್ಷರಾದ ಶ್ರೀಮತಿ. ಭಾರತೀ ಕಾಸರಗೋಡು ಅವರು ಆಗಸ್ಟ್ ೨೦೧೪ರಿಂದ ಜುಲೈ ೨೦೧೫ರವರೆಗಿನ 'ಹೊಸತು' ಸಂಚಿಕೆಗಳಲ್ಲಿ ಪ್ರಕಟವಾದ ಎರಡು ಬರಹಗಳಿಗೆ ತಲಾ ರೂ. ೫೦೦೦ ಬಹುಮಾನ ನೀಡುವ ಆಶಯ ವ್ಯಕ್ತಪಡಿಸಿದ್ದಾರೆ. ಅವರಿಗೆ ವಂದನೆ ಸಲ್ಲಿಸುತ್ತಾ ಎರಡು ಬಹುಮಾನಗಳನ್ನು ಘೋಷಿಸಲು 'ಹೊಸತು' ಹರ್ಷಿಸುತ್ತದೆ :

ಅ. ಪುರುಷರು ಬರೆದ ಉತ್ತಮ ಮಹಿಳಾಪರ ಲೇಖನ
– ಶ್ರೀ ರವಿ ರಾ. ಅಂಚನ್ :
*ಅನನ್ಯ ಸ್ತ್ರೀಪರ ಧ್ವನಿ ತಾರಾಬಾಯಿ ಶಿಂಧೆ*
(ಮಾರ್ಚ್ ೨೦೧೫)

ಆ. ಮಹಿಳೆಯರು ಬರೆದ ಉತ್ತಮ ಸಣ್ಣಕತೆ
– ಶ್ರೀಮತಿ ಮೀನಾಕುಮಾರಿ :
*ಸಂಭಾವನೆ* (ಜನವರಿ ೨೦೧೫)







# ಭಾರತದ ಅರ್ಥವ್ಯವಸ್ಥೆಯ ಮೇಲೆ ನೂತನ ಆರ್ಥಿಕ ಎಂಜಿನ್– ಬ್ರಿಕ್ಸ್ – ಬ್ಯಾಂಕ್

ಡಾ॥ ಸುರೇಶ ಕೆ. ಪಿ.

**ಬ್ರಿಕ್ಸ್ ಎಂಬುದು ಪ್ರಗತಿಶೀಲ ರಾಷ್ಟ್ರಗಳ ಒಕ್ಕೂಟದ ಪ್ರತೀಕ. ಬ್ರಿಕ್ಸ್ ಎಂದರೆ ಭಾರತ, ಬ್ರೆಜಿಲ್, ರಷ್ಯಾ, ಚೀನಾ ಮತ್ತು ದಕ್ಷಿಣ ಆಫ್ರಿಕಾ ಎಂದರ್ಥ. ಈ ರಾಷ್ಟ್ರಗಳು ಸ್ಥಾಪಿಸಲಿರುವ ನೂತನ ಅಭಿವೃದ್ಧಿ ಬ್ಯಾಂಕನ್ನು ಬ್ರಿಕ್ಸ್ ಬ್ಯಾಂಕ್ ಎಂದು ಕರೆಯುತ್ತಾರೆ. ಇದೊಂದು ಮಿನಿ ಐ.ಎಂ.ಎಫ್. ಎಂದರೆ ತಪ್ಪಾಗಲಾರದು. ಪ್ರಗತಿಶೀಲ ರಾಷ್ಟ್ರಗಳ ಒಕ್ಕೂಟವಾಗಿರುವ ಬ್ರಿಕ್ಸ್ ಈ ಮೂಲಕ ಜಾಗತಿಕ ಆರ್ಥಿಕ ವ್ಯವಸ್ಥೆಯ ಮೇಲೆ ಹೊಸ ಹೆಜ್ಜೆ ಇಟ್ಟಂತಾಗಿದೆ. ಅಮೆರಿಕಾದಂತಹ ಪ್ರಾಬಲ್ಯ ಇರುವ ವಿಶ್ವಬ್ಯಾಂಕ್ ಹಾಗೂ ಅಂತರರಾಷ್ಟ್ರೀಯ ಹಣಕಾಸು ನಿಧಿ (ಐ.ಎಂ.ಎಫ್.) ತಮ್ಮ ನೀತಿ ನಿರೂಪಣೆಯಲ್ಲಿ ಬದಲಾವಣೆ ತಂದುಕೊಳ್ಳುವ ಅನಿವಾರ್ಯತೆಯ ಪರಿಸ್ಥಿತಿ ಬರಲಿದೆ. ಈ ಬ್ರಿಕ್ಸ್ ಸದಸ್ಯ ರಾಷ್ಟ್ರಗಳ ಒಗ್ಗಟ್ಟಿನ ನಡೆ ಮುಂದೆ ಏನೆಲ್ಲಾ ಅಭಿವೃದ್ಧಿಯ ಬದಲಾವಣೆಯನ್ನೂ ತರಬಹುದು ಎಂಬುದನ್ನು ತಿಳಿಯುವಲ್ಲಿ ಚಿಕ್ಕ ಪ್ರಯತ್ನ ಇಲ್ಲಿದೆ.**

ಇತ್ತೀಚೆಗೆ ನಡೆದ ಬ್ರಿಕ್ಸ್ ರಾಷ್ಟ್ರಗಳ ಶೃಂಗಸಭೆಯಲ್ಲಿ ಬ್ರಿಕ್ಸ್ ಬ್ಯಾಂಕ್ ಸ್ಥಾಪನೆಗೆ ಸರ್ವಸದಸ್ಯರ ಒಮ್ಮತದ ಅಭಿಪ್ರಾಯ ಹಾಗೂ ಹರ್ಷೋದ್ಗಾರದೊಂದಿಗೆ ಬುನಾದಿ ಹಾಕಲಾಯಿತು. ಈ ಶೃಂಗಸಭೆಯು ಇತ್ತೀಚೆಗೆ ಬ್ರೆಜಿಲ್‌ನ ಪೋರ್ಟ್‌ಲೆಜ್ ಎಂಬಲ್ಲಿ ನಡೆಯಿತು. ಇಲ್ಲಿ ನಡೆದ ಸುದೀರ್ಘ ಚರ್ಚೆಯ ೧೫ ಪುಟಗಳ ಸಮಗ್ರ ವರದಿಯ ಮೇಲೆ ಎಲ್ಲಾ ಸದಸ್ಯ ರಾಷ್ಟ್ರಗಳು ಈ ಒಂದು ಬ್ರಿಕ್ಸ್ ಬ್ಯಾಂಕ್ ಸ್ಥಾಪನೆಗೆ ಹಸಿರು ನಿಶಾನೆ ತೋರಿಸಿವೆ.

**ಬ್ರಿಕ್ಸ್‌ನ ಮೂಲವೇನು ?**

ಜಗತ್ತಿನಲ್ಲಿ ಉದಯಿಸುತ್ತಿರುವ ಹೊಸ ಆರ್ಥಿಕ ಶಕ್ತಿಗಳನ್ನು ಮೊದಲಿಗೆ ಗುರುತಿಸಿದವರು ಬ್ರಿಟನ್‌ನ ಅರ್ಥಶಾಸ್ತ್ರಜ್ಞ ಜಿಮ್ ಓನೀಲ್. ಮೂಲತಃ ಬ್ಯಾಂಕ್ ಆಫ್ ಅಮೆರಿಕಾ, ಸ್ವಿಸ್ ಬ್ಯಾಂಕ್ ಪ್ರಮುಖ ಹುದ್ದೆಗಳಲ್ಲಿ ಕಾರ್ಯ ನಿರ್ವಹಿಸಿದ್ದ ಜಿಮ್ ೨೦೦೧ರಲ್ಲಿ ಜಾಗತಿಕ ಆರ್ಥಿಕ ಸಂಶೋಧನೆಯ ಮುಖ್ಯಸ್ಥರಾಗಿದ್ದು, ಅದೇ ವರ್ಷ ಮಂಡಿಸಿದ ಸಂಶೋಧನಾ ಪ್ರಬಂಧ "The world needs Better Economic Brics"ನಲ್ಲಿ ಮೊದಲ ಬಾರಿಗೆ ಈ ಬ್ರಿಕ್ಸ್ ಎನ್ನುವ ಪದ ಬಳಸಿದರು. ಅವರ ಪ್ರಕಾರ ಹೊಸ ಆರ್ಥಿಕ ಶಕ್ತಿಗಳು ಒಂದೇ ವೇದಿಕೆಗೆ ಬಂದರೆ ಅಭಿವೃದ್ಧಿಯ ಹಾದಿಯಲ್ಲಿ ಹೊಸ ಹೆಜ್ಜೆ ಇಡಬಹುದು ಎಂಬುದು ಅವರ ನಿಲುವಾಗಿತ್ತು. ತನ್ನ ಸಂಶೋಧನಾ ಪ್ರಬಂಧದಲ್ಲಿ 'ಬ್ರಿಕ್ಸ್' ಎಂಬ ಪದವನ್ನು ಅವರು ಈ ರೀತಿ ಅರ್ಥೈಯಿಸಿದ್ದಾರೆ! ಬಿ–ಬ್ರೆಜಿಲ್, ಆರ್–ರಷ್ಯಾ, ಐ–ಇಂಡಿಯಾ, ಸಿ–ಚೀನಾ, ಎಸ್–ಸೌತ್ ಆಫ್ರಿಕಾ. ಇವರ ಸಂಶೋಧನಾ ಪ್ರಬಂಧದ ಪ್ರಯೋಗ ಬ್ರಿಕ್ಸ್ ಇಂದು ಹೊಸ ಸ್ವರೂಪ ಪಡೆದುಕೊಂಡಿರುವುದರಲ್ಲಿ ಸಂಶಯವಿಲ್ಲ. ಜಿಮ್ ಅವರ

ಸಂಶೋಧನಾ ಪ್ರಬಂಧ ಪ್ರಕಟಗೊಂಡ ೮ ವರ್ಷಗಳ ನಂತರ, ಅಂದರೆ ೨೦೦೯ರಲ್ಲಿ ಪ್ರಥಮ ಬ್ರಿಕ್ಸ್ ರಾಷ್ಟ್ರಗಳ ಶೃಂಗಸಭೆಯು ಪ್ರಾರಂಭಗೊಂಡಿತು. ಬ್ರಿಕ್ಸ್ ರಾಷ್ಟ್ರಗಳು ಒಂದೇ ವೇದಿಕೆಯ ಮೇಲೆ ಆಂತರಿಕ ಭದ್ರತೆ, ಆರ್ಥಿಕ ವಿಕಾಸದಲ್ಲಿ ಮುನ್ನಡೆ, ಪರಸ್ಪರ ಸಹಕಾರ ಇವೇ ಮೊದಲಾದ ನಿಲುವುಗಳ ಬಗ್ಗೆ ನಿರ್ಣಯ ಕೈಗೊಂಡವು. ಬ್ರಿಕ್ಸ್‌ನ ಮೊದಲ ಶೃಂಗಸಭೆ ೨೦೦೯ರಲ್ಲಿ ರಷ್ಯಾದಲ್ಲಿ ನಡೆದಿತ್ತು. ಆಗಿನ್ನೂ ದಕ್ಷಿಣ ಆಫ್ರಿಕಾ ಒಕ್ಕೂಟಕ್ಕೆ ಸೇರಿಕೊಂಡಿರಲಿಲ್ಲ. ಆದರೆ ೨೦೧೧ರಲ್ಲಿ ಅದನ್ನು ಆಹ್ವಾನಿಸಿ ಸದಸ್ಯತ್ವ ಪಡೆಯುವುದರ ಮೂಲಕ ಪ್ರವೇಶ ಪಡೆದು, ೨೦೧೧ರಲ್ಲಿ ಖಾಯಂ ಸದಸ್ಯತ್ವ ಪಡೆದು ಅಂದಿನಿಂದ ಬ್ರಿಕ್ ಇದ್ದದ್ದು ಬ್ರಿಕ್ಸ್ ಎಂದು ಮರು ನಾಮಕರಣ ಆಯಿತು.

**ಬ್ರಿಕ್ಸ್ ಬ್ಯಾಂಕ್‌ನ ನಿರೀಕ್ಷಿತ ಪರಿಣಾಮ**

* ಹಣಕಾಸು ಸಂಸ್ಥೆಗಳಲ್ಲಿ ಸೂಕ್ತ ಸುಧಾರಣೆಗಳನ್ನು ತರಬೇಕೆಂಬ ಅಭಿವೃದ್ಧಿಶೀಲ ರಾಷ್ಟ್ರಗಳ ಒತ್ತಾಯಕ್ಕೆ ಸ್ಪಂದನೆ ಸಿಕ್ಕಿರಲಿಲ್ಲ.
* ಆರ್ಥಿಕತೆಯಲ್ಲಿ ಈ ರಾಷ್ಟ್ರಗಳು ಮಹತ್ವದ ಪಾಲು ನೀಡುತ್ತಿದ್ದರೂ ಸಹ ಅಮೇರಿಕಾ ಹಾಗೂ ಇತರೆ ಶ್ರೀಮಂತ ರಾಷ್ಟ್ರಗಳು ನಿರಂತರವಾಗಿ ಕಡೆಗಣಿಸುತ್ತಲೇ ಬಂದಿವೆ.
* ಭವಿಷ್ಯದ ಆರ್ಥಿಕ ಚಟುವಟಿಕೆಗಳನ್ನು ಎದುರಿಸಲು ಮೂಲ ಸೌಲಭ್ಯದ ಕ್ಷೇತ್ರದ ವಿಕಾಸಕ್ಕೆ ಸಹಕರಿಸಲು ಇಂಥ ಬ್ಯಾಂಕ್ ಮತ್ತು ಮೀಸಲು ನಿಧಿ ಬೇಕಾಗಿದೆ.
* ಜಿ–೭ (ಕೆನಡಾ, ಫ್ರಾನ್ಸ್, ಜರ್ಮನಿ, ಇಟಲಿ, ಜಪಾನ್, ಬ್ರಿಟನ್ ಮತ್ತು ಅಮೇರಿಕಾ) ರಾಷ್ಟ್ರಗಳಿಗೆ ಬ್ರಿಕ್ಸ್ ಸೆಡ್ಡು ಹೊಡೆಯಲು ಇದೊಂದು ಉತ್ತಮ ಅವಕಾಶ ಎಂದು ಹೇಳಬಹುದು.
* ೨೦೨೦ರ ಹೊತ್ತಿಗೆ ಜಿ–೭ ರಾಷ್ಟ್ರಗಳ ಮಧ್ಯಮವರ್ಗೀಯ ಕುಟುಂಬಗಳ ಎರಡರಷ್ಟನ್ನು ಬ್ರಿಕ್ಸ್ ರಾಷ್ಟ್ರಗಳು ಹೊಂದಲಿವೆ. ಇದರರ್ಥ ಬಡತನ ರೇಖೆಗಿಂತ ಕೆಳಗಿರುವವರ ಹಾಗೂ ಬಡತನದ ಪ್ರಮಾಣ ಕಡಿಮೆ ಯಾಗಲಿದ್ದು, ಭಾರಿ ಸಂಖ್ಯೆಯಲ್ಲಿ ಮಧ್ಯಮವರ್ಗೀಯ ಕುಟುಂಬಗಳು ಹೊರಹೊಮ್ಮಲಿವೆ.
* ಇದರ ಮೂಲಕ ಜಾಗತಿಕ ಅರ್ಥವ್ಯವಸ್ಥೆಯ ಹೊಸ ಎಂಜಿನ್ ಆಗಿ ಬ್ರಿಕ್ಸ್ ಬ್ಯಾಂಕ್ ರೂಪುಗೊಳ್ಳುವುದರಲ್ಲಿ ಸಂಶಯವೇ ಇಲ್ಲ.
* ಅಲ್ಲದೆ, ಆರ್ಥಿಕತೆಯ ಮೇಲೆ ಪಾಶ್ಚಿಮಾತ್ಯ ರಾಷ್ಟ್ರಗಳ ಏಕಸ್ವಾಮ್ಯತೆ, ದಬ್ಬಾಳಿಕೆ, ಬಹುತೇಕ ಕಡಿಮೆಯಾಗಲಿದೆ ಎಂದು ಹೇಳಬಹುದು.
* ೨೦೫೦ರ ಹೊತ್ತಿಗೆ ಜಾಗತಿಕ ಆರ್ಥಿಕ ವ್ಯವಸ್ಥೆಯಲ್ಲಿ ಚೀನಾ ಮತ್ತು ಭಾರತ ಭಾಗಶಃ ಮೊದಲನೇ ಹಾಗೂ ಮೂರನೇ ಸ್ಥಾನಕ್ಕೇರಲಿವೆ. ಬ್ರೆಜಿಲ್, ರಷ್ಯಾ ಕ್ರಮವಾಗಿ ೫ ಮತ್ತು ೬ ಸ್ಥಾನದಲ್ಲಿವೆ.
* ಜಾಗತಿಕ ಆರ್ಥಿಕ ವ್ಯವಸ್ಥೆಯ ಉತ್ಪಾದನೆಯಲ್ಲಿ ೨೦೦೦ರಿಂದ ೨೦೦೮ರವರೆಗಿನ ಅವಧಿಯಲ್ಲಿ ಬ್ರಿಕ್ಸ್ ದೇಶಗಳ ಪಾಲೇ ಶೇ. ೩೦ರಷ್ಟಿದೆ.
* ಜಗತ್ತಿನ ಭೂ ಪ್ರದೇಶದಲ್ಲಿ ಬ್ರಿಕ್ಸ್ ರಾಷ್ಟ್ರಗಳ ಪಾಲು ಶೇ. ೩೦ರಷ್ಟಿದೆ.
* ಜಾಗತಿಕ ಜಿ.ಡಿ.ಪಿಯಲ್ಲಿ ಶೇ. ೨೫ರಷ್ಟು ಕೊಡುಗೆ ಬ್ರಿಕ್ಸ್ ರಾಷ್ಟ್ರಗಳದ್ದೇ ಆಗಿದೆ.
* ಜಾಗತಿಕ ಜನಸಂಖ್ಯೆಯಲ್ಲಿ ಶೇ. ೪೫ರಷ್ಟು ಈ ರಾಷ್ಟ್ರಗಳದ್ದೇ ಆಗಿದೆ.

– ಈ ಮೇಲಿನ ಅಂಶಗಳನ್ನು ಗಮನಿಸಿದಾಗ ಬ್ರಿಕ್ಸ್ ದೇಶಗಳ ಪಾಲು ಸಿಂಹಪಾಲು ಎಂದು ಹೇಳಬಹುದು, ಆದರೆ ಅಭಿವೃದ್ಧಿಶೀಲ ರಾಷ್ಟ್ರಗಳನ್ನು ಮೂಲೆಗುಂಪು ಮಾಡುತ್ತಿರುವ ಶ್ರೀಮಂತ ರಾಷ್ಟ್ರಗಳಿಗೆ ಇದೊಂದು ಆತ್ಮವಿಮರ್ಶೆಯ ಸಮಯ ಎಂದು ತಿಳಿಯಬಹುದು. ಎಲ್ಲ ಬ್ರಿಕ್ಸ್ ಸದಸ್ಯ ದೇಶಗಳ ಧ್ಯೇಯ ಎಲ್ಲರೂ ಒಬ್ಬರಿಗಾಗಿ, ಒಬ್ಬರು ಎಲ್ಲರಿಗಾಗಿ ಎಂಬುದು. ಈ ಧ್ಯೇಯದೊಂದಿಗೆ ತಮ್ಮದೇ ಆದ ಒಂದು ಮಿನಿ ಐ.ಎಂ.ಎಫ್. ಎಂಬ ನೂತನ ಅಭಿವೃದ್ಧಿ ಬ್ಯಾಂಕ್‌ನ ಸ್ಥಾಪನೆಗೆ ನಾಂದಿ ಹಾಡಿರುವುದು ಅಭಿವೃದ್ಧಿ ದೇಶಗಳ ನಿದ್ದೆಗೆಡಿಸಿದಂತಾಗಿದೆ. ಆದರೆ ಇದೊಂದು ಅಭಿವೃದ್ಧಿಶೀಲ ರಾಷ್ಟ್ರಗಳ ಸೌಹಾರ್ದಯುತ ಮತ್ತು ವಿಶ್ವಸನೀಯ ಸಂಬಂಧದ ಬೆಸುಗೆ ಎಂದು ಹೇಳಬಹುದು.

**ಬ್ರಿಕ್ಸ್ ಬ್ಯಾಂಕ್‌ನ ಮುಂದಿರುವ ಸವಾಲುಗಳೇನು ?**

ಎಲ್ಲವೂ ಅಂದುಕೊಂಡಂತೆ ನಡೆದರೆ ಯಾವುದೇ ಸವಾಲುಗಳು, ಸಮಸ್ಯೆಗಳು ಉಂಟಾಗುವುದಿಲ್ಲ, ಆದರೂ ಸಹ ಬಾಹ್ಯ ಮತ್ತು ಆಂತರಿಕ ವೈಫಲ್ಯಗಳನ್ನು ಬ್ರಿಕ್ಸ್ ಬ್ಯಾಂಕ್ ಎದುರಿಸಲೇಬೇಕಾಗುತ್ತದೆ.

* ಚೀನಾದಂತಹ ಅಭಿವೃದ್ಧಿಯ ಮುಂಚೂಣಿಯಲ್ಲಿರುವ ದೇಶಗಳು ಹೆಚ್ಚಿನ ಹಿಡಿತ ಸಾಧಿಸುವುದು. ಉದಾಹರಣೆ : ಚೀನಾದ ಹಠಮಾರಿತನ, ಚೀನಾ ಮತ್ತು ಭಾರತದೊಂದಿಗಿನ ಗಡಿ ಸಮಸ್ಯೆ, ಹಾಗೆಯೇ ಜಾಗತಿಕ ಅರ್ಥವ್ಯವಸ್ಥೆಯಲ್ಲಿ ಎರಡನೇ ಸ್ಥಾನದಲ್ಲಿರುವುದರಿಂದ ಹಾಗೂ ಬ್ಯಾಂಕ್ ಸ್ಥಾಪನೆಯಲ್ಲಿ ಹೆಚ್ಚಿನ ಪಾಲು ಇವೇ ಮೊದಲಾದವುಗಳ ಮೂಲಕ ಹಿಡಿತ ಸಾಧಿಸಲು ಪ್ರಯತ್ನಿಸಿದರೆ ಇದರಿಂದ ಅಂತರರಾಷ್ಟ್ರೀಯ ಮಾರುಕಟ್ಟೆಯ ಮೇಲೆ ವ್ಯತಿರಿಕ್ತ ಪರಿಣಾಮ ಬೀಳಲಿದೆ. ಇದರಿಂದ ಸದಸ್ಯ ರಾಷ್ಟ್ರಗಳ ಆರ್ಥಿಕ ಸವಾಲುಗಳನ್ನು ಎದುರಿಸಲು ವಿಫಲವಾಗಬೇಕಾಗುತ್ತದೆ. ಆದ್ದರಿಂದ ಬ್ರಿಕ್ಸ್ ಎಂಬುದು ಶಕ್ತಿಶಾಲಿಯುತ ಸಾಧನವಾಗಬೇಕೇ ಹೊರತು ಯಾವುದೇ ಒಂದು ಸದಸ್ಯ ರಾಷ್ಟ್ರದ ಕೈಗೊಂಬೆಯಾಗಬಾರದು.
* ಬ್ರಿಕ್ಸ್ ರಾಷ್ಟ್ರಗಳ ನಡುವೆ ಐಕ್ಯತೆ ಕಾಪಾಡಿಕೊಳ್ಳಬೇಕಾದುದು ಪ್ರಮುಖ ಅಂಶವಾಗಿದೆ. ಉದಾಹರಣೆಗೆ, ರಷ್ಯಾ ಮತ್ತು ಚೀನಾ ಜಾಗತಿಕ ಮಹಾಶಕ್ತಿಗಳಾಗಿ ಹೊರಹೊಮ್ಮಲು ಪರಸ್ಪರ ಸ್ಪರ್ಧೆಗಿಳಿದಿವೆ. ಹಾಗಾಗಿ ಹಲವು ರಂಗಗಳಲ್ಲಿ ಎರಡೂ ರಾಷ್ಟ್ರಗಳು ಒಟ್ಟಾಗಿ ಕಾರ್ಯ ನಿರ್ವಹಿಸುವುದು ಸುಲಭವೇನಲ್ಲ.
* ರಷ್ಯಾದಲ್ಲಿ ಜನಸಂಖ್ಯೆ ಕುಸಿಯುತ್ತಿದ್ದು, ಅಲ್ಲಿನ ಮೂಲಭೂತ ವ್ಯವಸ್ಥೆಯೇ ಅಲುಗಾಡುತ್ತಿದೆ. ಹಾಗಾಗಿ ಈ ಸಂಕಷ್ಟದ ಕಾಲದಲ್ಲಿ ರಷ್ಯಾವನ್ನು ಒಕ್ಕೂಟದ ಉಳಿದ ರಾಷ್ಟ್ರಗಳು ಜೊತೆಗೆ ಕರೆದುಕೊಂಡು ಹೋಗುವವೆ ?
* ಭಾರತ ಮತ್ತು ಚೀನಾದೊಂದಿಗಿನ ಗಡಿ ಸಮಸ್ಯೆ ಇಂದಿಗೂ ಜೀವಂತವಾಗಿ ಮುಂದುವರಿಯುತ್ತಲೇ ಇದೆ. ಹಾಗೆಯೇ ಭಾರತ ಜಾಗತಿಕ ವಲಯದಲ್ಲಿ ಒಂದು ದೊಡ್ಡ ಆರ್ಥಿಕ ವ್ಯವಸ್ಥೆಯಾಗಿ ಹೊರಹೊಮ್ಮುತ್ತಿದೆ. ಚೀನಾವನ್ನು ಅಭಿವೃದ್ಧಿಯಲ್ಲಿ ಹಿಂದಿಕ್ಕುವ ಎಲ್ಲಾ ರೀತಿಯ ಸಕಾರಾತ್ಮಕ ಬೆಳವಣಿಗೆಗಳು ಭಾರತಕ್ಕೆ ಸಾಧ್ಯ. ಹಾಗಾದಲ್ಲಿ ಎರಡು ದೇಶಗಳ ಸಂಬಂಧಗಳು ಬಿಗುವಿನ ಉದ್ವಿಗ್ನ ಸ್ಥಿತಿಗೆ ಬರುವುದರಲ್ಲಿ ಸಂಶಯವಿಲ್ಲ. ಇದಕ್ಕೆ ಇತ್ತೀಚೆಗೆ ನಡೆಯುತ್ತಿರುವ ಗಡಿವಿವಾದವೇ ಸಾಕು. ಹಾಗಾಗಿ ಇವರಿಬ್ಬರ ನಡುವೆ ಸಮನ್ವಯ ಸಾಧಿಸುವುದು ಹೇಗೆ ಎಂಬ ಪ್ರಶ್ನೆ ಉದ್ಭವಿಸುತ್ತದೆ.



* ಈಗಿನ ವಿವಾದಗಳು ಆಂತರಿಕ ಭಿನ್ನಾಭಿಪ್ರಾಯಗಳು, ಗಡಿವಿವಾದಗಳನ್ನೆಲ್ಲಾ ಮೀರಿ ಆಂತರಿಕ ಭದ್ರತೆಗೆ, ಮೂಲ ಸೌಲಭ್ಯ ಹಾಗೂ ಆರ್ಥಿಕ ಬಲಿಷ್ಠತೆಗಾಗಿ ಒಟ್ಟಾಗಿ ಕೆಲಸ ಮಾಡುವುದು ಅಗತ್ಯವಾಗಿದೆ ಎಂಬುದು ಭಾರತದ ನಿಲುವು.

ಒಟ್ಟಿನಲ್ಲಿ ಹೇಳುವುದಾದರೆ, ಹಲವಾರು ಸವಾಲು ಮತ್ತು ಸಮಸ್ಯೆಗಳಿದ್ದರೂ ಶೃಂಗಸಭೆಯಲ್ಲಿ ನೂತನ ಅಭಿವೃದ್ಧಿ ಬ್ಯಾಂಕ್‌ಗೆ ಚಾಲನೆ ನೀಡಿರುವುದು ಸಂತೋಷದ ವಿಷಯ. ಅಭಿವೃದ್ಧಿಶೀಲ ರಾಷ್ಟ್ರಗಳಿಗೆ ಇದೊಂದು ಮಿನಿ ಐ.ಎಂ.ಎಫ್. ಇದ್ದ ಹಾಗೆ ಎಂದು ಹೇಳಬಹುದು. ಇದರಿಂದ ಪ್ರಗತಿಶೀಲ ರಾಷ್ಟ್ರಗಳ ಒಕ್ಕೂಟವಾಗಿರುವ ಬ್ರಿಕ್ಸ್ ಜಾಗತಿಕ ಆರ್ಥಿಕ ರಂಗಕ್ಕೆ ಪಾದಾರ್ಪಣೆ ಮಾಡಿದಂತಾಗಿದೆ. ಬ್ರಿಕ್ಸ್ ರಾಷ್ಟ್ರಗಳ ಒಗ್ಗಟಿನ ನಡೆ ಮುಂದಿನ ಸವಾಲುಗಳಿಗೆ ದಾರಿದೀಪ ಎಂಬುದು ಗಮನಾರ್ಹ ವಿಷಯವಾಗಿದೆ.

**ಬ್ರಿಕ್ಸ್ ಬ್ಯಾಂಕ್‌ನ ಕಾರ್ಯತಂತ್ರ ಹೇಗಿರುತ್ತೆ ?**

ಪ್ರಗತಿಶೀಲ ರಾಷ್ಟ್ರಗಳ ಒಕ್ಕೂಟವಾಗಿರುವ ಬ್ರಿಕ್ಸ್ (ಭಾರತ, ಬ್ರೆಜಿಲ್, ರಷ್ಯಾ, ಚೀನಾ ಮತ್ತು ದಕ್ಷಿಣ ಆಫ್ರಿಕಾ) ಸ್ಥಾಪಿಸಲಿರುವ ನೂತನ ಅಭಿವೃದ್ಧಿ ಬ್ಯಾಂಕ್ (ಎನ್.ಬಿ.ಡಿ.) ಅಂತರ ರಾಷ್ಟ್ರೀಯ ಹಣಕಾಸು ನಿಧಿಗೆ (ಐ.ಎಂ.ಎಫ್.)ಗೆ ಪರ್ಯಾಯವಲ್ಲ ಎಂದು ಬ್ರೆಜಿಲ್ ಅಧ್ಯಕ್ಷೆ ಡಿಲ್ಮ್ ಕೌಸೆವ್ ಸ್ಪಷ್ಟಪಡಿಸಿದ್ದಾರೆ. ಮೂಲ ನಿಧಿಗೆ ಎಲ್ಲಾ ರಾಷ್ಟ್ರಗಳು ಸಮಪಾಲು ನೀಡಲಿವೆ. ಇದೊಂದು ಆರ್ಥಿಕ ಸ್ಥಿರತೆ ಮೂಡಿಸುವ ಉದ್ದೇಶದ ಯೋಜನೆ. ಇದರಲ್ಲಿ ಬ್ರಿಕ್ಸ್ ಜೊತೆಗೆ ಐ.ಎಂ.ಎಫ್. ಸಹ ಕೆಲಸ ಮಾಡುತ್ತಿದೆ ಎಂದು ಐ.ಎಂ.ಎಫ್‌ನ ನಿರ್ದೇಶಕ ಕ್ರಿಸ್ಟಿನ್ ಲಗಾರ್ಡೆ ತಿಳಿಸಿದ್ದಾರೆ. ಹಾಗಾದರೆ,

* ಸುಮಾರು ೬ ಲಕ್ಷ ಕೋಟಿ ಗರಿಷ್ಠ ಬಂಡವಾಳದ (೧೦೦ ಕೋಟಿ ಡಾಲರ್) ಹೊಸ ಅಭಿವೃದ್ಧಿ ಬ್ಯಾಂಕ್ ಸ್ಥಾಪಿಸಲು ಬ್ರಿಕ್ಸ್ ರಾಷ್ಟ್ರಗಳ ಶೃಂಗಸಭೆಯಲ್ಲಿ ನಿರ್ಧರಿಸಲಾಗಿದ್ದು ಭಾರತದ ಪಾಲಿಗೆ ಇದೊಂದು ಪ್ರತಿಪಾದನೆಯ ಗೆಲುವು. ಬ್ಯಾಂಕ್‌ನಲ್ಲಿ ಯಾವುದೇ ಒಂದು ರಾಷ್ಟ್ರ ಮೇಲುಗೈ ಸಾಧಿಸುವುದನ್ನು ತಡೆಯುವ ನಿಟ್ಟಿನಲ್ಲಿ ಪ್ರತಿಯೊಂದು ರಾಷ್ಟ್ರದ ಪಾಲು ಸಮಾನವಾಗಿ ಇರಬೇಕೆಂಬುದು ಭಾರತದ ನಿಲುವಾಗಿದೆ, ಅದರಂತೆ ಸಮಪಾಲಿಗೆ ಒಪ್ಪಿ ಕೊಂಡಿದೆ. ಇದರ ಹಿನ್ನೆಲೆಯೆಂದರೆ ಯಾವುದೇ ಒಂದು ದೇಶದ ಕೈಗೊಂಬೆಯಾಗಿ ಬ್ಯಾಂಕ್ ಕಾರ್ಯವನ್ನು ನಿರ್ವಹಿಸಬಾರದೆಂಬುದಾಗಿದೆ. ಅಂದರೆ 'ಸಮಪಾಲು–ಸಮಬಾಳು' ಎಂಬ ತತ್ವವನ್ನು ಹೊಂದಿದೆ.
* ಚೀನಾದ ಶಾಂಘೈನಲ್ಲಿ ಬ್ಯಾಂಕ್‌ನ ಪ್ರಧಾನ ಕಛೇರಿಯನ್ನು ಸ್ಥಾಪಿಸಲಿದ್ದು, ಭಾರತವು ಈ ಬ್ಯಾಂಕ್‌ನ ಪ್ರಧಾನ ಅಧ್ಯಕ್ಷ ರಾಷ್ಟ್ರವಾಗಲಿದೆ. ಆಡಳಿತ ಮಂಡಳಿಯ ಮೊದಲ ನಿರ್ದೇಶನ ಸ್ಥಾನದ ಜವಾಬ್ದಾರಿಯನ್ನು ರಷ್ಯಾ ನಿರ್ವಹಿಸಲಿದೆ. ಪ್ರಾದೇಶಿಕ ಕೇಂದ್ರವು ದಕ್ಷಿಣ ಆಫ್ರಿಕಾದಲ್ಲಿ ಸ್ಥಾಪನೆಯಾಗಲಿದೆ. ಇದರಿಂದ ಸ್ಥಾಪಕ ರಾಷ್ಟ್ರಗಳಿಗಲ್ಲದೆ ಎಲ್ಲ ಅಭಿವೃದ್ಧಿಶೀಲ ರಾಷ್ಟ್ರಗಳಿಗೂ ಅನುಕೂಲವಾಗುವುದರಲ್ಲಿ ಸಂಶಯವಿಲ್ಲ.

**ಬ್ರಿಕ್ಸ್ ರಾಷ್ಟ್ರಗಳ ಆರ್ಥಿಕ ಚಿತ್ರಣದ ಪಕ್ಷಿನೋಟ –೨೦೧೪**

| ದೇಶಗಳು | ಒಟ್ಟು ವಿಸ್ತೀರ್ಣ (ಚ.ಕಿ.ಮೀ.) | ಜನಸಂಖ್ಯೆ (ಕೋಟಿಗಳಲ್ಲಿ) | ಶಿಕ್ಷಣ ವೆಚ್ಚ ಜಿ.ಡಿ.ಪಿ. ಪ್ರತಿಶತ | ಆರೋಗ್ಯದ ಜಿ.ಡಿ.ಪಿ. ಪ್ರತಿಶತ | ಕೃಷಿ ಜೀವನ ಮಿಲಿಯ ಹೆಕ್ಟೇರ್ | ಆರ್ಥಿಕ ಶಕ್ತಿ | ಕರೆನ್ಸಿ |
|---|---|---|---|---|---|---|---|
| ಬ್ರೆಜಿಲ್ | ೮೫೧೫ | ೨೯.೩೭ | ೪.೩ | ೪.೮ | ೬೭ | ಕೈಗಾರಿಕೆ ಕಚ್ಚಾ ವಸ್ತುಗಳು | ರೆಯಾಲ್ |
| ರಷ್ಯಾ | ೧೭೦೯೮ | ೧೪.೩೨ | ೪.೧ | ೩.೭ | ೧೨೧.೪ | ತೈಲ, ಗ್ಯಾಸ್ | ರೂಬಲ್ |
| ಭಾರತ | ೩೨೮೭ | ೧೨೧ | ೩.೮ | ೧.೩ | ೧೫೬ | ಮಾನವ ಸಂಪನ್ಮೂಲ, ತಯಾರಿಕಾ ವಲಯ | ರೂಪಾಯಿ |
| ಚೀನಾ | ೯೬೦೦ | ೧೩೫ | ೩.೯ | ೬.೦ | ೧೨೨ | ಮಾನವ ಸಂಪನ್ಮೂಲ, ತಯಾರಿಕಾ ವಲಯ | ಯೂವಾನ್ |
| ದಕ್ಷಿಣ ಆಫ್ರಿಕಾ | ೧೨೨೧ | ೫.೦೬ | ೬.೮ | ೪.೦ | – | ಕೃಷಿ ಮತ್ತು ಗಣಿ | ರ್‍ಯಾಂಡ್ |

**ಆಧಾರ :** ವರ್ಲ್ಡ್ ಡೆವೆಲಪ್‌ಮೆಂಟ್ ರಿಪೋರ್ಟ್ – ೨೦೧೩–೧೪

**ಭಾರತ ಮತ್ತು ಬ್ರಿಕ್ಸ್ ನಡುವಿನ ಬಾಂಧವ್ಯ**

ಭಾರತವು ಒಟ್ಟಾರೆ ಜಾಗತಿಕ ಆರ್ಥಿಕ ವ್ಯವಸ್ಥೆಯಲ್ಲಿ ಮುಂಚೂಣಿಯಲ್ಲಿದೆ. ಪ್ರಗತಿಶೀಲ ರಾಷ್ಟ್ರವಾದ ಭಾರತಕ್ಕೆ ಇಂತಹ ಬ್ರಿಕ್ಸ್ ಬ್ಯಾಂಕ್ ತುಂಬ ಅವಶ್ಯಕತೆಯಿದೆ. ಏಕೆಂದರೆ ವಿಶ್ವಬ್ಯಾಂಕ್, ಅಂತರರಾಷ್ಟ್ರೀಯ ಹಣಕಾಸು ನಿಧಿ, ಈ ಹಣಕಾಸು ಸಂಸ್ಥೆಗಳು ಅಮೇರಿಕಾದಂತಹ ಅಭಿವೃದ್ಧಿ ಹೊಂದಿದಂತಹ ದೇಶಗಳ ಕೈಗೊಂಬೆಯಾಗಿವೆ. ಆದ್ದರಿಂದ ಅಭಿವೃದ್ಧಿಶೀಲ ರಾಷ್ಟ್ರಗಳನ್ನು ಕಡೆಗಣಿಸುತ್ತಿವೆ. ಪಾಶ್ಚಿಮಾತ್ಯ ದೇಶಗಳ ಮೇಲಿನ ಅವಲಂಬನೆಯನ್ನು ಕಡಿಮೆಗೊಳಿಸಲು ಬ್ರಿಕ್ಸ್ ತುಂಬ ಸಹಾಯಕಾರಿಯಾಗಲಿದೆ. ನಿಖರವಾಗಿ ಹೇಳಬೇಕೆಂದರೆ, ಭಾರತಕ್ಕೆ ಇದೊಂದು ಅತ್ಯಮೂಲ್ಯ ಅವಕಾಶ. ಏಕೆಂದರೆ ದೇಶದಲ್ಲಿ ಮೂಲಭೂತ ಸೌಲಭ್ಯಗಳನ್ನು ಸ್ಥಾಪಿಸಲು, ವಿಸ್ತರಿಸಲು, ಭಾರಿ ಪ್ರಮಾಣದ ಬಂಡವಾಳ ಅಗತ್ಯವಿದೆ. ಈ ಬಂಡವಾಳಕ್ಕಾಗಿ ಸಾಲ ಪಡೆಯ ಬೇಕಾಗುತ್ತದೆ. ಬ್ರಿಕ್ಸ್ ಸ್ಥಾಪನೆಯಿಂದ ಭಾರತಕ್ಕೆ ಸುಲಭವಾಗಿ ಸಾಲ ಸೌಲಭ್ಯ ಪಡೆದು ಮೂಲ ಸೌಕರ್ಯ ಕ್ಷೇತ್ರದಲ್ಲಿ ಹೆಚ್ಚಿನ ಬಂಡವಾಳ ಹೂಡಲು ಸಾಧ್ಯವಾಗುತ್ತದೆ. ಮೂಲ ಸೌಲಭ್ಯಗಳ ವಿಕಾಸವಾದರೆ ಆರ್ಥಿಕತೆಗೂ ಬಲ ಬಂದೇ ಬರುತ್ತದೆ. ಇದೊಂದು **ಅಭಿವೃದ್ಧಿ ಪಥ ಸಂಚಲನ** ಅಥವಾ **ಅರ್ಥವ್ಯವಸ್ಥೆಯ ನೂತನ ಎಂಜಿನ್** ಎಂದು ಹೇಳಬಹುದು.

ಭಾರತವು ಬ್ರಿಕ್ಸ್‌ನ ಆರ್ಥಿಕ ಶೃಂಗಸಭೆಯ ಆತಿಥ್ಯವನ್ನು ೨೦೧೨ರ ಇಸವಿಯಲ್ಲಿ ವ್ಯವಸ್ಥಿತವಾಗಿ ನೆರವೇರಿಸಿ ಪ್ರಶಂಸೆಗೊಳಪಟ್ಟಿದೆ. ಈ ಸಭೆಯಲ್ಲಿಯೇ ನೂತನ ಬ್ರಿಕ್ಸ್ ಬ್ಯಾಂಕ್ ಸ್ಥಾಪನೆಗೆ ಮುನ್ನುಡಿಯನ್ನು ಬರೆದಿದ್ದರೂ ಅದರ ಫಲ ಈಗ ದೊರಕಿದಂತಾಗಿದೆ.

**ಉಪಸಂಹಾರ**

ಅಭಿವೃದ್ಧಿಶೀಲ ರಾಷ್ಟ್ರಗಳ ಮೇಲೆ ಸವಾರಿ ಮಾಡಲು ಹೊರಟಿರುವ ಅಭಿವೃದ್ಧ ದೇಶಗಳಿಗೆ ಪರ್ಯಾಯವಾಗಿ 'ಬ್ರಿಕ್ಸ್‌ನ ನೂತನ ಅಭಿವೃದ್ಧಿ ಬ್ಯಾಂಕ್' ಜಾಗತಿಕ ಆರ್ಥಿಕ ವ್ಯವಸ್ಥೆಯಲ್ಲಿ ತನ್ನದೇ ಕಾರ್ಯತಂತ್ರದ ಮೂಲಕ ಅಭಿವೃದ್ಧಿಗೆ ಬುನಾದಿ ಹಾಕಲು ಮಾಡಿರುವ ನಿಯೋಜಿತ ಕಾರ್ಯತಂತ್ರ ಎಂದು ಹೇಳಬಹುದು. ಹಾಗೆಯೇ ಅಭಿವೃದ್ಧಿಶೀಲ ರಾಷ್ಟ್ರಗಳಿಗೆ ಇದೊಂದು ಪ್ರಗತಿಯ ಪ್ರತೀಕ ಮಾತ್ರವಲ್ಲ, ಅಭಿವೃದ್ಧಿಯ ದಿವ್ಯಜ್ಯೋತಿ ಎಂಬುದನ್ನು ಮರೆಯಬಾರದು. ಒಟ್ಟಿನಲ್ಲಿ, ಇದನ್ನು ಅರ್ಥವ್ಯವಸ್ಥೆಗೆ ಪ್ರಗತಿಶೀಲ ದೇಶಗಳು ನೀಡಿರುವ ಆರ್ಥಿಕ ವ್ಯವಸ್ಥೆಯ ನೂತನ ಎಂಜಿನ್ ಎಂದು ಕರೆಯಬಹುದು.

**ಡಾ|| ಸುರೇಶ ಕೆ. ಪಿ.**
ಅರ್ಥಶಾಸ್ತ್ರ ಉಪನ್ಯಾಸಕರು
ನ್ಯಾಷನಲ್ ಕಾಲೇಜು
ಬಸವನಗುಡಿ
ಬೆಂಗಳೂರು – ೫೬೦ ೦೦೪






**ಕಾಡುಹಸು** (ಕಥಾ ಸಂಕಲನ)

ಕೆ. ಎಂ. ಸಂತೋಷ್‌ಕುಮಾರ್

**ಪುಟ : ೧೬೦ + iv = ೧೬೪**

**ಬೆಲೆ : ರೂ. ೧೨೦**

**ಜ್ಯೋತಿ ಪ್ರಕಾಶನ**

ಎಂ. ೪೫, ಕರ್ನಾಟಕ ಬ್ಯಾಂಕ್ ರಸ್ತೆ, ವಿವೇಕಾನಂದ ಸರ್ಕಲ್ ಹತ್ತಿರ

ಮೈಸೂರು – ೫೭೦ ೦೨೩

*ಪತ್ರಕರ್ತ ಕೆ. ಎಂ. ಸಂತೋಷ್‌ಕುಮಾರ್ ಅವರ ಒಂಭತ್ತು ಕಥೆಗಳ ಸಂಕಲನ ಕಾಡುಹಸು. ಹಾಸನ, ಚಿಕ್ಕಮಗಳೂರು, ಮಲೆನಾಡು, ಅರೆಮಲೆನಾಡಿನ ಪ್ರದೇಶದ ಜನಜೀವನವನ್ನು ಕಥಾರೂಪದಲ್ಲಿ ಕಟ್ಟಿಕೊಡುವ ಕೃತಿ ಇದು. ಜಾಗತೀಕರಣದಿಂದಾಗಿ ಗ್ರಾಮಗಳು ನಗರಗಳ ಬಡಾವಣೆಗಳಂತಾಗುತ್ತಿರುವ ಇಂದಿನ ದಿನಗಳಲ್ಲಿ ಒಂದು ಕಾಲದ ದೇಸೀ ಬದುಕು, ಜೀವನ ವಿಧಾನ, ಮಾನವ ಸಂಬಂಧಗಳು ಜೊತೆಗೇ ಅವರ ಭಾಷೆ, ಸಂಸ್ಕೃತಿಯನ್ನು ವಾಸ್ತವವಾಗಿ ಕಟ್ಟಿಕೊಡುವಲ್ಲಿ ಸಂತೋಷ್‌ಕುಮಾರ್ ಯಶಸ್ವಿಯಾಗಿದ್ದಾರೆ. ಕೇವಲ ದೇಸೀತನದ ವರದಿ ಕೊಡದೇ ಜೀವಪರವಾದ – ಜೀವವಿರೋಧಿಯಾದ ಮಾನವ ಸಹಜವಾದ ಗುಣ ಮತ್ತು ಕ್ರಿಯೆಗಳನ್ನು ದಾಖಲಿಸುತ್ತಲೇ ಮಾನವೀಯ ಮೌಲ್ಯಗಳ ಮಿಡಿತಗಳನ್ನು ಕಥಾವಸ್ತುವಿನ ಮೂಲಕ ಪ್ರಸ್ತುತ ಪಡಿಸುತ್ತಾರೆ. ಹೊಸ ತಲೆಮಾರಿನವರಿಗೆ ಅಪರಿಚಿತವಾಗುತ್ತಿರುವ, ಮುಂದಿನ ತಲೆಮಾರಿಗೆ ಮರೆತೇ ಹೋಗುವ ದೇಸೀ ಬದುಕು, ವಿರಳವಾಗುತ್ತಿರುವ ಸಹಜೀವನ ಇಂಥ ಕೃತಿಗಳ ಮೂಲಕ ಮತ್ತೆ ಮಾದರಿ ಆಗಬೇಕು. ಎಷ್ಟೇ ಆಧುನಿಕತೆಯತ್ತ ಮುನ್ನಡೆದರೂ ಮಾನವ ಸಂಬಂಧಗಳು ಕಡಿದುಹೋಗಬಾರದು. ಅಂಥ ಸಂಬಂಧಗಳನ್ನು ಸಂದರ್ಭದ ಹಿನ್ನೆಲೆಯಲ್ಲಿ ಈ ಕಥಾ ಸಂಕಲನ ಕಟ್ಟಿಕೊಡುತ್ತದೆ.*

– **ಶ್ರೀಸುಮಿತ್ರಾಸುತ,** ಅಗಸಬಾಳ

**ಹೊಸ ಪಕ್ಷಿ ರಾಗ** (ಅಂಕಣ ಬರಹಗಳು) ಜ್ಯೋತಿ ಗುರುಪ್ರಸಾದ್

**ಪುಟ : ೧೯೦** **ಬೆಲೆ : ರೂ. ೧೫೦**

**ಸೃಷ್ಟಿ ಪಬ್ಲಿಕೇಷನ್ಸ್,** ಬೆಂಗಳೂರು

*ಜ್ಯೋತಿ ಗುರುಪ್ರಸಾದ್ ಅವರು 'ಸಂವಾದ' ಪತ್ರಿಕೆಯಲ್ಲಿ ಬರೆದ ಅಂಕಣ 'ಹೊಸ ಪಕ್ಷಿ ರಾಗ'ದ ೧೨ ಲೇಖನಗಳು, 'ವಾರ್ತಾಭಾರತಿ' ಮತ್ತಿತರ ಪತ್ರಿಕೆಗಳಲ್ಲಿ ಬರೆದ ಒಟ್ಟು ೩೭ ಲೇಖನಗಳನ್ನು ಇಲ್ಲಿ ದಾಖಲಿಸಿದ್ದಾರೆ. ಇಲ್ಲಿನ ಲೇಖನಗಳು ಹಲವಾರು ರೀತಿಯ ವಿಷಯಗಳನ್ನು ಒಳಗೊಂಡಿದ್ದು ಮುಖ್ಯವಾಗಿ ಮಹಿಳೆಯ ಮೇಲಿನ ದೌರ್ಜನ್ಯ ಮತ್ತು ಅವರ ಅಸಹಾಯಕತೆಯ ಬಗ್ಗೆ, ಧರ್ಮ, ರಾಜಕಾರಣ, ಶಿಕ್ಷಣ, ಸಿನಿಮಾ ಇತ್ಯಾದಿಗಳ ಮೇಲೆ ಬರೆದಿದ್ದಾರೆ. ಮಹಿಳೆಯ ಬಗ್ಗೆ ಹಲವು ಲೇಖನಗಳಿದ್ದು ಪಿತೃಪ್ರಧಾನ ಸಂಸ್ಕೃತಿಯಿಂದ ಹೆಣ್ಣಿನ ಶೋಷಣೆ ನಡೆಯುತ್ತದೆ ಎನ್ನುತ್ತಾರೆ. ದಲಿತರ ಬಗ್ಗೆ ಒಂದು ಲೇಖನವಿದ್ದು ಅವರ ಕುಟುಂಬದವರು ದಲಿತರನ್ನು ಹೇಗೆ ನಡೆಸಿಕೊಳ್ಳುತ್ತಿದ್ದರು ಎಂಬುದನ್ನು ಚಿತ್ರಿಸಿದ್ದಾರೆ. ಹಾಗೇ ಕಸಬ್ ಗಲ್ಲುಗೇರಿದ ವಿಷಯವನ್ನು ಪ್ರಸ್ತಾಪಿಸುತ್ತ ನಮ್ಮ ನ್ಯಾಯಾಂಗದಲ್ಲಿರುವ ಗಲ್ಲುಶಿಕ್ಷೆಯ ಬಗ್ಗೆ ಪಶ್ಚಾತ್ತಾಪ ವ್ಯಕ್ತಪಡಿಸುತ್ತಾರೆ. ಅದರ ಜೊತೆಗೆ ಲಕ್ಷಾಂತರ ಅಮಾಯಕರು ಜೈಲುಗಳಲ್ಲಿ ಹಲವಾರು ವರ್ಷಗಳ ಕಾಲ ಟ್ರಯಲ್ ಇಲ್ಲದೆ ಕೊಳೆಯುತ್ತಿರುವುದರ ಬಗ್ಗೆ ಬರೆದಿದ್ದರೆ ಚೆನ್ನಾಗಿತ್ತು. 'ವಿಪಶ್ಯನ ಧ್ಯಾನ'ದ ಜೊತೆಗೆ ಕೆಲವು ಚೇತೋಹಾರಿ ಲೇಖನಗಳಿದ್ದು ಒಟ್ಟಿನಲ್ಲಿ ಜ್ಯೋತಿಪ್ರಸಾದ್ ಅವರ ಲೇಖನಗಳ ಹರವು ಮತ್ತು ಜೀವನದ ಬಗೆಗಿನ ಪ್ರೀತಿ ಉತ್ಸಾಹವನ್ನು ಉಕ್ಕಿಸುತ್ತದೆ. ಮುಂದೆ ಅವರು ಬರೆಯುವ ಲೇಖನಗಳು ಇನ್ನಷ್ಟು ಪ್ರಬುದ್ಧತೆಯಿಂದ ಕೂಡಿರುತ್ತವೆ ಎನ್ನುವುದರಲ್ಲಿ ಸಂದೇಹವಿಲ್ಲ.*



**ತಲ್ಲಣ** (ಅಂಕಣ ಬರಹದ ಕಟ್ಟು) ಎಸ್. ಮಾಲತಿ ಸಾಗರ

**ಪುಟ : ೨೨೬** **ಬೆಲೆ : ರೂ. ೧೫೦**

**ಬಂಡಾಯ ಪ್ರಕಾಶನ,** ಹೊನ್ನಾವರ

*ಸಾಮಾಜಿಕ ಸಮಾನತೆಯ ಆಶಯಗಳೊಂದಿಗೆ ಸೃಜನಶೀಲತೆಯನ್ನು ಬೆಳೆಸಿಕೊಂಡಿರುವ ಎಸ್. ಮಾಲತಿಯವರು ವಿವಿಧ ಪತ್ರಿಕೆಗಳಲ್ಲಿ ಬರೆದ ಅಂಕಣ/ಲೇಖನಗಳನ್ನು 'ತಲ್ಲಣ'ದಲ್ಲಿ ದಾಖಲಿಸಿದ್ದಾರೆ. 'ತಲ್ಲಣ'ದಲ್ಲಿ ಒಟ್ಟು ೪೮ ಲೇಖನಗಳಿದ್ದು ಪ್ರಸ್ತುತ ಸಮಾಜದಲ್ಲಿ ನಡೆಯುತ್ತಿರುವ ಘಾತಕ ವಿಷಯಗಳ ಬಗ್ಗೆ ಲೇಖಕಿ ಸಾಮಾಜಿಕ ಬದ್ಧತೆಯ ಜೊತೆಗೆ ಕಳವಳ ವ್ಯಕ್ತಪಡಿಸಿರುವುದು ಬಹಳಷ್ಟು ಲೇಖನಗಳಲ್ಲಿ ಎದ್ದು ಕಾಣುತ್ತದೆ. ಕೃತಿಯಲ್ಲಿನ ಲೇಖನಗಳನ್ನು ೨ ಭಾಗಗಳಾಗಿ ವಿಂಗಡಿಸಿ ಮೊದಲನೇ ಭಾಗದಲ್ಲಿ ಮಹಿಳೆಗೆ ಸಂಬಂಧಪಟ್ಟ ಹಲವು ವಿಷಯಗಳೊಂದಿಗೆ ಶಿಕ್ಷಣ, ಗ್ರಾಮೀಣ ಬದುಕು, ಮಕ್ಕಳ ಸಮಸ್ಯೆಗಳನ್ನು ವಿಶ್ಲೇಷಿಸಿದ್ದಾರೆ. ಜೊತೆಗೆ ಈ ಲೇಖನಗಳಲ್ಲಿ ಬಹಳಷ್ಟು ಅಂಕಿಅಂಶಗಳನ್ನು ಕಲೆಹಾಕಿದ್ದು ಕೆಲವು ಲೇಖನಗಳ ಕೊನೆಯಲ್ಲಿ ಒಂದೆರಡು ಪದ್ಯಗಳನ್ನು ಸೇರಿಸಿದ್ದಾರೆ. ವರ್ಣರಂಜಿತ ಮುಖ್ಯಮಂತ್ರಿ ಜಯಲಲಿತ, ಬಾದಲ್ ಸರಕಾರದಿಂದ ಹಿಡಿದು ರಿಯಾಲಿಟಿ ಶೋನ ರಾಜೇಶ್‌ನ ದುರಂತದವರೆಗಿನ ಲೇಖನಗಳು ಸೇರಿಕೊಂಡಿವೆ. ಎರಡನೇ ಭಾಗದಲ್ಲಿ ರಂಗಭೂಮಿ ಮತ್ತು ರಂಗ ಪ್ರಯೋಗಗಳ ಬಗ್ಗೆ ಅವಲೋಕನ ಮಾಡಿರುವ ಲೇಖನಗಳು ಇವೆ. ನಾಟಕಗಳು ಮತ್ತು ನಾಟಕಕಾರರಾದ ಶೇಕ್ಸ್‌ಪಿಯರ್, ಶ್ರೀರಂಗಂ, ಇಬ್ಸನ್, ಕುವೆಂಪು, ಜಿ. ಪಿ. ರಾಜರತ್ನಂ, ಲಂಕೇಶ್, ಯು. ಆರ್. ಅನಂತಮೂರ್ತಿ, ವಿಜಯ್ ತೆಂಡೂಲ್ಕರ್‌ರ ಬಗ್ಗೆ ಲೇಖನಗಳಿವೆ. ಈ ಲೇಖನಗಳಿಂದ ನಾಟಕಗಳೊಂದಿಗಿನ ಅವರ ಗಾಢ ಸಂಬಂಧ ಮತ್ತು ಒಳಗೊಳ್ಳುವಿಕೆ ತಿಳಿಯುತ್ತದೆ. ಮಣಿಪುರದ ಇರೋಂ ಶರ್ಮಿಳಾ, ಕರುಣಾಮಯಿ ಕ್ರಿಸ್ತನ ಬಗ್ಗೆ ಮತ್ತು ಇನ್ನೂ ಕೆಲವು ಲೇಖನಗಳು ಓದುಗರನ್ನು ಕಾಡುತ್ತವೆ. ಒಟ್ಟಿನಲ್ಲಿ ತಲ್ಲಣದಲ್ಲಿರುವ ಲೇಖನಗಳು ವೈವಿಧ್ಯಮಯವಾಗಿ ಮತ್ತು ಪ್ರಬುದ್ಧವಾಗಿ ಮೂಡಿಬಂದಿರುವುದನ್ನು ನೋಡಬಹುದು.*

– **ಡಾ॥ ಎಂ. ವೆಂಕಟಸ್ವಾಮಿ,** ಬೆಂಗಳೂರು

**ಸಣ್ಣಕತೆ ಎಂದರೇನು ?** (ಲೇಖನಗಳ ಸಂಗ್ರಹ) ಸಂಪಾದಕರು : ನಂದೀಶ್ವರ ದಂಡೆ

**ಪುಟ : ೮೦** **ಬೆಲೆ : ರೂ. ೧೦೦**

**ವಿಜಯಕಲ್ಯಾಣ ಪ್ರಕಾಶನ,** ಹೊಸಪೇಟೆ



*ನಂದೀಶ್ವರ ದಂಡೆ ಸಂಪಾದಿಸಿರುವ ಸಣ್ಣ ಕತೆಗಳಲ್ಲಿನ ವಸ್ತು, ತಂತ್ರ, ನಿರೂಪಣೆ, ಸಂಗತಿ ಮತ್ತು ವಾಸ್ತವಿಕತೆಗಳ ಕುರಿತಾಗಿ ಕನ್ನಡದ ಹಿರಿಯ ಕತೆಗಾರರಾದ ತೀ. ನಂ. ಶ್ರೀ, ಯಶವಂತ ಚಿತ್ತಾಲ, ಗಿರಡ್ಡಿ ಗೋವಿಂದರಾಜ, ಜಿ. ಎಸ್. ಆಮೂರ, ಅಮರೇಶ ನುಗಡೋಣಿ ಮತ್ತು ಎಸ್. ಪ್ರಸಾದಸ್ವಾಮಿಯವರು ವಿವಿಧ ಸಂದರ್ಭಗಳಲ್ಲಿ ಬರೆದಿರುವ ಲೇಖನಗಳನ್ನೊಳಗೊಂಡ ಕೃತಿ 'ಸಣ್ಣಕತೆ ಎಂದರೇನು'. ಸಾಹಿತ್ಯ ಪ್ರಕಾರಗಳಲ್ಲಿ ಒಂದಾದ ಕಥಾರಚನೆಯಲ್ಲಿ ಲೇಖಕ ಅನೇಕ ಸವಾಲುಗಳನ್ನು ಎದುರಿಸಬೇಕಾಗುತ್ತದೆ. ಕತೆಗಾರಿಕೆಯೆಂದರೆ ಕಲೆಗಾರಿಕೆಯೇ ಆಗಿದ್ದು, ಕತೆಗಾರನ ಕಣ್ಣಿಗೆ ಕಾಣುವ ಸುತ್ತಲಿನ ಲೋಕದಲ್ಲಿನ ಎಲ್ಲ ವಸ್ತುಗಳು ಈ ಕಲೆಯ ಸಾಮಗ್ರಿಗಳಾಗಬಹುದು. ಲೋಕವನ್ನು ನೋಡುವ ಕಲೆ ಗೊತ್ತಿರುವ ಪ್ರಬುದ್ಧ ಕತೆಗಾರ ತಾನು ಕಂಡ ಸಂಗತಿ, ವಸ್ತು, ಪಾತ್ರ, ಸನ್ನಿವೇಶಗಳನ್ನು ತನ್ನೊಳಗೆ ಲೀನವಾಗಿಸಿಕೊಂಡು, ಇವೆಲ್ಲವುಗಳನ್ನು ಕತೆಯೊಳಗೆ ಕಲೆಯಂತೆ ಅರಳಿಸುತ್ತಾನೆ. ಈ ಇಂಥ ಕಲೆ(ಕತೆ)ಗೆ ಜೀವಂತಿಕೆಯಿದ್ದು ಸಜೀವವಾದದ್ದು ಬೆಳೆಯುವ ಕ್ರಮದಲ್ಲೇ ಇರುತ್ತದೆ. ಆದರೆ, ಈ ಎಲ್ಲ ಕ್ರಿಯೆಗಳಿಗೂ ಕತೆಗಾರನಿಗೊಂದು ತಾತ್ವಿಕತೆ (ದೃಷ್ಟಿಕೋನ) ಬೇಕು. ಆ ತಾತ್ವಿಕತೆಯ ನೆಲೆಯಲ್ಲಿಯೇ ಕಥೆಯೊಳಗೆ ಮನುಷ್ಯನ ಬದುಕನ್ನು ಕಟ್ಟುತ್ತಾನೆ. ಕಣ್ಣಿಗೆ ಗೋಚರಿಸಿದ್ದನ್ನು ಕಥೆಗಾರ ಗ್ರಹಿಸುವಾಗ ಅದು ಬೇರೆಯದೇ ಸ್ವರೂಪ ಪಡೆದುಕೊಳ್ಳುತ್ತದೆ. ಹೀಗೆ, ಸಣ್ಣಕತೆಯ ಸ್ವರೂಪದ ಕುರಿತಾಗಿ ಇರುವ ಕನ್ನಡದ ಹೆಸರಾಂತ ಕಥೆಗಾರರ ಆಲೋಚನೆಗಳನ್ನೊಳಗೊಂಡ ಲೇಖನಗಳು ಸಾರ್ವಕಾಲಿಕವಾಗಿರುವಂಥವು. ಜೊತೆಗೆ, ಈ ಲೇಖನಗಳನ್ನೊಳಗೊಂಡ ಈ ಕೃತಿ ಸಮಕಾಲೀನ ಸಂದರ್ಭದ ಕಥೆಗಾರರಿಗೆ ನಮ್ಮ ಕಥಾ ಪರಂಪರೆ ಬೆಳೆದು ಬಂದ ಬಗೆಯನ್ನು ಅರಿಯಲೂ ಸಹ ಸಹಕಾರಿಯಾಗಿದೆ.*

– **ಕಲ್ಲೇಶ್ ಕುಂಬಾರ್,** ಹಾರೂಗೇರಿ, ಬೆಳಗಾವಿ

# ಪೊರಕೆ ಪುರಾಣ

**ಡಾ॥ ಶೈಲಾ ಯು.**

ಇಂದು ಹೆಣ್ಣುಮಕ್ಕಳ ಮೇಲೆ ನಡೆಯುತ್ತಿರುವ ದೌರ್ಜನ್ಯ ಮಿತಿಮೀರಿದೆ. ಕಳೆದ ವರ್ಷ ಮಾರ್ಚ್‌ನಲ್ಲಿ ಮಹಿಳಾ ದಿನಾಚರಣೆಯ ಸಮಯದಲ್ಲಿ ಕರಾವಳಿಯ ಮಹಿಳಾ ಸಂಘಟನೆಗಳು ರಾಜ್ಯದ ಇತರ ಸಂಘಟನೆಗಳ ಜೊತೆ ಸೇರಿ ಇಂತಹ ದೌರ್ಜನ್ಯದ ವಿರುದ್ಧ ಪ್ರತಿಭಟನೆಯನ್ನು ಹಮ್ಮಿಕೊಂಡಿದ್ದವು. ಇದರಲ್ಲಿ ನಾವೆಲ್ಲರೂ ಪಾಲ್ಗೊಂಡಿದ್ದೆವು. ನಮ್ಮ ಪ್ರತಿಭಟನೆಯ ಬಿಸಿ ಎಷ್ಟು ತೀವ್ರ ಸ್ವರೂಪದ್ದೆಂದು ಎಲ್ಲರಿಗೂ ತಿಳಿಯಬೇಕೆಂಬ ಉತ್ಸಾಹದಲ್ಲಿ ರಬ್ಬರ್‌ನಿಂದ ತಯಾರಿಸಿದ ಬೃಹತ್ ಚಪ್ಪಲಿಯ ಪ್ರತಿಕೃತಿಗೆ ನಾಲ್ಕಾರು ಜನ ಪಂಪ್‌ನಿಂದ ಗಾಳಿ ತುಂಬಿ ಪ್ರತಿಭಟನಾ ಮೆರವಣಿಗೆಯಲ್ಲಿ ಹೊತ್ತೊಯ್ದೆವು. ಅಲ್ಲಿ ನೆರೆದಿದ್ದ ಹಲವು ಕಾರ್ಯಕರ್ತರು ಅದಕ್ಕೆ ಗಾಳಿ ತುಂಬುವಾಗ ಅದನ್ನೇ ನೋಡುತ್ತಿದ್ದ ನನಗನ್ನಿಸಿತು, ನಮ್ಮ ಪ್ರತಿಭಟನೆಯನ್ನು ಸೂಚಿಸಲು ಇದಕ್ಕಿಂತಲೂ, ಒಬ್ಬೊಬ್ಬರ ಕೈಗೆ ಒಂದೊಂದು ಪೊರಕೆ ಕೊಟ್ಟಿದ್ದರೆ ಇನ್ನೂ ಚೆನ್ನಾಗಿತ್ತು ಅಂತ. ಕಾರ್ಯಕ್ರಮ ಮುಗಿದ ಮೇಲೆ ಬೇಕಿದ್ದರೆ ನಮ್ಮ ಪ್ರತಿರೋಧದ ನೆನಪಾಗಿ ಅದನ್ನು ಮನೆಗೂ ಒಯ್ದು ಜೋಪಾನವಾಗಿ ಇಡಬಹುದಿತ್ತು. ಇದೇ ನೆಪವಾಗಿ ನನಗೆ ನೆನಪಾದದ್ದೇ ಪೊರಕೆ.

ಪ್ರತೀ ಮನೆಯಲ್ಲೂ ಕಸ ಗುಡಿಸಲು ಅಗತ್ಯವಾಗಿ ಬೇಕಿರುವ ಸಾಮಗ್ರಿ ಪೊರಕೆ. ಹಾಗೆಯೇ ಯಾರನ್ನಾದರೂ ಅವಮಾನಿಸಲೂ ಕೂಡ ಇದರ ಸೇವೆ ಉಪಯುಕ್ತ ಮತ್ತು ಅಗತ್ಯ. ಕರಾವಳಿಯಲ್ಲಿ ತುಳುವರು ತೆಂಗಿನ ಗರಿಯಿಂದ ಬೇರ್ಪಡಿಸಿದ ಒಂದು ಹಿಡಿಯಷ್ಟು ಕಡ್ಡಿಗಳನ್ನು ಹಗ್ಗದಿಂದ ಕಟ್ಟಿ 'ಮೈಪುಸೂಡಿ' ಮಾಡಿ ಬಳಸುತ್ತಾರೆ. ಮಂಗಳೂರು ಕನ್ನಡಿಗರಿಗೆ ಇದು 'ಹಿಡಿಸೂಡಿ', ಅಂದರೆ ಒಂದು ಹಿಡಿಯಲ್ಲಿ ಹಿಡಿಯಲು ಬರುವಂಥ ಗೊಂಚಲು (ಇಲ್ಲಿನ ಮಹಿಳೆಯರು ತಲೆಯ ಕೂದಲನ್ನು ತಮ್ಮ ಹಿಡಿಯಲ್ಲಿ ಎತ್ತಿ ಸುತ್ತಿ ಗಟ್ಟಿಯಾಗಿ ಗಂಟು ಹಾಕಿಕೊಳ್ಳುತ್ತಾರೆ; ಅದೂ 'ಸೂಡಿ'ಯೇ ; ಆದರೆ ತಲೆಸೂಡಿ). ಕುಂದಾಪುರ ಕನ್ನಡದಲ್ಲಿ ಇದು 'ಹಿಡಿಕಟ್ಟ್', ಅಂದರೆ ಹಿಡಿಯಷ್ಟನ್ನು ಕಟ್ಟಿರುವುದು. ಕರ್ನಾಟಕದ ಇತರೆಡೆಗಳಲ್ಲಿ ಅದು ಕಸಬರಿಗೆ, ಬರ್ಲು ಇತ್ಯಾದಿ ನಾಮಾಂಕಿತಗಳಿಂದ ಕರೆಸಿಕೊಳ್ಳುತ್ತದೆ.

ಬೇರೆ ಬೇರೆ ಪ್ರದೇಶಗಳಲ್ಲಿ ದೊರೆಯುವ ಕಚ್ಚಾಸಾಮಗ್ರಿಗೆ ಅನುಗುಣವಾಗಿ ಪೊರಕೆ ತಯಾರಿಕೆಗೆ ಬಳಸುವ ಕಡ್ಡಿಯೂ ವಿಭಿನ್ನ. ಕರಾವಳಿಯುದ್ದಕ್ಕೂ ತೆಂಗಿನ ಕಡ್ಡಿಗಳಾದರೆ, ಉತ್ತರ ಕರ್ನಾಟಕದಲ್ಲಿ ತೊಗರಿ ಕಡ್ಡಿಗಳು, ಬಳ್ಳಾರಿ ಸೀಮೆಯಲ್ಲಿ ಈಚಲುಮರದ ಗರಿಗಳು, ಕೆಲವೆಡೆ ಉದ್ದಕ್ಕೆ ಬೆಳೆಯುವ ಜಾತಿಯ ಹುಲ್ಲು... ಹೀಗೆ ನಾನಾ ವಿಧದ ಪೊರಕೆಗಳು. ಗ್ರಾಮೀಣರ ಕೈಚಳಕದಿಂದ ಖರ್ಚೇ ಇಲ್ಲದೆ ಮನೆಬಳಕೆಯ ಸಾಮಗ್ರಿಯಾಗಿ ಇವು ಬದಲಾಗುವುವು. ಇಂದು ಪೊರಕೆ ಬೃಹತ್ ಪ್ರಮಾಣದಲ್ಲಿ ತಯಾರಾಗಿ ಮಾರುಕಟ್ಟೆಗೆ ಬಂದು ಬೀಳುತ್ತಿದೆ. ಅದೇ ಒಂದು ಪರಿಸರಸ್ನೇಹಿ ಉದ್ಯಮವಾಗಿ, ಗೃಹ ಕೈಗಾರಿಕೆಯಾಗಿ, ಬಡವರ ಬದುಕಿಗೆ ಆಧಾರವಾಗಿಯೂ ಬೆಳೆದಿದೆ ಅನ್ನುವುದು ಸಂತೋಷದ ಸಂಗತಿ.

ಇಂತಹ ಪೊರಕೆ ಹಳೆಯದಾಗಿ ಲಡ್ಡಾದರೆ ಯಾವ ಹಿಂಜರಿಕೆಯೂ ಇಲ್ಲದೆ, ತೆಗೆದು ಹೊರಗೆ ಬಿಸಾಕಿಬಿಡಬಹುದು. ಮಣ್ಣಲ್ಲಿ ಸೇರಿ ಮಣ್ಣಾಗಿ ಬಿಡುವಂಥ ಈ ಪೊರಕೆ ಪರಿಸರಸ್ನೇಹಿಯೂ ಹೌದು; ಜಿರಲೆಯೋ ಚೇಳೋ ಆಕಸ್ಮಿಕವಾಗಿ ಕಂಡರೆ ಆಪತ್ತಿನಲ್ಲಿ ಸಹಾಯಕ್ಕೆ ಬರುವ ಆಯುಧವೂ ಹೌದು. ಯಾಕೆಂದರೆ ಅಂಥ ಜೀವಿಗಳೆಲ್ಲ ಕಾಣಿಸಿಕೊಳ್ಳುವುದೇ ಆಕಸ್ಮಿಕವಾಗಿ. ಕಪಾಟಿನಲ್ಲಿಟ್ಟು ಸಾಕಷ್ಟು ದಿನಗಳಾದ ಯಾವುದೋ ಬಟ್ಟೆಯನ್ನು ಎತ್ತಿಡುವಾಗಲೋ ಅಥವಾ ಅಷ್ಟಾಗಿ ಬಳಸದ ಕೋಣೆಯಲ್ಲಿ ಯಾವುದೋ ವಸ್ತುವಿಗೆ ಹುಡುಕಾಡುವಾಗಲೋ, ರಟ್ಟಿನ ಡಬ್ಬವೊಂದನ್ನು ಬೋರಲು ಹಾಕಿದಾಗಲೋ ಇಲ್ಲಿಯ ತನಕ ಅದರಲ್ಲಿ ನಿರಾತಂಕವಾಗಿ ಅವಿತು ಕೂತಿದ್ದ ಇವು ಧುತ್ತೆಂದು ಪ್ರತ್ಯಕ್ಷವಾಗಿಬಿಡುತ್ತವೆ. ಆ ಹೊತ್ತಿಗಾದ ಆಘಾತದಲ್ಲಿ ಏನೂ ತೋಚದೆ ನಾವು ಕಂಗಾಲಾಗಿಬಿಡುವುದೇ ಹೆಚ್ಚು . ಆಗ ನಮಗೆ ಮನೆಯ ಮೂಲೆಯಲ್ಲಿ ಒತ್ತರಿಸಿಟ್ಟ ಪೊರಕೆಯೇ ಆಪತ್ಬಾಂಧವ. ಒನಕೆ ಓಬವ್ವಳಂತೆ ಯಾರ ಸಹಾಯವೂ ಇಲ್ಲದೆ ಪೊರಕೆಯಿಂದ ಜಿರಲೆ / ಚೇಳಿನ ಸಂಹಾರ ಮಾಡಿ ಜೈಸಬಹುದು. ಇನ್ನೂ ಬೇಕಿದ್ದರೆ ಪುಟ್ಟ ಮಕ್ಕಳಿಗೆ ಒಗ್ಗಟ್ಟಿನಲ್ಲಿ ಬಲವಿದೆ ಎಂಬ ಕತೆಯನ್ನು ಪ್ರಾಕ್ಟಿಕಲ್ಲಾಗಿ ಹೇಳುವಾಗ, ಒಂದು ಕಡ್ಡಿಯನ್ನು ಸಟಕ್ಕೆಂದು ಮುರಿದು, ಒಂದೇ ಕಡ್ಡಿಯಾದರೆ ಎಷ್ಟು ಸುಲಭವಾಗಿ ಮುರಿಯುತ್ತದೆಂದು ತೋರಿಸುವುದಲ್ಲದೆ, ಎಲ್ಲವನ್ನೂ ಸೇರಿಸಿ ಮುರಿಯಲಾಗದೆ ಮಕ್ಕಳೆದುರು ಒದ್ದಾಡಿಯೂ, ನಮ್ಮ ವಾದವನ್ನು ಮನದಟ್ಟು ಮಾಡಬಹುದಾದ ಬಹೂಪಯೋಗಿ ವಸ್ತುವೇ ಪೊರಕೆ.

'ಮನೆಯೆಲ್ಲ ಓಡಾಡುತ್ತೆ, ಮೂಲೆಯಲ್ಲಿ ನಿಲ್ಲುತ್ತೆ', 'ಸಂಜೆಯೆಲ್ಲಾ ಬಡಿದಾಡಿದ್ದು, ಸಂಜೆ ಆಯಿತ್ತೆ ಮೂಲೆಗೆ ಕೂತ್ಗೊತ್ತು', 'ಅಲ್ಲಿ ಇಟ್ಟಿಲ್ಲ ಅಪ್ಪನ ಮನೆಗೆ ಕೊಟ್ಟಿಲ್ಲ, ನಮ್ಮರಿಮನೆಯಲ್ಲಿ ಇಟ್ಟಿದ್ದೇನೆ' ಎಂಬ ಒಗಟುಗಳು ಕನ್ನಡದ ವಿಭಿನ್ನ ಪ್ರದೇಶಗಳಲ್ಲಿ ಪೊರಕೆಯ ಕುರಿತ ರಚನೆಗಳು. ಹಿಂದಿನಿಂದಲೂ ಈ ಪೊರಕೆಗೂ

ಇಂದು ಪೊರಕೆ ಸ್ವಚ್ಛತೆ, ಪ್ರತಿಭಟನೆ, ಚಿಹ್ನೆ ಇತ್ಯಾದಿಗೆ ಉಪಮೆ, ರೂಪಕವಾಗಿ ಬಹೂಪಯೋಗಿಯಾಗಿ ಕಾಣಿಸಿಕೊಳ್ಳುತ್ತಿದೆ. ಎಂದಿನಂತೆ ಮತ್ತೆ ಮಾರ್ಚ್ ಬರುತ್ತದೆ; ಮತ್ತೆ ಮಹಿಳಾ ದಿನವೂ ಆಚರಣೆಯಾಗುತ್ತದೆ. ಅಂತೆಯೇ ನಮ್ಮ ಹೆಣ್ಣುಮಕ್ಕಳು ಹಲವು ಕಡ್ಡಿಗಳಾದ್ದರೂ ಏಕಾಕಾರದ್ದಾಗಿ, ಸದೃಢವಾಗಿರುವ ಪೊರಕೆಯಂತೆಯೇ ಒಂದಾಗಿ ಸಮಾನತೆಗಾಗಿ, ಹಕ್ಕುಗಳಿಗಾಗಿ, ನ್ಯಾಯಕ್ಕಾಗಿ ಹೋರಾಟದ ಹಾದಿಯಲ್ಲಿ ಹೆಜ್ಜೆಹಾಕಿ ಹೊರಟಿದ್ದಾರೆ. ಅವರಿಗೆ ಗೆಲುವಾಗಲಿ ! ಪೊರಕೆಗೆ ಜಯವಾಗಲಿ !

ಹೆಣ್ಣುಮಕ್ಕಳಿಗೂ ಬಿಡಿಸಲಾರದ ನಂಟು. ಮನೆವಾರ್ತೆಯ, ಪಾಲನೆ, ಪೋಷಣೆಯ ಕೆಲಸಗಳನ್ನೆಲ್ಲ ಅವರಿಗೆ ಗುತ್ತಿಗೆ ವಹಿಸಿಕೊಟ್ಟ ನಂತರ ಕೈಗೆ ಬಂದ ಸೊತ್ತುಗಳಲ್ಲಿ ಅದೂ ಒಂದು. ಅದಕ್ಕೆ ಅವರದೇ ಪೇಟೆಂಟ್. ಅದನ್ನು ತಯಾರಿಸಿಕೊಳ್ಳುವುದೂ ಅವರೇ, ಉಪಯೋಗಿಸಬೇಕಾದವರೂ ಅವರೇ. ಬಹುಶಃ ಮೇಲಿನ ಒಗಟುಗಳ ರಚನೆಗಾರರು ನಮ್ಮ ಜನಪದ ಹೆಣ್ಣುಮಕ್ಕಳೇ ಇರಬೇಕು.



೭೦–೮೦ರ ದಶಕದವರೆಗೂ ಕರಾವಳಿಯಲ್ಲಿ ಎಲ್ಲ ಹೆಣ್ಣುಮಕ್ಕಳು ಚಪ್ಪಲಿ ಹಾಕಿಕೊಳ್ಳುವ ರೂಢಿ ಇರಲಿಲ್ಲ. ಅದು, ಕಾಲಿನ ರಕ್ಷಣೆಗೆ ಎಂದು ಭಾವಿಸಿದ್ದಕ್ಕಿಂತಲೂ ಹೆಚ್ಚಾಗಿ ಅದನ್ನು ಆಧುನಿಕತೆಯ, ಪ್ರತಿಷ್ಠೆಯ ಸಂಕೇತವೆಂದು ತಿಳಿದಿದ್ದ ಕಾಲ. ಅನುಕೂಲವಂತ ಮನೆಯ ಹೆಣ್ಣುಮಕ್ಕಳನ್ನು ಬಿಟ್ಟರೆ, ಮಧ್ಯಮವರ್ಗದ ನಾವು ಎಲ್ಲಿಯಾದರೂ ಪ್ರಯಾಣ ಹೊರಟಾಗ ಮಾತ್ರವೇ ಚಪ್ಪಲಿ ಹಾಕಿಕೊಳ್ಳಬಹುದಿತ್ತು. ಉಳಿದಂತೆ ಅದನ್ನು ಜೋಪಾನವಾಗಿರಿಸಿ, ಇತರ ದಿನಗಳಲ್ಲಿ ಬರಿಗಾಲಲ್ಲೇ ನಡೆಯಬೇಕಿತ್ತು. ಅಪರೂಪಕ್ಕೆ ಎಲ್ಲಿಯಾದರೂ ಒಮ್ಮೊಮ್ಮೆ ಮನೆಯವರಿಗೆ ಗೊತ್ತಾಗದಂತೆ ಚಪ್ಪಲಿ ಹಾಕಿಕೊಂಡು ಶಾಲೆಗೆ ಹೋದರೆ ಉಳಿದವರೆಲ್ಲ ನಮ್ಮನ್ನು ಅಸೂಯೆಯಿಂದ ನೋಡುತ್ತಿದ್ದುದು, ಅವರ ಹೊಟ್ಟೆಉರಿಯಿಂದ ನಮಗೆ ಹಾಯ್ ಅನ್ನಿಸುತ್ತಿದ್ದುದು ಈಗ ನೆನಪು ಮಾತ್ರ. ಅಯ್ಯೋ ! ನಾನೂ ನೋಡಿ, ಹಿಡಿಸೂಡಿ ಬದಿಗಿಟ್ಟು ಚಪ್ಪಲಿ ಹಾಕಿಕೊಂಡದ್ದು. ಅದಲ್ಲೇ ಮನೆಯ ಹೊರಗೆ ಮೂಲೆಯಲ್ಲಿರಲಿ ಬಿಡಿ. ಎಲ್ಲಿ ನಿಲ್ಲಿಸಿದ್ದೆ ನಾನು ? ಹಾಂ ! ನಮಗೆ ಹೆಣ್ಣುಮಕ್ಕಳಿಗೆ ಯಾರಾದರೂ ತೊಂದರೆ ಕೊಡಲು ಬಂದದ್ದನ್ನು ಹಿರಿಯರೊಂದಿಗೆ ಹೇಳಿಕೊಂಡರೆ, 'ಅವ್‌ನಿಗೆ ಹಿಡಿಕಟ್ಟ್ ತೋರ್‍ಸ್‌ಕಿದ್ದಿತ್ತ್' ಎಂಬ ಘಟನೋತ್ತರ ಸಲಹೆಯನ್ನು ನಾನು ಹಿಂದೆಲ್ಲ ಕೇಳಿದ್ದಿದೆ. ನಂತರ ಹೆಣ್ಣುಮಕ್ಕಳು ಪೊರಕೆಯ ಜಾಗದಲ್ಲಿ ಚಪ್ಪಲಿ ತೋರಿಸುವುದು ಚಾಲ್ತಿಗೆ ಬಂತು.

ನಮ್ಮ ಪತ್ರಿಕೆಗಳಲ್ಲೋ ಮ್ಯಾಗಜೀನ್‌ಗಳಲ್ಲೋ ಬರುವ ವ್ಯಂಗ್ಯಚಿತ್ರಗಳನ್ನು ಗಮನಿಸಿದ್ದೀರಾ ? ಅಲ್ಲೆಲ್ಲ ಹೆಚ್ಚಾಗಿ ಲಟ್ಟಣಿಗೆ, ಸೌಟು ಹಿಡಿದು, ಕೆಲವೊಮ್ಮೆ ಪೊರಕೆ ಹಿಡಿದು ಗಂಡನನ್ನು ಬೆದರಿಸುವ ಘಟವಾಣಿ ಹೆಂಡತಿ; ತಲೆಯ ಮೇಲೊಂದು ಮೊಳ್ಟೆ (ಮೊಳಕೆ) ಬರಿಸಿಕೊಂಡು ಅಳುಮೋರೆಯಲ್ಲಿ ನಿಂತ ಗಂಡ–ಇಂಥವನ್ನು ನೋಡುವುದೇ ಹೆಚ್ಚು. ಕರಾವಳಿಯ ಹೆಣ್ಣುಮಕ್ಕಳ ಕೈಯಲ್ಲಿ ಈ ಲಟ್ಟಣಿಗೆ ಸರಿಹೊಂದದು. ಯಾಕೆಂದರೆ, ಇಲ್ಲಿ ಲಟ್ಟಣಿಗೆಯಿಂದ ತಯಾರಿಸುವ ಚಪಾತಿಗಿಂತ 'ಕೊಟ್ಟೆ' (ಕೊಟ್ಟಿಗೆ), ಇಡ್ಲಿ, ದೋಸೆಯಂಥ ತಿಂಡಿಗಳೇ ಹೆಚ್ಚು. ಹಲಸಿನ ಎಲೆಯಿಂದ ಕೊಟ್ಟೆ ತಯಾರಿಸುವಾಗ, ಎಲೆಗಳನ್ನು ಒಂದಕ್ಕೊಂದು ಜೋಡಿಸಲು ಬಿದಿರಿನ ಕಡ್ಡಿಗಳಿಲ್ಲದಿದ್ದರೆ, ಚುಚ್ಚುವುದಕ್ಕಾಗಿ ಪೊರಕೆಗೆ ಬಳಸುವ ಕಡ್ಡಿಗಳನ್ನು ಚೆನ್ನಾಗಿ ತೊಳೆದು ಬಳಸುವುದೂ ಇದೆ. ಹಾಗಾಗಿ ನಮ್ಮ ಕೈಯಲ್ಲಿ ಪೊರಕೆಯೇ ಹೆಚ್ಚು ಚೆನ್ನ. ಚುಚ್ಚುವುದಕ್ಕೂ ಚಚ್ಚುವುದಕ್ಕೂ ಎರಡಕ್ಕೂ ಸೈ.

ನಾವು ಚಿಕ್ಕವರಿದ್ದಾಗ, ನಮ್ಮ ಮನೆಗಳಲ್ಲಿ ಹೆಣ್ಣುಮಕ್ಕಳಿಗೆ ಮಾತ್ರ ಕಸ ಗುಡಿಸುವ ಕೆಲಸ. ಎಲ್ಲಿಯವರೆಗೆ ಎಂದರೆ ಮನೆಯ ಗಂಡಸರು, ಗಂಡುಮಕ್ಕಳು ಗುಡಿಸುವ ಮಾತಿರಲಿ, ನಾವು ಗುಡಿಸುವಾಗ ನಮ್ಮ ಕೈಯಲ್ಲಿದ್ದ ಹಿಡಿಸೂಡಿ ಅವರ್‍ಯಾರಿಗೂ ತಾಗಬಾರದು. ಮನೆಯ ಗಂಡುಮಕ್ಕಳು ಕೂಡ ನಮಗೆ ಬೈಯಿಸಬೇಕೆಂಬ ಉದ್ದೇಶದಿಂದಲೇ ಕಾಲನ್ನು ಮೇಲಿಟ್ಟುಕೊಂಡು ನಮಗೆ ಕನಿಷ್ಠ ಸಹಕರಿಸುವುದಕ್ಕೆ ಬದಲಾಗಿ, ತಮ್ಮ ಕಾಲುಗಳನ್ನು ಬಿಡುಬೀಸಾಗಿ ನೆಲದಲ್ಲಿ ಉದ್ದಕ್ಕೂ ಇಳಿಬಿಟ್ಟುಕೊಂಡು ಕೂರುತ್ತಿದ್ದರು. ನಾವು ಅವು ದೇವರ ಕಾಲುಗಳೇನೋ ಎಂಬಷ್ಟು ಭಯಭಕ್ತಿಯಿಂದ ಅವಕ್ಕೆ ತಾಕದಂತೆ ತುಂಬ ಜಾಗ್ರತೆಯಿಂದ ಗುಡಿಸಬೇಕು. ತಪ್ಪಿ (ಗುಟ್ಟು ಕೇಳಿ–ನಾವು ಬೇಕೆಂತಲೇ ತಪ್ಪುವುದು) ಎಲ್ಲಿಯಾದರೂ ತಾಗಿತೋ ಅಜ್ಜಿ, ಅಮ್ಮ, ಅತ್ತೆ ಮೊದಲಾದ ಹಿರಿಯರಿಂದ ಬೈಗುಳದ ಸುರಿಮಳೆ. ಒಟ್ಟಿನಲ್ಲಿ, 'ನಾವು ಮಾತ್ರವೇ ಗುಡಿಸಬೇಕು; ಅವರು ಮಹಾರಾಜರಂತೆ ಕುಳಿತಿರಬೇಕೆ' ಎಂಬ ಗಾಯದ ಮೇಲೆ ಬೈಗುಳದ ಬರೆ. ಇರಲಿ ಬಿಡಿ, ಅದೇನು ನಮಗೆ ಲೆಕ್ಕಕ್ಕಿಲ್ಲ.

ದುಃಖಕರ ಬೆಳವಣಿಗೆಯೆಂದರೆ, ಇತ್ತೀಚೆಗೆ ಪ್ಲಾಸ್ಟಿಕ್‌ನ ಹಾವಳಿ ನಮ್ಮ ಪರಿಸರಸ್ನೇಹಿ ಪೊರಕೆಲೋಕದ ಮೇಲೆ ದಾಳಿಯಿಟ್ಟಿದೆ. ಪ್ಲಾಸ್ಟಿಕ್‌ನ ಪೊರಕೆಗಳು ಅಂಗಡಿಗಳಲ್ಲಿ ಕಾಣಿಸುತ್ತಿವೆ. ಪೊರಕೆ ಜಗತ್ತಿನ ಅಮೋಘವಾದ ಕ್ರಾಂತಿಯೆಂಬಂತೆ ವ್ಯಾಕ್ಯೂಮ್ ಕ್ಲೀನರ್‌ನಂತಹ ವಿದ್ಯುತ್ ಚಾಲಿತ ಪೊರಕೆಯ ಆಗಮನವಾಗಿದೆ. ಮನೆ ಸ್ವಚ್ಛ ಮಾಡುವವರು ಬೆನ್ನು ಬಾಗಿಸದೆಯೇ ಧೂಳು, ಕಸ ಹೊಡೆಯಬಹುದಾದ ಯಂತ್ರ ಇದು. ನಮ್ಮ ಮನೆಗೆ ಇದನ್ನು ತರುವ ಸಾಹಸ ನಾನು ಮಾಡಿಲ್ಲ. ಇಂದಿನ ಜೀವನಶೈಲಿಯಲ್ಲಿ ಎಲ್ಲ ಕೆಲಸವನ್ನೂ ಒಂದೋ ನಿಂತು, ಒಂದೋ ಕೂತೋ ಮಾಡುವುದಾಗಿದೆ. ಬಗ್ಗಿ, ಎದ್ದು ಮಾಡುವ ಪ್ರಸಂಗವೇ ಇಲ್ಲ. ಹೀಗಾಗಿ ಸ್ವಲ್ಪ ದೀರ್ಘಾವಧಿಯ ನಂತರ ನನ್ನನ್ನು ಭೇಟಿಯಾದವರು ಗುರುತಿಸದೇ ಹೋಗಬಹುದು. ಕೊನೆಗೆ ಮನೆಯವರೂ ಗುರುತಿಸಲಾರದಂತೆ ಆಗಬಾರದಲ್ಲ, ಅದಕ್ಕಾಗಿ ನನ್ನ ಜಾಗರೂಕತೆ, ಅಷ್ಟೆ. ಜಿಮ್‌ಗೆ ಹೋಗಿ ಕಸರತ್ತು ಮಾಡಿ ತೂಕ ಇಳಿಸುವ ಅಥವಾ ಏರಿಸುವ ಪ್ರಾಯವೂ ಈಗ ನನ್ನದಲ್ಲ ; ಮೈ, ಕೈಗೆ ಹೆಚ್ಚು ಶ್ರಮ ಕೊಡದಿದ್ದರೂ, ಸಮಯ ಸಾಲದೆ ಹೋಗುವ ಮನೆಯ ಕೆಲಸಗಳಿಂದ ಯೋಗ, ವ್ಯಾಯಾಮಕ್ಕೆ ಬಿಡುವು ಸಿಗುತ್ತಿಲ್ಲ ಎನ್ನುವುದಕ್ಕಿಂತ ಉದಾಸೀನ ಬಿಡುತ್ತಿಲ್ಲ ಎಂದರೆ ಹೆಚ್ಚು ಸರಿಯೇನೋ. ಏನೇ ಆಗಲಿ, ನನ್ನಮ್ಮನ ತಲೆಮಾರಿನವರಲ್ಲಿ ಹೆಚ್ಚಿನವರು ಸದಾ ಬಗ್ಗಿ, ಎದ್ದು, ಕೂತು, ನಿಂತು ಮಾಡುತ್ತಿದ್ದ ಕೆಲಸಗಳಿಂದಾಗಿ ಅರವತ್ತು ಕಳೆದರೂ ಬಾಗಿ ಬಳುಕುವ ಬಳ್ಳಿಗಳಂತಿದ್ದರು. ಆದರೆ ನಾನೂ, ನನ್ನ ಓರಗೆಯವರೂ ಮನೆಯಲ್ಲಿ ಮಾಡುವ ಈ ಬಗೆಯ ಕೆಲಸಗಳಿಂದ, ಆಫೀಸಿನಲ್ಲಿ ಕುಳಿತೇ ಮಾಡುವ ಕೆಲಸದಿಂದ, ಟಿ.ವಿ. ಎದುರು ಕುಳಿತೇ ಹೆಚ್ಚು ಸಮಯ ಕಳೆಯುವುದರಿಂದ ಉದ್ದಿನ ಮೂಟೆಗಳಾಗಿಬಿಟ್ಟಿದ್ದೇವೆ. ನೋಡೋಣ, ಎಲ್ಲಿ ಪೊರಕೆ ತನ್ನಿ ; ಇವತ್ತಿನಿಂದಾದರೂ ಬಗ್ಗಿ, ಎದ್ದು ಗುಡಿಸುವಾ.

ಇತ್ತೀಚೆಗೆ ಬಹಳ ಕಡಿಮೆ ಸಮಯದಲ್ಲಿ ಹುಟ್ಟಿಕೊಂಡ ನಮ್ಮ ದೇಶದ ರಾಜಕೀಯ ಪಕ್ಷವೊಂದು ತನ್ನ ಚಿಹ್ನೆಯಾಗಿ ಪೊರಕೆಯನ್ನು ಆರಿಸಿದೆ. ಸಾಲದ್ದಕ್ಕೆ ಆ ಪಕ್ಷವು ಶ್ರೀಸಾಮಾನ್ಯರ (ಆಮ್ ಆದ್ಮಿಗಳ) ಬೆಂಬಲದೊಂದಿಗೆ ಗೆಲುವನ್ನೂ ಸಾಧಿಸಿ ಗದ್ದುಗೆ ಏರಿದ್ದೂ ಆಗಿದೆ. ಇದು ಇದುವರೆಗೆ ಬಹಳ ಕ್ಷುಲ್ಲಕ ವಸ್ತುವೆಂದು ಮೂಲೆಗೆ ನೂಕಿದ್ದ ಪೊರಕೆಗೆ ಸಂದ ಗೌರವವೇ ಹೌದು. ಇನ್ನು ಈ ಪೊರಕೆ ಏನೆಲ್ಲ ಮಾಡಲಿಕ್ಕಿದೆಯೋ ಏನೋ ! ಸಾರ್ವಜನಿಕವಾಗಿ ಪೊರಕೆ ಕೈಯಲ್ಲಿ ಹಿಡಿದರೆ ಅವರು ಆ ಪಕ್ಷದ ಬೆಂಬಲಿಗರೆಂದು ಬಿಂಬಿತವಾಗಲೂಬಹುದು. ಚುನಾವಣೆಯ ದಿನ ಹತ್ತಿರ ಬರುತ್ತಿದ್ದಂತೆ ಕೈಯಲ್ಲಿ ಪೊರಕೆ ಹಿಡಿಯುವಂತಿಲ್ಲವಾದೀತು; ಇಲ್ಲದಿದ್ದರೆ ಚುನಾವಣಾ ನೀತಿ ಸಂಹಿತೆಯ ಉಲ್ಲಂಘನೆಯ ಅಪರಾಧಿಗಳಾಗಬಹುದು.

ಅದೇನೇ ಇರಲಿ, ಪೊರಕೆ ಮನೆಯೊಳಗಿನಿಂದ ಹೊರಬಂದು ರಾಜಕೀಯ ಪ್ರವೇಶಿಸಿದೆ. ಹೆಣ್ಣುಮಕ್ಕಳ ಕೈಯಲ್ಲಿ ಮಾತ್ರವೇ ಕಾಣಿಸುತ್ತಿದ್ದ ಅದು, ಟೋಪಿ ತೊಟ್ಟ ಗಂಡಸರ ಕೈಯಲ್ಲೂ ರಾರಾಜಿಸುತ್ತಿದೆ. ವಿರೋಧ ಪಕ್ಷಗಳಿಗೆ ಅದು ಖಡ್ಗ ಝಳಪಿಸಿದಂತೆ ಕಾಣುತ್ತಿರಬೇಕು. ಹಿಂದೆಲ್ಲ ಮನೆಯಿಂದ ಹೆಣ್ಣುಮಕ್ಕಳು ಸಕಾರಣವಾಗಿಯೇ ಹೊರಹೋಗುತ್ತಿದ್ದಾಗಲೂ, ಅದನ್ನು ಕಂಡು ಸಿಂಡರಿಸುತ್ತಿದ್ದ ಮುಖಗಳಂತೆಯೇ ಇಂದು ಇತರ ಪಕ್ಷಗಳ ಮೂತಿಯೂ ಹುಣಸೆಹಣ್ಣು ತಿಂದಂತೆ ಹುಳ್ಳಗಾಗಿ ಪೊರಕೆಯನ್ನೇ ನೋಡುತ್ತಿವೆ. ಅದಕ್ಕೇ ಹೇಳುವುದು ಯಾವ ಕಾಲ ಹೇಗೆ ಬರುತ್ತದೋ, ಯಾರ ಕಾಲ ಹೇಗೆ ಬದಲಾಗುತ್ತದೋ, ಎಂದು. ಅದೇನೇ ಇರಲಿ, ಇಂದು ಪೊರಕೆ ಸ್ವಚ್ಛತೆ, ಪ್ರತಿಭಟನೆ, ಚಿಹ್ನೆ ಇತ್ಯಾದಿಗೆ ಉಪಮೆ, ರೂಪಕವಾಗಿ ಬಹೂಪಯೋಗಿಯಾಗಿ ಕಾಣಿಸಿಕೊಳ್ಳುತ್ತಿದೆ.

ಎಂದಿನಂತೆ ಮತ್ತೆ ಮಾರ್ಚ್ ಬರುತ್ತದೆ; ಮತ್ತೆ ಮಹಿಳಾ ದಿನವೂ ಆಚರಣೆಯಾಗುತ್ತದೆ. ಅಂತೆಯೇ ನಮ್ಮ ಹೆಣ್ಣುಮಕ್ಕಳು ಹಲವು ಕಡ್ಡಿಗಳಿದ್ದರೂ ಏಕಾಕಾರದ್ದಾಗಿ, ಸದೃಢವಾಗಿರುವ ಪೊರಕೆಯಂತೆಯೇ ಒಂದಾಗಿ ಸಮಾನತೆಗಾಗಿ, ಹಕ್ಕುಗಳಿಗಾಗಿ, ನ್ಯಾಯಕ್ಕಾಗಿ ಹೋರಾಟದ ಹಾದಿಯಲ್ಲಿ ಹೆಜ್ಜೆಹಾಕಿ ಹೊರಟಿದ್ದಾರೆ. ಅವರಿಗೆ ಗೆಲುವಾಗಲಿ ! ಪೊರಕೆಗೆ ಜಯವಾಗಲಿ !

**ಡಾ॥ ಶೈಲಾ ಯು.**
ಕನ್ನಡ ಉಪನ್ಯಾಸಕರು, ವಿಶ್ವವಿದ್ಯಾನಿಲಯ ಕಾಲೇಜು
ಹಂಪನಕಟ್ಟ, ಮಂಗಳೂರು – ೫೭೫ ೦೦೧

# ಸಾಮಾಜಿಕ ಚಳುವಳಿಗಳು, ಅವುಗಳ ಆದರ್ಶ ಹಾಗೂ ವಾಸ್ತವ



ಸಮತಾ ಸಮಾಜದ ನಿರ್ಮಾಣಕ್ಕಾಗಿ ಭಾರತದಲ್ಲಿ ಅನೇಕ ಸಾಮಾಜಿಕ ಚಳುವಳಿಗಳು ನಡೆದುಬಂದ ಇತಿಹಾಸ ಭಾರತದ ಸಾಮಾಜಿಕ ಇತಿಹಾಸದ ಜ್ಞಾನವಿರುವ ಎಲ್ಲರಿಗೂ ಗೊತ್ತಿರುವ ವಿಷಯ. ೧೨ನೇ ಶತಮಾನದಿಂದ ೨೦ನೇ ಶತಮಾನದ ಪ್ರಾರಂಭದವರೆಗೂ ಅನೇಕ ಚಳುವಳಿಗಳು ಜರುಗಿ ಸಾಮಾಜಿಕ ಚಿಂತನೆಗಳ ಮೇಲೆ ತಮ್ಮವೇ ಆದ ಗುರುತನ್ನು ಮೂಡಿಸಿವೆ. ಈ ಚಳುವಳಿಗಳು ತಮ್ಮ ಸಮಕಾಲೀನ ಸಮಾಜದ ಸಮಸ್ಯೆಗಳಿಗೆ ಸ್ಪಂದಿಸಿ ಅವುಗಳಿಗೆ ಪರಿಹಾರ ಹುಡುಕುವಲ್ಲಿ ಬಹುಮಟ್ಟಿಗೆ ಸಫಲವಾದವು.

ದೇಶ, ಸ್ವತಂತ್ರ ಹೊಂದಿ ಆರು ದಶಕಗಳು ಕಳೆದಿವೆ. ಆದರೂ ಕೆಲವೊಂದು ಮೂಲ ಸಮಸ್ಯೆಗಳ ಕುರಿತು ರಾಷ್ಟ್ರ ಇನ್ನೂ ಸಂದಿಗ್ಧ ಪರಿಸ್ಥಿತಿಯಲ್ಲಿದೆ. ಸಮಾಜದ ರಾಚನಿಕ ಸಮಸ್ಯೆಗಳನ್ನು ಎದುರಿಸಿ ಸಮಾಜದಲ್ಲಿ ಸಮಾನತೆ ತರಲೇಬೇಕೆಂದು ಕಾಣಿಸಿಕೊಂಡ ಸಾಮಾಜಿಕ ಚಳುವಳಿಗಳಾದ ವೀರಶೈವ ಚಳುವಳಿ, ಸ್ವಾಭಿಮಾನ ಅಥವಾ ಆತ್ಮಗೌರವ ಚಳುವಳಿ ಮತ್ತು ದಲಿತ–ಬಹುಜನರ ಚಳುವಳಿಗಳು ಈಗ ಮಾಡುತ್ತಿರುವದೇನು ಎಂಬುದನ್ನು ತಿಳಿಯುವದು ಬಹಳ ಮುಖ್ಯ. ಈ ಅಗತ್ಯಕ್ಕೆ ಕಳೆದ ಎರಡು ದಶಕಗಳಿಂದ ಕ್ರಮೇಣವಾಗಿ ಬಲಶಾಲಿಯಾಗುತ್ತಾ ಸಾಂಸ್ಕೃತಿಕ ರಾಷ್ಟ್ರೀಯವಾದದ ಹೆಸರಿನಲ್ಲಿ ಬಂದಿರುವ ಕೋಮುವಾದ ಮತ್ತು ಬಹುಸಂಖ್ಯಾತವಾದ ದೇಶಾದ್ಯಂತ ತುಂಬಿ ತುಳುಕುತ್ತಿರುವ ಜಾತಿವಾದ, ಮತಧರ್ಮದ ಹೆಸರಿನಲ್ಲಿ ಸಮಾಜದಲ್ಲಿ ತರ್ಕಸಮ್ಮತವಲ್ಲದ ವಿಚಾರಗಳನ್ನು ಪ್ರಚುರಪಡಿಸುತ್ತಿರುವ ಧಾರ್ಮಿಕ ಮಾಂತ್ರಿಕರ ಅಟ್ಟಹಾಸಗಳು ಮೂಲ ಕಾರಣ.

ಧಾರ್ಮಿಕ ಚಳುವಳಿಗಳಲ್ಲೊಂದಾದ ವೀರಶೈವ ಚಳುವಳಿಯು ಧಾರ್ಮಿಕ ಚಳುವಳಿಗಿಂತ ಸಾಮಾಜಿಕ ಚಳುವಳಿಯೆಂದೇ ಗುರುತಿಸಲ್ಪಟ್ಟಿದ್ದು, ಈ ಚಳುವಳಿಯ ರೂವಾರಿ ಬಸವಣ್ಣನಿಂದ ಹಿಡಿದು ಉಳಿದ ಎಲ್ಲ ಚಳುವಳಿಕಾರರು ಅನುಭಾವದ ಜೊತೆ ಸಾಮಾಜಿಕ ಬದಲಾವಣೆಯ ಕಳಕಳಿಯನ್ನು ಇಟ್ಟುಕೊಂಡವರಾಗಿದ್ದರು. ತಮ್ಮ ವಚನಗಳ ಮುಖಾಂತರ ತಮ್ಮ ಸಮಕಾಲೀನ ಸಮಾಜದ ನ್ಯೂನತೆಗಳನ್ನು ಬೆಳಕಿಗೆ ತರುವದರ ಜೊತೆಗೆ ಅನೇಕ ಕ್ರಾಂತಿಕಾರಕ ವಿಚಾರಗಳನ್ನು ಹೇಳಿದರು. ಅವರ ಸಮಾಜ ಬದಲಾವಣೆಯ ಕಳಕಳಿ ಕೇವಲ ತಮ್ಮ ಆದರ್ಶವಾದದ ಸಾಹಿತ್ಯ ರಚನೆಗೆ ಸೀಮಿತವಾಗಿರಲಿಲ್ಲ. ಎಲ್ಲ ಚಳುವಳಿಕಾರರು ಒಂದಲ್ಲ ಒಂದು ತರಹದ ಪ್ರಯೋಗಗಳನ್ನು ಸಮಾಜ ಬದಲಾವಣೆ ನಿಟ್ಟಿನಲ್ಲಿ ಮಾಡಿ ಸಮತಾ ಸಮಾಜದ ಕಲ್ಪನೆಯನ್ನು ಸಮಾಜಕ್ಕೆ ತೋರಿಸಿದರು. ಸಮಾಜದಲ್ಲಿ ಸಾಮಾಜಿಕವಾಗಿ ಮತ್ತು ಆಧ್ಯಾತ್ಮಿಕವಾಗಿ ಕೆಳಗೆ ತಳ್ಳಲ್ಪಟ್ಟ ಸಮುದಾಯಗಳಿಗೆ ವೀರಶೈವ ಚಳುವಳಿಯಿಂದ ಧಾರ್ಮಿಕ ಮುಕ್ತಿ ಸಿಕ್ಕಿತಾದರೂ ಸಾಮಾಜಿಕ, ಅಂದರೆ ಸಮಾಜದಲ್ಲಿರುವ ಜಾತಿಪದ್ಧತಿಗೆ ಸಂಬಂಧಿಸಿದ ಉಚ್ಚ–ಶ್ರೇಷ್ಠ ಎಂಬ ನಂಬಿಕೆಯಿಂದ ಮುಕ್ತಿ ಸಿಗಲಿಲ್ಲ. ಬಸವಾದಿ ಚಳುವಳಿಕಾರರ ಅನುಭಾವಿಕ ಮತ್ತು ಸಾಮಾಜಿಕ ಸಂದೇಶಗಳಿಂದ ಪ್ರೇರಿತಗೊಂಡ ಅನುಯಾಯಿಗಳು ಸ್ವತಂತ್ರವಾಗಿ ತಮ್ಮದೇ ಆದ ಧರ್ಮ ಅಥವಾ ಪಂಥ ಹೊಂದಿದ ದಿನಗಳಿಂದಲೂ ಅವರಲ್ಲಿ ಇದುವರೆಗೆ ಸಮಾಜದ ಕೆಲವೊಂದು ಮೂಲಭೂತ ಸಮಸ್ಯೆಗಳಿಗೆ ಸ್ಪಂದಿಸಲಿಕ್ಕಾಗಲಿಲ್ಲ. ಇವರು ಕೂಡಾ ತಾವೇ ಪ್ರತಿಭಟಿಸಿದ ಸಾಮಾಜಿಕ ಸಮಸ್ಯೆಗಳಿಂದ ಹೊರಬರಲಾರದೆ ಸಮಾಜಕ್ಕೆ ಒಳಿತೆನಿಸದ ಪದ್ಧತಿಗಳನ್ನು ಪರಿಪಾಲನೆ ಮಾಡುತ್ತಾ ಬಂದು ಅನೇಕಾರ್ಥದಲ್ಲಿ ತಮ್ಮ ಮೂಲ ತತ್ವದ ವಿರೋಧಿಗಳಂತೆ ವರ್ತಿಸಿ ಅದರ ತಿರುಳನ್ನು ತಿಳಿಯಲಾರದೆ ಅದರ ಮಹತ್ವವನ್ನು ತಾವೇ ಖುದ್ದಾಗಿ ಕಡಿಮೆ ಮಾಡಿದ್ದಾರೆ. ಆಧುನಿಕ ಲಿಂಗಾಯತ ಸಮಾಜದಲ್ಲಿ ಅನೇಕ ತರಹದ ಸಾಂಪ್ರದಾಯಿಕ ನಂಬಿಕೆಗಳು ಮತ್ತು ಆಚರಣೆಗಳು ಬಂದಿರುವುದರಿಂದ ಈ ಸಮಾಜವನ್ನು ಸಾಮಾಜಿಕ ಬದಲಾವಣೆಯ ಅಳತೆಗೋಲುಗಳಿಂದ ನೋಡಿದಾಗ ಅದನ್ನು ಒಂದು ವಿಶಿಷ್ಟ

**ಡಾ॥ ಪ್ರಕಾಶ ದೇಸಾಯಿ**

ಸಮುದಾಯವೆಂದು ಗುರುತಿಸಲು ಸಾಧ್ಯವಾಗದು.

೨೦ನೇ ಶತಮಾನದ ಪೆರಿಯಾರ್ ಅವರ ನೇತೃತ್ವದಲ್ಲಿ ಘಟಿಸಿದ ದಕ್ಷಿಣ ಭಾರತದ ಸ್ವಾಭಿಮಾನ ಅಥವಾ ಆತ್ಮಗೌರವ ಚಳುವಳಿಯು ಸಾಮಾಜಿಕವಾಗಿ ಮತ್ತು ರಾಜಕೀಯವಾಗಿ ವಿಶೇಷವಾದ್ದು. ಈ ಚಳುವಳಿಯು ಪೆರಿಯಾರ್ ಅವರ ನಾಸ್ತಿಕ ತರ್ಕವಾದ ದಿಂದ ಪ್ರಭಾವಕ್ಕೊಳಗೊಂಡು ಜಾತೀಯತೆಯಿಂದ ಪೀಡಿತಗೊಂಡ, ಸಾಮಾಜಿಕವಾಗಿ ಶ್ರೇಣೀಕೃತ ವಾಗಿರುವ ವ್ಯವಸ್ಥೆಯ ಸಮಾಜವನ್ನು ಮತ್ತು ಧಾರ್ಮಿಕ ವಿದ್ಯುಕ್ತ ಕ್ರಿಯೆಗಳಿಗೆ ಸಂಬಂಧಿಸಿದ ಗುಲಾಮಗಿರಿಯನ್ನು ವಿರೋಧಿಸಿತ್ತು. ಇವತ್ತಿನ ತಮಿಳು ರಾಜಕೀಯವನ್ನು ಗಮನಿಸಿದರೆ ಪೆರಿಯಾರ್ ಅವರ ವಿಚಾರಗಳಿಂದ ರಾಜಕೀಯಕ್ಕೆ ಬಂದ ಎಲ್ಲ ಪಕ್ಷಗಳು ಅವರ ಆದರ್ಶಗಳಿಗೆ ಮಹತ್ವ ಕೊಡದೆ ರಾಜಕೀಯ ಅಧಿಕಾರಕ್ಕೆ ಬೆಲೆ ಕೊಟ್ಟಿರುವದನ್ನು ಕಾಣಬಹುದು. ಪೆರಿಯಾರ್ ಅವರ ಸ್ವಾಭಿಮಾನ ಅಥವಾ ಆತ್ಮಗೌರವ ಚಳುವಳಿಯು ತಮಿಳು ಸಮಾಜದ ಬ್ರಾಹ್ಮಣೋತ್ತರ ಸಮುದಾಯಗಳಲ್ಲಿ ಬದಲಾವಣೆ ತರಲು ಬಹಳಷ್ಟು ಉತ್ತೇಜನ ಕೊಟ್ಟಿತು. ಇದರ ಉತ್ತೇಜನ ಹಾಗೂ ಸ್ಫೂರ್ತಿಯಿಂದ ಅನೇಕ ಹಿಂದುಳಿದ ಸಮುದಾಯಗಳು ಶಿಕ್ಷಣಕ್ಕೆ ಮಹತ್ವ ಕೊಟ್ಟು ಸಾಮಾಜಿಕವಾಗಿ, ಆರ್ಥಿಕವಾಗಿ ಮತ್ತು ರಾಜಕೀಯವಾಗಿ ಗಣನೀಯ ಮಟ್ಟದಲ್ಲಿ ಮುಂದುವರಿದಿದ್ದಾರೆ. ಈ ಎಲ್ಲ ಸಮುದಾಯಗಳ ಜೀವನದಲ್ಲಿ ಬಂದ ಬದಲಾವಣೆ ಕುರಿತು ಹೇಳಲೇ ಬೇಕಾದ ವಿಷಯವೇನೆಂದರೆ, ಅವುಗಳು ಎಷ್ಟರಮಟ್ಟಿಗೆ ಉಳಿದ ಸಮುದಾಯಗಳ ಜೊತೆ ಪೆರಿಯಾರ್ ಅವರ ಕ್ರಾಂತಿಕಾರಕ ವಿಚಾರಗಳಿಂದ ಸ್ಫೂರ್ತಿಗೊಂಡು ಸಮತಾ ಸಮಾಜದ ದಾರಿಯಲ್ಲಿ ನಡೆಯುತ್ತಿದ್ದಾರೆ ಎನ್ನುವದು. ಸ್ವಾಭಿಮಾನ ಚಳುವಳಿಯು ರಾಜಕೀಯವಾಗಿ ಸಫಲತೆಯನ್ನು ಕಂಡರೂ ಸಾಮಾಜಿಕವಾಗಿ ನಿರೀಕ್ಷಿಸಿದ ಮಟ್ಟದಲ್ಲಿ ಸಫಲವಾಗಲಿಲ್ಲ. ಅದರ ಆದರ್ಶ ಮತ್ತು ತತ್ವಗಳು ಸಮಾಜದ ಮೇಲೆ ಉಗ್ರವಾದ ಪರಿಣಾಮ ಬೀರಲಿಲ್ಲ. ಇವತ್ತಿನ ತಮಿಳು ಸಮಾಜವನ್ನು ಭಾರತದ ಉಳಿದ ಸಮಾಜಗಳ ಜೊತೆ ಹೋಲಿಸಿ ನೋಡಿದಾಗ ಅದರಲ್ಲಿ ಅತಿ ವಿಶಿಷ್ಟವಾದ ಬದಲಾವಣೆಗಳು ಕಂಡುಬರುವುದಿಲ್ಲ. ಈ ಸಮಾಜದಲ್ಲಿಯೂ ಕೂಡ ಜಾತಿಗೆ ಸಂಬಂಧಿಸಿದ ಹಿಂಸಾತ್ಮಕ ಕೃತ್ಯಗಳನ್ನು ಕಾಣಬಹುದು, ಸಮತಾ ಸಮಾಜದ ಹತ್ತಿರವಿರದ ಅನೇಕ ನಂಬಿಕೆಗಳನ್ನು ಕಾಣಬಹುದು. ಮತ್ತು ಮದುವೆ ಸಂಬಂಧದ ವಿಷಯವನ್ನು ನೋಡಿದಾಗ ಅದು ಪೆರಿಯಾರ್ ಅವರ ವಿಚಾರದಿಂದ ಬಹುಮಟ್ಟಿಗೆ ದೂರವೇ ಉಳಿದಿದೆ.

ವೀರಶೈವ ಚಳುವಳಿಯ ಮತ್ತು ಸ್ವಾಭಿಮಾನ ಅಥವಾ ಆತ್ಮಗೌರವ ಚಳುವಳಿಯ ಆದರ್ಶಗಳು ಅವುಗಳ ಪರಿಪಾಲಕರೆಂದು ಕರೆದುಕೊಳ್ಳುವ ಸಮುದಾಯ ಹಾಗೂ ಸಮಾಜಗಳಿಂದ ದೂರವಾಗು ತ್ತಿದ್ದರೆ, ಇಂದಿಗೂ ಈ ಚಳುವಳಿಗಳ ಆದರ್ಶಗಳನ್ನು ಜೀವಂತವಾಗಿಟ್ಟಿರುವ ಮತ್ತು ಅವುಗಳನ್ನು ಇನ್ನು ಹೆಚ್ಚಿನ ಮಟ್ಟಿಗೆ ಪ್ರಚುರಪಡಿಸುವ ಒಲವು ತೋರಿಸಿರುವ ಸಮುದಾಯಗಳೆಂದರೆ ದಲಿತ ಮತ್ತು ಬಹುಜನ ಸಮುದಾಯಗಳು. ದಲಿತ ಮತ್ತು ಬಹುಜನ ಸಮಾಜಗಳ ಸಾಮಾಜಿಕ ಚಳುವಳಿಗಳು ಆಧುನಿಕ ಭಾರತದಲ್ಲಿ ಮಹಾರಾಷ್ಟ್ರದಿಂದ ಅತಿ ಹೆಚ್ಚು ಪರಿಣಾಮಕಾರಿಯಾಗಿ ಪ್ರಾರಂಭಗೊಂಡರೂ ಅವುಗಳ ಧ್ವನಿ ಮತ್ತು ಪ್ರತಿಭಟನೆ ದೇಶದ ಬೇರೆ ಬೇರೆ ಭಾಗಗಳಲ್ಲಿ ಕೂಡ ನಡೆದವು. ಮಹಾರಾಷ್ಟ್ರದಲ್ಲಿ ದಲಿತ–ಬಹುಜನರ ಚಳುವಳಿ ಜ್ಯೋತಿ ಬಾ ಫುಲೆ ಅವರ ಸತ್ಯಶೋಧಕ ಸಮಾಜದ ಮುಖಾಂತರ ನಡೆದರೆ ದೇಶದ ವಿವಿಧ ಭಾಗಗಳಾದ ಪಂಜಾಬ, ಕೇರಳ, ಆಂಧ್ರಪ್ರದೇಶ ಮತ್ತು ತಮಿಳುನಾಡಿನಲ್ಲಿ ಮಂಗೂರಾಮ, ನಾರಾಯಣ ಗುರು, ಅಯ್ಯಂಕಲಿ, ಪೊಟ್ಟಲೂರಿ ವೀರಬ್ರಹ್ಮನ್ ಮತ್ತು ಈಯೋತಿ ದಾಸ್ ಅವರಂತಹ ಕ್ರಾಂತಿಕಾರಿಗಳಿಂದ ನಡೆಯಿತು. ದಲಿತ–ಬಹುಜನ ಸಮಾಜದ ಚಳುವಳಿಗಳು ದೇಶದ ವಿವಿಧ ಪ್ರಾಂತ್ಯಗಳಲ್ಲಿ ಸಾಮಾಜಿಕ ಸ್ವಾತಂತ್ರ್ಯಕ್ಕಾಗಿ ನಡೆಸಿದ ಹೋರಾಟಗಳನ್ನು ಖ್ಯಾತ ಸಮಾಜ ವಿಜ್ಞಾನಿ ಜಿ. ಅಲೋಸಿಯಸ್ ತಮ್ಮ ಕೃತಿ 'ಭಾರತದಲ್ಲಿ ರಾಷ್ಟ್ರವಿಲ್ಲದ ರಾಷ್ಟ್ರೀಯವಾದ' ಎಂಬ ಪುಸ್ತಕದಲ್ಲಿ ಸವಿಸ್ತಾರವಾಗಿ ವಿವರಿಸಿದ್ದಾರೆ.

ದಲಿತ–ಬಹುಜನ ಚಳುವಳಿಯು ೧೯ನೇ ಶತಮಾನದ ಮಧ್ಯಭಾಗದಿಂದ ಪ್ರಾರಂಭವಾಗಿ ಮುಂದೆ ಅಂಬೇಡ್ಕರ್ ಅವರಂತಹ ತಾತ್ವಿಕ ಮತ್ತು ಬೌದ್ಧಿಕ ಹೋರಾಟಗಾರರ ನೇತೃತ್ವದಲ್ಲಿ ಮುಂದುವರಿದು ದೇಶ ಸ್ವತಂತ್ರ ಹೊಂದಿದಾಗ ದಲಿತ–ಬಹುಜನ, ಆದಿವಾಸಿ ಹಾಗೂ ಇತರ ಹಿಂದುಳಿದ ವರ್ಗಕ್ಕೆ ಸುಮಾರು ಶತಮಾನಗಳಿಂದ ವಂಚಿತವಾದ ಸ್ಥಾನಮಾನ ಗಳನ್ನು ದೊರಕಿಸುವಲ್ಲಿ ದೊಡ್ಡ ಪಾತ್ರವನ್ನು ವಹಿಸಿತು. ಸಂವಿಧಾನ ರಚನಾ ಸಮಿತಿಯಲ್ಲಿ ಅಂಬೇಡ್ಕರ್ ಅವರು ದಲಿತರ ಹಕ್ಕುಗಳಿಗಾಗಿ ವಾದ ಮಾಡಿರುವ ಇತಿಹಾಸ ಎಲ್ಲರಿಗೂ ಗೊತ್ತಿರುವ ವಿಷಯ. ಅವರ ಪ್ರಯತ್ನದ ಫಲವಾಗಿ ಸಂವಿಧಾನದಲ್ಲಿ ಈ ಜನತೆಯ ಸಾಮಾಜಿಕ ಮತ್ತು ರಾಜಕೀಯ ಹಕ್ಕುಗಳನ್ನು ರಕ್ಷಿಸಲು ಅನೇಕ ಕಲಮುಗಳನ್ನು ಸೇರಿಸಬೇಕಾಯಿತು. ಸಾಂವಿಧಾನಿಕವಾಗಿ ದೊರೆತ ಹಕ್ಕುಗಳನ್ನು ಅನುಭವಿಸಲು ಮತ್ತು ಅವುಗಳನ್ನು ನೈಜ ಅರ್ಥದಲ್ಲಿ ಪಡೆಯಲು ಸ್ವತಂತ್ರ ಭಾರತದಲ್ಲಿ ದಲಿತ–ಬಹುಜನ ಮತ್ತು ಆದಿವಾಸಿ ಸಮುದಾಯಗಳು ಒಂದರ್ಥದಲ್ಲಿ ಎರಡನೇ ಸ್ವಾತಂತ್ರ್ಯ ಸಂಗ್ರಾಮವನ್ನು ಮಾಡುವಂತಹ ಪರಿಸ್ಥಿತಿ ಬಂದಿತು ಮತ್ತು ಈ ಸಂಗ್ರಾಮದ ಅವಶ್ಯಕತೆ ಈಗಲೂ ಪ್ರಸ್ತುತ. ಭಾರತದ ಸ್ವಾತಂತ್ರ್ಯ ರಾಜಕೀಯ ಸ್ವಾತಂತ್ರ್ಯವೇ ಹೊರತು ಸಾಮಾಜಿಕ ಸ್ವಾತಂತ್ರ್ಯ ವಲ್ಲವೆಂದು ಅಂಬೇಡ್ಕರ್ ಅರಿತಿರುವ ಅನುಭವಗಳನ್ನು ದಲಿತ ಸಮುದಾಯವು ತಿಳಿದುಕೊಂಡು ಆ ಅನುಭವ ಗಳನ್ನು ಅಂಬೇಡ್ಕರ್ ಅವರು ಕೊಟ್ಟ ಎಚ್ಚರಿಕೆಯ ಮಾತುಗಳೆಂದು ತಿಳಿದು ದೇಶ ಸ್ವತಂತ್ರ ಹೊಂದಿದ ಮೊದಲ ದಿನಗಳಿಂದಲೂ ದಲಿತ ಸಮುದಾಯದ ಪ್ರಜ್ಞಾವಂತ ಧುರೀಣರು, ಸಾಹಿತಿಗಳು, ಸಾಮಾಜಿಕ ಕಾರ್ಯಕರ್ತರು ದೇಶದಲ್ಲಿ ತಮ್ಮ ಹಕ್ಕುಗಳ ಕುರಿತು ಚಳುವಳಿಗಳನ್ನು ಮುಂದುವರಿಸಿಕೊಂಡು ಬಂದಿದ್ದಾರೆ.

ಸ್ವತಂತ್ರ ಭಾರತದಲ್ಲಿ ದಲಿತ–ಬಹುಜನ ಸಮುದಾಯದಿಂದ ನಡೆದ ಚಳುವಳಿಗಳಲ್ಲಿ ಕೆಲವೊಂದು ಸಂಘಟನೆಗಳಾದ ಮಹಾರಾಷ್ಟ್ರದ ದಲಿತ ಪ್ಯಾಂಥರ್, ಕರ್ನಾಟಕದ ದಲಿತ ಸಂಘರ್ಷ ಸಮಿತಿ, ಅಖಿಲ ಭಾರತ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಬಹುಜನ ಮತ್ತು ಅಲ್ಪಸಂಖ್ಯಾತರ ಒಕ್ಕೂಟ ಬಹು ಮುಖ್ಯವಾದ ಪಾತ್ರವನ್ನು ವಹಿಸಿವೆ. ಈ ಸಂಘಟನೆಗಳ ಮುಖಾಂತರ ದಲಿತ–ಬಹುಜನರ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಸಮಾನ ಹಕ್ಕು ಮತ್ತು ಅಧಿಕಾರಕ್ಕಾಗಿ ಹೋರಾಡಿದ ಧುರೀಣರಲ್ಲಿ ಅನೇಕರಿದ್ದಾರೆ. ಇವರ ಹೋರಾಟ ಶ್ಲಾಘನೀಯ. ದಲಿತ–ಬಹುಜನರ ಸಮಾನತೆಗಾಗಿ ಚಳುವಳಿಗಳ ಜೊತೆಗೆ ರಾಜಕೀಯ ಅಧಿಕಾರದ ಅವಶ್ಯಕತೆ ಕೂಡ ಇದೆ ಎಂಬುದನ್ನು ತಿಳಿದು ದಲಿತ–ಬಹುಜನ ಧುರೀಣರು ರಾಜಕೀಯ ಪಕ್ಷಗಳನ್ನು ಸಂಘಟಿಸಿ ದೇಶದ ಚುನಾವಣಾ ಪ್ರಕ್ರಿಯೆಯಲ್ಲಿಯೂ ಭಾಗವಹಿಸಿ ಗಣನೀಯವಾಗಿ ದಲಿತ–ಬಹುಜನರ ಜೀವನದಲ್ಲಿ ಬದಲಾವಣೆ ಉಂಟಾಗುವ ದಿಶೆಯಲ್ಲಿ ತಮ್ಮ ಕೊಡುಗೆ ನೀಡಿದ್ದಾರೆ. ಇಲ್ಲಿ ಪ್ರಕಾಶ ಅಂಬೇಡ್ಕರ್, ರಾಮದಾಸ ಅಠಾವಳೆ, ಕಾನ್ಶಿರಾಮ, ಮಾಯಾವತಿಯವರು ತಮ್ಮ ಪಕ್ಷಗಳಾದ ರಿಪಬ್ಲಿಕನ್ ಪಾರ್ಟಿ, ಬಹುಜನ ಸಮಾಜ ಪಕ್ಷಗಳ ಮುಖಾಂತರ ರಾಜಕೀಯ ರಂಗದಲ್ಲಿ ಧುಮುಕಿ ದಲಿತ–ಬಹುಜನ ಸಮಾಜಕ್ಕೆ ಸ್ಥೈರ್ಯವನ್ನು ತಂದಿದ್ದಾರೆ.

ಈ ಮೇಲೆ ವಿವರಿಸಿದ ಚಳುವಳಿಗಳಿಂದ ಪ್ರಭಾವಿತಗೊಂಡ ಅಥವಾ ವಾರಸುದಾರರೆಂದೆನಿಸಿ ಕೊಂಡ ಸಮುದಾಯಗಳು, ಧುರೀಣರು ವಾಸ್ತವದಲ್ಲಿ ಚಳುವಳಿಗಳ ಆದರ್ಶಗಳನ್ನು ಅರ್ಥೈಸಿಕೊಂಡು ಯಾವ ದಿಶೆಯಲ್ಲಿದ್ದಾರೆಂಬುದನ್ನು ತಿಳಿಯಬೇಕಾಗಿದೆ. ಭಾರತದ ಇವತ್ತಿನ ರಾಜಕೀಯ ಪಕ್ಷಗಳು ಮತ್ತು ಅವುಗಳಿಗೆ ದೊರಕುತ್ತಿರುವ ವಿವಿಧ ಸಮುದಾಯಗಳ ಬೆಂಬಲದ ಬಗ್ಗೆ ಗಮನ ಹರಿಸಿದಾಗ ಬಹುತೇಕವಾಗಿ ತಿಳಿದು ಬರುವ ವಿಷಯವೇನೆಂದರೆ, ಯಾವ ಸಮುದಾಯಗಳು ಸಾಂಪ್ರದಾಯಿಕ ವ್ಯವಸ್ಥೆಯನ್ನು ವಿರೋಧಿಸಿದ್ದವೋ ಅದೇ ಸಮುದಾಯಗಳು ಇತ್ತೀಚಿಗೆ ಸಂಪ್ರದಾಯ ಮತ್ತು ಅಸಮಾನ ಸಾಮಾಜಿಕ ವ್ಯವಸ್ಥೆಯನ್ನು ಬೆಂಬಲಿಸುವ ಸಾಂಸ್ಕೃತಿಕ ರಾಷ್ಟ್ರವಾದಿ ಪಕ್ಷ ಮತ್ತು ಅದರ ಸಿದ್ಧಾಂತಗಳಿಗೆ ಬೆಂಬಲ ನೀಡುತ್ತಿವೆ. ಇಂತಹ ಸಮುದಾಯಗಳಲ್ಲಿ ವೀರಶೈವ ಚಳುವಳಿಯ ವಾರಸುದಾರರೆಂದೆನಿಸಿದ ಬಹುತೇಕ ಲಿಂಗಾಯತರೂ ಇದ್ದಾರೆ. ಕಳೆದ ಸುಮಾರು ಎರಡು ದಶಕಗಳ ಕರ್ನಾಟಕದ ರಾಜಕೀಯವನ್ನು ಗಮನಿಸಿದರೆ ಈ ವಿಷಯ ಸ್ಪಷ್ಟವಾಗುತ್ತದೆ. ಈ ಸಮುದಾಯದ ಬಹುತೇಕ ಅನುಯಾಯಿಗಳು ಹಾಗೂ ಹಲವಾರು ಮಠಮಾನ್ಯರು ಬಸವಾದಿ ಶರಣರ ಆದರ್ಶಗಳನ್ನು ಬದಿಗಿಟ್ಟು ಕರ್ನಾಟಕ ರಾಜಕೀಯದಲ್ಲಿ ಭಾರತೀಯ ಜನತಾ ಪಕ್ಷದ ನೆಲೆ ಭದ್ರವಾಗಲು ಪರೋಕ್ಷವಾಗಿ ಹಾಗೂ ಅಪರೋಕ್ಷವಾಗಿ ತಮ್ಮದೇ ಆದ ಕೊಡುಗೆ ನೀಡಿದ್ದಾರೆ. ಗುರ್ತಿಸಲ್ಪಡುವ ಸಂಖ್ಯೆಯಲ್ಲಿ ಭಾರತೀಯ ಜನತಾ ಪಕ್ಷದಿಂದ ಈ ಸಮುದಾಯದ ಧುರೀಣರು ಅಭ್ಯರ್ಥಿಗಳಾಗಿ ರಾಜ್ಯದ ಇತ್ತೀಚಿನ

ಲೋಕಸಭೆ ಮತ್ತು ವಿಧಾನಸಭೆ ಚುನಾವಣೆಗಳಲ್ಲಿ ಸ್ಪರ್ಧಿಸಿ ಆಯ್ಕೆಯಾಗಿದ್ದಾರೆ. ರಾಜ್ಯದ ರಾಜಕೀಯ ಸಾಮಾನ್ಯ ಪರಿಭಾಷೆಯಲ್ಲಿ ಭಾರತೀಯ ಜನತಾ ಪಕ್ಷವು ಲಿಂಗಾಯತರ ಪಕ್ಷವಾಗಿದೆ.

ಭಾರತೀಯ ಜನತಾ ಪಕ್ಷವು ಕೇಂದ್ರದಲ್ಲಿ ಸರ್ಕಾರ ರಚಿಸಿದಾಗ ಆ ಸರ್ಕಾರದಲ್ಲಿ ಪೆರಿಯಾರರ ಚಳುವಳಿಯ ಹಿನ್ನೆಲೆಯಿಂದ ಬಂದ ದ್ರಾವಿಡ ಪಕ್ಷಗಳು ಭಾಗಿಯಾಗಿರುವದನ್ನು ಯೋಚಿಸಿದರೆ ಈ ಪಕ್ಷಗಳಿಗೆ ಆದರ್ಶಕ್ಕಿಂತ ಅಧಿಕಾರವೇ ಮುಖ್ಯವಾಗಿತ್ತು ಎಂದೆನಿಸುತ್ತದೆ. ಅಧಿಕಾರದ ವಿಷಯದಲ್ಲಿ ಈ ರೀತಿ ರಾಜಿಯಾಗುವದರಿಂದ ಆದರ್ಶಗಳ ಬಗ್ಗೆ ಮಾತನಾಡುವಾಗ ಈ ಪಕ್ಷಗಳಿಗೆ ನೈತಿಕ ಸ್ಥೈರ್ಯ ಇರುವದಿಲ್ಲ. ಈಗಾಗಲೇ ರಾಜಕೀಯ ಬೆಂಬಲಕ್ಕಾಗಿ ತಮ್ಮ ಸಾಮಾಜಿಕ ಚಳುವಳಿಯ ಆದರ್ಶಗಳನ್ನು ಬದಿಗಿಟ್ಟು ಜನರನ್ನು ಖುಷಿಪಡಿಸಲು ಗುಡಿಗುಂಡಾರ ಗಳಿಗೆ ಭೇಟಿ ನೀಡುವುದು, ವಿಜೃಂಭಿತ ಮದುವೆ ಸಮಾರಂಭಗಳಲ್ಲಿ ಉಪಸ್ಥಿತರಾಗಿರುವದು, ಇವು ದ್ರಾವಿಡ ಪಕ್ಷಗಳಿಂದ ಸುಮಾರು ದಿನಗಳಿಂದ ನಡೆದು ಬರುತ್ತಿರುವ ಚಟುವಟಿಕೆಗಳಾಗಿವೆ. ಮುಂದೊಂದು ದಿನ ಭಾರತೀಯ ಜನತಾ ಪಕ್ಷವೇನಾದರೂ ತಮಿಳುನಾಡಿನ ರಾಜಕೀಯದಲ್ಲಿ ತನ್ನ ಸ್ಥಾನವನ್ನು ಗಿಟ್ಟಿಸಿಕೊಂಡರೆ ಈ ಪಕ್ಷ ಮತ್ತು ದ್ರಾವಿಡ ಪಕ್ಷಗಳ ನಡುವೆ ರಾಜಕೀಯ ಬೆಂಬಲಕ್ಕೋಸ್ಕರ ಒಂದು ತರಹದ ಸಾಂಪ್ರದಾಯಿಕ ರಾಜಕೀಯ ತಿಕ್ಕಾಟ ನಡೆಯುವದರಲ್ಲಿ ಸಂದೇಹವಿಲ್ಲ.

ದಲಿತ–ಬಹುಜನ ಚಳುವಳಿಗಳಲ್ಲಿ ಕಳೆದ ಎರಡು ದಶಕಗಳಲ್ಲಿ ನಡೆದ ಬೆಳವಣಿಗೆಗಳನ್ನು ಅವಲೋಕಿಸಿದಾಗ ಅವುಗಳಲ್ಲಿ ಕೆಲಮಟ್ಟಿನ ವಿಪರ್ಯಾಸಗಳನ್ನು ನೋಡಬಹುದು. ಈ ಚಳುವಳಿಗಳಲ್ಲಿನ ಇತ್ತೀಚಿನ ವಿದ್ಯಮಾನಗಳನ್ನು ನೋಡಿದಾಗ ಅಂಬೇಡ್ಕರ್ ಅವರು ಪ್ರತಿಪಾದಿಸುತ್ತಿದ್ದ ಶಿಕ್ಷಣ, ಸಂಘರ್ಷ ಮತ್ತು ಸಂಘಟನೆ ಕುರಿತ ನೈಜ ಅರ್ಥವನ್ನು ತಿಳಿದುಕೊಳ್ಳಲು ಪ್ರಯತ್ನ ಆಗುತ್ತಿಲ್ಲ ಎಂದೆನಿಸುತ್ತದೆ. ದಲಿತ–ಬಹುಜನ ಚಳುವಳಿಯ ಹಿನ್ನೆಲೆಯಿಂದ ಬಂದ ಬಹಳಷ್ಟು ಧುರೀಣರು ಅಧಿಕಾರಕ್ಕೋಸ್ಕರ ಕೋಮುವಾದಿ ಮತ್ತು ಜಾತಿವಾದಿ ಪಕ್ಷಗಳ ಕಡೆ ವಾಲಲಿಲ್ಲ. ಹೇಗಿದ್ದರೂ, ಈ ಚಳುವಳಿಗಳಿಂದ ಬಂದ ಕೆಲವು ನಾಯಕರು ಕೋಮುವಾದಿ ಪಕ್ಷಗಳಿಗೆ ಬೆಂಬಲ ವ್ಯಕ್ತಪಡಿಸಿದ್ದರಲ್ಲದೆ ಅವುಗಳ ನೇತೃತ್ವದ ರಾಜಕೀಯ ಪ್ರಕ್ರಿಯೆಯಲ್ಲಿ ಭಾಗವಹಿಸಿದ್ದಾರೆ. ಫುಲೆ ಮತ್ತು ಅಂಬೇಡ್ಕರರ ದಲಿತ–ಬಹುಜನ ಚಳುವಳಿ ಹಾಗೂ ಸಿದ್ಧಾಂತದ ಸ್ಫೂರ್ತಿಯಿಂದ ರಾಜಕೀಯಕ್ಕೆ ಬಂದ ಬಹುಜನ ಸಮಾಜ ಪಕ್ಷ ಉತ್ತರಪ್ರದೇಶ ರಾಜ್ಯದಲ್ಲಿ ಅಧಿಕಾರಕ್ಕೆ ಬರಲು ಭಾರತೀಯ ಜನತಾ ಪಕ್ಷವು ಕೂಡ ಪಾತ್ರವಹಿಸಿತ್ತು ಎಂಬುದನ್ನು ಈ ಪಕ್ಷದ ನಾಯಕರು ನೆನಪಿನಲ್ಲಿಡಬೇಕು. ಇಂತಹ ಮೈತ್ರಿಗಳು ಮುಂದೊಂದು ದಿನ ತಮ್ಮ ರಾಷ್ಟ್ರದ ಅಸ್ತಿತ್ವಕ್ಕೇ ಅಪಾಯಕಾರಿಯಾಗ ಬಲ್ಲವು ಎಂಬುದನ್ನು ಈ ಪಕ್ಷ ಚಿಂತಿಸಲಿಲ್ಲ. ಮುಂದೆ, ರಾಜಕೀಯ ಬೆಂಬಲದ ವ್ಯಾಪ್ತಿಯನ್ನು ಹೆಚ್ಚಿಸಲು 'ಬಹುಜನ ಸಮಾಜ ಪಕ್ಷವು ತನ್ನ ಮೂಲ ಘೋಷಣೆಯಾದ ಬಹುಜನ ಹಿತಾಯ–ಬಹುಜನ ಸುಖಾಯ'ವನ್ನು 'ಸರ್ವಜನ ಹಿತಾಯ ಸರ್ವಜನ ಸುಖಾಯ' ಎಂದು ಬದಲಿಸಿರುವ ಘಟನೆಗಳನ್ನು ನೋಡಲಾಗಿದೆ. ಇಂತಹ ಬದಲಾವಣೆಯಲ್ಲಿ ಯಾವುದೇ ನಕಾರಾತ್ಮಕ ಉದ್ದೇಶವಿರದಿದ್ದರೂ ಅವುಗಳಿಂದ ಭಾವನಾತ್ಮಕವಾಗಿ ಮೂಲದಿಂದ ಪಕ್ಷವನ್ನು ಶ್ರದ್ಧೆಯಿಂದ ಬೆಂಬಲಿಸುತ್ತಿರುವ ದಲಿತ–ಬಹುಜನರಿಗೆ ಸಂಶಯ ಮೂಡುವ ಸಾಧ್ಯತೆಗಳಿವೆ. ೨೦೧೪ರ ಲೋಕಸಭೆ ಚುನಾವಣೆಯಲ್ಲಿ ಬಹುಜನ ಸಮಾಜ ಪಕ್ಷ ಉತ್ತರಪ್ರದೇಶದಲ್ಲಿ ತನ್ನ ಮೊದಲಿನ ಸಾಮರ್ಥ್ಯವನ್ನು ಉಳಿಸಿಕೊಳ್ಳಲಿಕ್ಕಾಗಲಿಲ್ಲ. ಸಾಮಾಜಿಕ ಚಳುವಳಿಗಳ ಹಿನ್ನೆಲೆಯಿಂದ ಬಂದ ಬಹುಜನ ಪಕ್ಷವು ಈ ಸ್ಥಿತಿಗೆ ಬರಬೇಕಾದರೆ ಅದರ ಆದರ್ಶಗಳಲ್ಲಿ ಬಂದ ದ್ವಂದ್ವಗಳು ಕೂಡ ಬಹುಮಟ್ಟಿಗೆ ಕಾರಣ.



ವೀರಶೈವ ಮತ್ತು ಸ್ವಾಭಿಮಾನ ಅಥವಾ ಆತ್ಮಗೌರವ ಚಳುವಳಿಗಳ ಆದರ್ಶ ಸಮತಾ ಸಮಾಜದ ನಿರ್ಮಾಣವಾಗಿತ್ತಾದರೂ ಅವುಗಳಲ್ಲಿ ಪ್ರಾರಂಭದಲ್ಲಿದ್ದ ಉತ್ಸಾಹ ಸಮಯ ಗತಿಸಿದಂತೆ ಏಕೆ ಕ್ಷೀಣಿಸಿತು ಎಂಬುದನ್ನು ತಿಳಿದುಕೊಳ್ಳಬೇಕಾದದ್ದು ಈ ಚಳುವಳಿಗಳ ಪರಂಪರೆಯ ವಾರಸುದಾರರು ಅಥವಾ ಪ್ರತಿಪಾಲಕರೆಂದು ಕರೆದುಕೊಳ್ಳುವ ಎಲ್ಲರೂ ಆತ್ಮಾವಲೋಕನ ಮಾಡಿಕೊಳ್ಳುವಂತಹ ಸಮಯ ಈಗ ಬಂದಿದೆ. ದಲಿತ–ಬಹುಜನ ಚಳುವಳಿಗಳ ಬಗ್ಗೆ ಹೇಳಲೇಬೇಕಾದ ಮುಖ್ಯ ವಿಷಯವೇನೆಂದರೆ, ಆದರ್ಶದ ಕುರಿತು ಇರುವ ಒಗ್ಗಟ್ಟಿನ ಕೊರತೆ ಮತ್ತು ಅದರ ಬಗೆಗಿರುವ ಅಸಮ್ಮತಿ. ಸಾಮಾಜಿಕ ನ್ಯಾಯಕ್ಕಾಗಿ ರಾಜಕೀಯ ಅಧಿಕಾರದ ಅವಶ್ಯ ವಿದ್ದರೂ ಕೂಡ ಅಧಿಕಾರದ ಆಶಯ ಸಾಮಾಜಿಕ ನೆಲೆಯನ್ನು ಮರೆತು ಕೇವಲ ಅಧಿಕಾರದ ಕಡೆಗೆ ವಾಲಿರಕೂಡದು. ಹೀಗಾದಾಗ ಯಾವ ಮೂಲ ಉದ್ದೇಶಕ್ಕಾಗಿ ಚಳುವಳಿಗಳು ಜನ್ಮ ತಾಳಿರುತ್ತವೆಯೋ ಆ ಮೂಲ ಉದ್ದೇಶಗಳು ಬದಿಗುಳಿಯುತ್ತವೆ.

ದೇಶದಲ್ಲಿ ಹೆಚ್ಚುತ್ತಿರುವ ಸಾಂಸ್ಕೃತಿಕ ಬಹುಸಂಖ್ಯಾತವಾದದ ಬಗ್ಗೆ ಮತ್ತು ಹೆಚ್ಚುತ್ತಿರುವ ಬಗ್ಗೆ ಮತ್ತು ಅದರ ವ್ಯಾಪ್ತಿಗೆ ಅನೇಕ ತರಹದ ಕಾರಣ ಗಳನ್ನು ತೋರಿಸಿ ಬಹಳಷ್ಟು ವಿಶ್ಲೇಷಿಸಲಾಗಿದೆ. ಈ ವಿಶ್ಲೇಷಣೆಗಳಲ್ಲಿ ಅಲ್ಪಸಂಖ್ಯಾತರ ಸಂತೈಸುವಿಕೆ, ಮತಾಂತರ, ಭ್ರಷ್ಟಾಚಾರಗಳನ್ನು ಬಹುಸಂಖ್ಯಾತವಾದದ ಮುನ್ನಡೆಗೆ ಕಾರಣಗಳು ಎಂದು ತೋರಿಸಲಾಗಿದೆ. ಈ ಎಲ್ಲ ತಿಳಿಸಿರುವ ಕಾರಣಗಳ ಬಗ್ಗೆ ಯಾವುದೇ ಪ್ರಶ್ನೆಗಳಿರುವದಿಲ್ಲ, ಆದರೆ, ಈ ವಿಶ್ಲೇಷಣೆಗಳಲ್ಲಿ ತಾವು ಪ್ರಗತಿಪರರು ಎಂದು ಹೇಳಿಕೊಳ್ಳುತ್ತಾ ಬಂದ ಸಾಮಾಜಿಕ ಚಳುವಳಿಗಳ ನೆಲೆಯ ಪಕ್ಷಗಳು ಮತ್ತು ಸಮುದಾಯಗಳೂ ಕೂಡ ಯಾವ ರೀತಿ ಕಾರಣ ವಾಗಿದ್ದಾರೆಂಬುದು ಅಷ್ಟಾಗಿ ಕಂಡುಬರುವದಿಲ್ಲ. ಸಮತಾವಾದದ ಚಳುವಳಿಗಳ ನೆಲೆಯಿಂದ ಬಂದ ಸಮುದಾಯಗಳು ಮತ್ತು ಪಕ್ಷಗಳಲ್ಲಿ ಒಗ್ಗಟ್ಟಿದ್ದರೆ ಕೋಮುವಾದ ಮತ್ತು ಬಹುಸಂಖ್ಯಾತವಾದದ ಶಕ್ತಿಗಳು ಬೆಳೆಯುವದನ್ನು ತಡೆಯಬಹುದಾಗಿತ್ತು. ಇವುಗಳಲ್ಲಿರಬೇಕಾದ ಒಗ್ಗಟ್ಟು ಮತ್ತು ಚಳುವಳಿಗಳ ಆದರ್ಶಗಳ ಪ್ರಜ್ಞೆ ಇರಲಾರದ ಕಾರಣ ಸಾಂಸ್ಕೃತಿಕ ರಾಷ್ಟ್ರವಾದಿ ಶಕ್ತಿಗಳು ಹೆಚ್ಚಿನ ವಿರೋಧವನ್ನು ಎದುರಿಸದೆ ಈ ಸಮುದಾಯಗಳಲ್ಲಿ ತಮ್ಮ ನೆಲೆಯನ್ನು ಭದ್ರಪಡಿಸಿಕೊಳ್ಳುತ್ತಿವೆ. ದೇಶದ ಸಮಗ್ರ ಸಮಾಜಕ್ಕಾಗಿ ಹಾಗೂ ದೇಶದ ಆರೋಗ್ಯಯುತ ಪ್ರಜಾಪ್ರಭುತ್ವಕ್ಕಾಗಿ ಪ್ರಗತಿಪರ ಸಾಮಾಜಿಕ ಚಳುವಳಿಗಳಿಂದ ಬಂದ ಧುರೀಣರು, ಪಕ್ಷಗಳು ಒಗ್ಗಟ್ಟಾಗಿ ವಿವೇಚನೆಯಿಂದ ತಮ್ಮ ಶಕ್ತಿಯನ್ನು ತೋರಿಸಿದರೆ ಈ ದೇಶದಲ್ಲಿ ಯಾವುದೇ ತರಹದ ಜನಪರ ವಿರೋಧಿ ಶಕ್ತಿಗಳು ಬಲಶಾಲಿಯಾಗಲು ಸಾಧ್ಯವಿಲ್ಲ.

**ಡಾ॥ ಪ್ರಕಾಶ ದೇಸಾಯಿ**
ಸಹಾಯಕ ಪ್ರಾಧ್ಯಾಪಕರು, ರಾಜ್ಯಶಾಸ್ತ್ರ ವಿಭಾಗ
ಗೋವಾ ವಿಶ್ವವಿದ್ಯಾಲಯ, ಗೋವಾ



# ಹೊಸ ಚೈತನ್ಯ ಪಡೆದ ಕರ್ನಾಟಕ ವೈಜ್ಞಾನಿಕ ಮನೋವೃತ್ತಿ ಆಂದೋಲನ

**ಭಾ**ರತ ಸಂವಿಧಾನದ, ಅನುಚ್ಛೇದ ೫೧ ಎ-ರಲ್ಲಿ ಪ್ರತಿಯೊಬ್ಬ ಭಾರತೀಯರ ಮೂಲಭೂತ ಕರ್ತವ್ಯಗಳ ರೂಪದಲ್ಲಿ ನಿಬಂಧಿಸಲಾಗಿರುವ, ಮುಖ್ಯವಾಗಿ, (ಎಚ್) ವೈಜ್ಞಾನಿಕ ಮನೋವೃತ್ತಿ, ಮಾನವ ಹಿತಾಸಕ್ತಿ, ಅನ್ವೇಷಣೆ ಮತ್ತು ಸುಧಾರಣೆಯ ಮನೋಭಾವವನ್ನು ಬೆಳೆಸುವುದು; ಮತ್ತು (ಇ) ಧರ್ಮ, ಭಾಷೆ ಮತ್ತು ಪ್ರಾದೇಶಿಕ ಅಥವಾ ಸ್ಥಳೀಯ ವಿಭಿನ್ನತೆಗಳನ್ನು ಮೀರಿ ಎಲ್ಲ ಜನರ ನಡುವೆ ಸೌಹಾರ್ದ ಮತ್ತು ಸೋದರತ್ವವನ್ನು ಬೆಳೆಸುವುದು; ಮಹಿಳೆಯರ ಗೌರವಕ್ಕೆ ಕುಂದು ತರುವಂಥ ಪರಿಪಾಠದಿಂದ ದೂರವಿರುವುದು – ಇವುಗಳನ್ನು ನಾಗರಿಕರಲ್ಲಿ ಉತ್ತೇಜಿಸುವುದನ್ನು ಹೆಚ್ಚು ನಿರ್ದಿಷ್ಟ ಗುರಿಯನ್ನಾಗಿಟ್ಟುಕೊಂಡು ಆಂದೋಲನವು ಈಗಾಗಲೇ ರಾಜ್ಯದ ಕೆಲವು ಕಡೆ ಸಂಚಾಲಕರ ಕಾರ್ಯಶಿಬಿರಗಳನ್ನು ನಡೆಸಿದೆ.

ಕರ್ನಾಟಕ ವೈಜ್ಞಾನಿಕ ಮನೋವೃತ್ತಿ ಆಂದೋಲನವು ಯಾವುದೇ ಧರ್ಮ, ಜಾತಿ ಅಥವಾ ಇಸಂಗೆ ಸಂಬಂಧಿಸಿದ್ದಲ್ಲ; ದೇವರು, ಧರ್ಮವನ್ನು ಹೀಗಳೆಯುವುದು ಆಂದೋಲನದ ಉದ್ದೇಶವಲ್ಲ. ಪ್ರತಿಯೊಬ್ಬ ವ್ಯಕ್ತಿಯಲ್ಲಿಯೂ ವೈಚಾರಿಕತೆಯನ್ನು ಬೆಳೆಸುವುದು, ಆ ಮೂಲಕ ಯಾವುದು ಅವೈಜ್ಞಾನಿಕ, ಅಮಾನವೀಯ, ಪ್ರಗತಿ ವಿರೋಧಿ ಎಂಬುದನ್ನು ನಿರ್ಧರಿಸುವ ವೈಯಕ್ತಿಕ ಸಶಕ್ತತೆಯನ್ನು ವ್ಯಕ್ತಿಯಲ್ಲಿ ತುಂಬುವುದು ಈ ಆಂದೋಲನದ ಏಕೈಕ ಆಶಯ.

ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತು, ಭಾರತ ಜ್ಞಾನ ವಿಜ್ಞಾನ ಸಮಿತಿ, ಕರ್ನಾಟಕ ಜ್ಞಾನ ವಿಜ್ಞಾನ ಸಮಿತಿ ಇವುಗಳಲ್ಲದೆ ಕೆಲವು ಸರಕಾರೇತರ ಸಂಸ್ಥೆಗಳ ಆಶ್ರಯದಲ್ಲಿ ಈಗಾಗಲೇ ಸಂಚಾಲಕರ ಶಿಬಿರಗಳು ನಡೆದಿವೆ. ಇದೀಗ ಆಂದೋಲನಕ್ಕೆ ಹೊಸ ಚೈತನ್ಯ ದೊರೆತಿದೆ. ಆಂದೋಲನದ ಧ್ಯೇಯೋದ್ದೇಶಗಳನ್ನು ಮೆಚ್ಚಿಕೊಂಡ, ಬ್ಯಾಂಕ್ ನೌಕರರ ಅಭ್ಯುದಯಕ್ಕಾಗಿ ಸಂಘಟಿತವಾದ ಕೋಲಾರದ ಪ್ರಗತಿ ಟ್ರಸ್ಟ್, ಬ್ಯಾಂಕ್ ನೌಕರರಿಗಾಗಿ ಇಂಥ ವೈಜ್ಞಾನಿಕ ಮನೋವೃತ್ತಿ ಶಿಬಿರಗಳನ್ನು ನಡೆಸಲು ಕೇಳುತ್ತಾ, ಆಂದೋಲನಕ್ಕೆ ಹತ್ತು ಲಕ್ಷ ಎಪ್ಪತ್ತೆರಡು ಸಾವಿರ ರೂಪಾಯಿಗಳ ದೇಣಿಗೆಯನ್ನು ನೀಡಿದೆ. ಇನ್ನು ಕೆಲವು ದಾನಿ ಸಂಸ್ಥೆಗಳು ಈ ಹೆಜ್ಜೆಗಳನ್ನು ಅನುಸರಿಸಲಿರುವುದು ಹರ್ಷದ ವಿಚಾರ.

**ಶಿಬಿರಗಳಿಗಾಗಿ ಧನಸಹಾಯ**

ಆಗಿರುವ ಬೆಳವಣಿಗೆಯ ಹಿನ್ನೆಲೆಯಲ್ಲಿ, 'ವೈಜ್ಞಾನಿಕ ಮನೋವೃತ್ತಿ ಸಂಚಾಲಕರ ಕಾರ್ಯ ಶಿಬಿರ'ಗಳನ್ನು ಆಯೋಜಿಸಬಯಸುವ ಯಾವುದೇ ಪ್ರಗತಿಪರ ಸಂಸ್ಥೆಗೆ ಈಗ ಕಾರ್ಯಶಿಬಿರದ ವೆಚ್ಚವನ್ನು ಆಂದೋಲನವೇ ಭರಿಸಲು ಸಾಧ್ಯವಾಗಿದೆ. ಶಿಬಿರವನ್ನು ನಡೆಸಲು ಬರುವ ಸಂಪನ್ಮೂಲ ವ್ಯಕ್ತಿಗಳ ಎಲ್ಲಾ ವೆಚ್ಚವನ್ನು ಈಗ ಆಂದೋಲನವೇ ಭರಿಸುವುದು. ಜೊತೆಗೆ ಶಿಬಿರದ ಸ್ಥಳೀಯ ವೆಚ್ಚಗಳಿಗಾಗಿ ಪ್ರತಿ ಶಿಬಿರಕ್ಕೆ ರೂ. ೧೦,೦೦೦/- ಸಹಾಯಧನವನ್ನೂ ನೀಡಲಾಗುವುದು. ಅಲ್ಲದೇ ಶಿಬಿರದಲ್ಲಿ ಭಾಗಿಗಳಿಗೆ ಕೊಡಮಾಡುವ ಪಠ್ಯ, ತರಬೇತಿ ಕೈಪಿಡಿ ಇತ್ಯಾದಿ ಇರುವ 'ಕಾರ್ಯಶಿಬಿರ ಸಂಚಿ' ಮತ್ತು ಪ್ರಮಾಣ ಪತ್ರಗಳನ್ನು ನವಕರ್ನಾಟಕ ಪ್ರಕಾಶನ ಸಂಸ್ಥೆಯು ಉಚಿತವಾಗಿ ಒದಗಿಸುತ್ತಿದೆ. ಹೀಗಾಗಿ ಸಂಘಟಕ ಸಂಸ್ಥೆಯು ಈಗ ಯಾವುದೇ ಹೆಚ್ಚಿನ ವೆಚ್ಚವಿಲ್ಲದೆ ಉಪಯುಕ್ತವಾದ ಈ ಶಿಬಿರವನ್ನು ನಡೆಸಬಹುದಾಗಿದೆ.

**ನೀವೂ ಕೈಜೋಡಿಸಿ**

ಡಾ॥ ಜಿ. ರಾಮಕೃಷ್ಣ, ಡಾ॥ ಸಿ. ಆರ್. ಚಂದ್ರಶೇಖರ್, ಪ್ರೊ॥ ಬರಗೂರು ರಾಮಚಂದ್ರಪ್ಪ, ಪ್ರೊ॥ ಜಿ. ಆರ್. ಲಕ್ಷ್ಮಣರಾವ್, ಪ್ರೊ॥ ಎ. ಎಸ್. ನಟರಾಜ್, ಡಾ॥ ನಾ. ಸೋಮೇಶ್ವರ, ಆರ್. ಎಸ್. ರಾಜಾರಾಮ್, ಡಾ॥ ಸಿದ್ದನಗೌಡ ಪಾಟೀಲ, ಎಂ. ಅಬ್ದುಲ್ ರೆಹಮಾನ್ ಪಾಷ, ಡಾ॥ ವಸುಂಧರಾ ಭೂಪತಿ, ಡಾ॥ ಎಚ್. ಎಸ್. ಅನುಪಮಾ, ಡಾ॥ ಎನ್. ಗಾಯತ್ರಿ, ಡಾ॥ ಶ್ರೀನಿವಾಸ ಕಕ್ಕಿಲ್ಲಾಯ, ಪ್ರೊ॥ ಆರ್. ಕೆ. ಹುಡಗಿ, ಡಾ॥ ಆರ್. ಪೂರ್ಣಿಮಾ, ಡಾ॥ ಎಂ. ಡಿ. ವಕ್ಕುಂದ, ಡಾ॥ ಸಂಪಿಗೆ ತೋಂಟದಾರ್ಯ, ಅಬ್ದುಲ್ ಖಾನ್, ಪ್ರೊ॥ ಶಿವಕುಮಾರ್ ನಾಗವಾರ, ಇ. ಬಸವರಾಜ್, ಶಂಕರ ಹಲಗತ್ತಿ ಮುಂತಾದ ರಾಜ್ಯದ ಪ್ರಗತಿಪರ ಚಿಂತಕರು ವಿಚಾರಮಂಥನದಿಂದ ರೂಪುಗೊಂಡಿರುವ ಈ ಆಂದೋಲನದ ಮುನ್ನಡೆಯಲ್ಲಿ ನೀವೂ ಸೇರಿಕೊಳ್ಳಬಹುದು. ನಿಮ್ಮಿಂದ, ನಿಮ್ಮ ಸಂಸ್ಥೆಯಿಂದ ಎರಡು ಬಗೆಯ ನೆರವು ಅಗತ್ಯವಾಗಿದೆ.

೧. ನಿಮ್ಮ ಸಂಸ್ಥೆಯ ವತಿಯಿಂದ ನಿಮ್ಮ ಊರಲ್ಲಿ 'ವೈಜ್ಞಾನಿಕ ಮನೋವೃತ್ತಿ ಸಂಚಾಲಕರ ಕಾರ್ಯಶಿಬಿರ'ವನ್ನು ಆಯೋಜಿಸಬಹುದು.

ಆ ಮೂಲಕ ನಿಮ್ಮ ಪ್ರದೇಶದಲ್ಲಿ ಈ ಕುರಿತ ಚಟುವಟಿಕೆಗಳಿಗೆ ಹೆಚ್ಚಿನ ನಿರ್ದಿಷ್ಟ ದಿಕ್ಕನ್ನು ನೀಡಬಹುದು.

೨. ಆಂದೋಲನದಲ್ಲಿ ನಿಮ್ಮ ನಿಮ್ಮ ಕ್ಷೇತ್ರದಲ್ಲಿ ಶಿಬಿರ ಸಂಚಾಲಕರಾಗಿ ಕೆಲಸ ಮಾಡುವ ಅಪೇಕ್ಷೆಯನ್ನು ಸೂಚಿಸಬಹುದು. ಆಗ ನಮ್ಮ ಹತ್ತಿರದಲ್ಲಿ ಯಾವುದಾದರೂ ಸಂಸ್ಥೆ ಇಂಥ ಸಂಚಾಲಕರ ಶಿಬಿರಗಳನ್ನು ನಡೆಸುವಾಗ ನಿಮ್ಮನ್ನು ಅಲ್ಲಿಗೆ ಆಹ್ವಾನಿಸಲಾಗುವುದು.

**ಸಂಪರ್ಕಿಸಿ :**

**ಎಂ. ಅಬ್ದುಲ್ ರೆಹಮಾನ್ ಪಾಷ**
೮೧/೩೭-೩, ೧೨ನೇ 'ಡಿ' ಮುಖ್ಯರಸ್ತೆ
ಶಿವನಗರ, ಬೆಂಗಳೂರು – ೫೬೦ ೦೧೦
ಫೋನ್ : ೦೮೦-೨೩೩೮ ೯೮೮೮
ಮೊಬೈಲ್ : ೯೮೪೫೨ ೯೯೬೨೧
ಇ-ಅಂಚೆ : pasha1950@gmail.com

ಡಾ॥ ಆರ್. ಶೋಭಾ

ಮನುಷ್ಯನ ಕಲ್ಪನಾಶಕ್ತಿ ಅಭಿವ್ಯಕ್ತಿಯ ಕಡೆಗೆ ತಿರುಗಿದಾಗಿನಿಂದ ಇಂದಿನ ವರೆಗೆ ಕಲಾಕೃತಿಗಳು ಸೃಷ್ಟಿಯಾಗುತ್ತಲೇ ಇವೆ. ಮೌನದಿಂದ ಮಾತಿನೆಡೆಗೆ, ಅಮೂರ್ತದಿಂದ ಮೂರ್ತದೆಡೆಗೆ, ವಸ್ತುಸ್ಥಿತಿಯ ನಿರೂಪಣೆಯಿಂದ ಕಾವ್ಯಮಯತೆಯ ಕಡೆಗೆ ಸಾಗುವ ಪ್ರತಿಯೊಂದು ಹೆಜ್ಜೆಯಲ್ಲೂ ಹೊಸ ಹುಡುಕಾಟಗಳು ನಡೆಯುತ್ತಲೇ ಇವೆ. ಒಂದು ಪೀಳಿಗೆಯಿಂದ ಇನ್ನೊಂದು ಪೀಳಿಗೆಗೆ ಹರಿದುಬರುತ್ತಿರುವ ಈ ಸೃಜನಾತ್ಮಕ ಪ್ರಕ್ರಿಯೆಯಲ್ಲಿ ಸೃಷ್ಟಿ–ಪ್ರತಿಸೃಷ್ಟಿ–ಮರುಸೃಷ್ಟಿಗಳು, ರೂಪಾಂತರಗಳು, ಅವಸ್ಥಾಂತರಗಳು, ಪ್ರಯೋಗಾಂತರಗಳು ನಿರಂತರವಾಗಿವೆ. ಸಾಹಿತ್ಯ, ರಂಗಭೂಮಿ, ಸಿನಿಮಾದಂತಹ ಮಾಧ್ಯಮಗಳಲ್ಲಂತೂ ಇದು ಹೆಚ್ಚಿನ ಪ್ರಮಾಣದಲ್ಲಿ ಆಗುವಂತಹದ್ದು.

# ಕೃತಿಯಿಂದ ಕೃತಿಗೆ ಮರೀಚಿಕೆಯಾಗಿ ಉಳಿದ ಸ್ತ್ರೀ ಸಂವೇದನೆ

ಎರಡೂ ಕೃತಿಗಳು ಪಿತೃಪ್ರಧಾನ ವ್ಯವಸ್ಥೆಯ ಎರಡು ಮಾದರಿಗಳಲ್ಲಿ ಉತ್ತರಗಳನ್ನು ಕಂಡುಕೊಳ್ಳಲು ಪ್ರಯತ್ನಿಸಿವೆ. ನಾಟಕದಲ್ಲಿ ವಾಸ್ತವತೆಯ ಅರಿವಿದ್ದೂ ರಾಣಿ ಮೌನವಹಿಸಿದ್ದರೆ ಚಲನಚಿತ್ರದಲ್ಲಿ ಮುಗ್ಧತೆಯ ಕಾರಣದಿಂದ ಮೌನ. ಒಂದು ಜಾನಪದ ಕಥಾವಸ್ತುವನ್ನು ಇಟ್ಟುಕೊಂಡು ಕೃತಿಯನ್ನು ನಿರ್ಮಿಸುವಾಗಲೂ ಸಹ ಒಂದು ಸ್ತ್ರೀ ಸಂವೇದನಾತ್ಮಕ ಪರ್ಯಾಯ ಮಾದರಿಯನ್ನು ಕಂಡುಕೊಳ್ಳಲು ಸಾಧ್ಯವಾಗದೆ ಇರುವುದು ಕಂಡುಬರುತ್ತದೆ. ನಾಟಕದಲ್ಲಿ ರಾಣಿಯ ಮೌನ ಮತ್ತು ಚಿತ್ರದಲ್ಲಿ ಅವಳ ಮುಗ್ಧತೆ ಒಂದು ಪ್ರಮುಖವಾದ ಸ್ತ್ರೀ ದೃಷ್ಟಿಕೋನವೊಂದನ್ನು ನಮ್ಮಿಂದ ಮರೆಯಾಗಿಸುತ್ತದೆ. ಸಿನಿಮಾದಲ್ಲಿ ರಾಣಿಯ ಬಗ್ಗೆ ಸಂವೇದನಾಶೀಲವಾಗಿದ್ದ ಕುರುಡವ್ವನ ಮೂಲಕ ಇದು ಸಾಧ್ಯವಾಗಬಹುದಾಗಿತ್ತು.

ಒಂದು ಕೃತಿ ಮತ್ತೊಂದು ಸ್ವರೂಪವನ್ನು ಪಡೆದುಕೊಳ್ಳುವ ಈ ಪ್ರಕ್ರಿಯೆಯಲ್ಲಿ ಅನೇಕ ಬದಲಾವಣೆಗಳಾಗಬಹುದು. ಹೊಸ ಆಯಾಮಗಳು ಸೃಷ್ಟಿಯಾಗಬಲ್ಲವು. ಕ್ಲಿಷ್ಟವಾದದ್ದು ಸರಳಗೊಳ್ಳಬಹುದು, ಹೊಸ ದೃಷ್ಟಿಕೋನಗಳು ಸಿಗಬಹುದು, ಹೀಗೆ ಏನನ್ನೋ ಕಳೆದುಕೊಳ್ಳುತ್ತಾ ಮತ್ಯಾವುದನ್ನೋ ಪಡೆದುಕೊಳ್ಳುತ್ತಾ ಕಾಲದಿಂದ ಕಾಲಕ್ಕೆ ಅವಸ್ಥಾಂತರಗಳನ್ನು ಪಡೆದುಕೊಳ್ಳುತ್ತಾ ಹೋಗುವ ಈ ಪ್ರಕ್ರಿಯೆಯಲ್ಲಿ ಕೆಲವೊಂದು ಅದ್ಭುತ ಕಲಾಕೃತಿಗಳು ಹುಟ್ಟಬಹುದು. ಉದಾಹರಣೆಗೆ ಮಹಾಭಾರತದ 'ಶಾಕುಂತಲೋಪಾಖ್ಯಾನ' ಕಾಳಿದಾಸನ 'ಅಭಿಜ್ಞಾನ ಶಾಕುಂತಲ'ದಂತಹ ಕೃತಿಯಾಗಬಹುದು, ಕೆಲವೊಮ್ಮೆ ಇದಕ್ಕೆ ವಿರುದ್ಧವಾಗಿಯೂ ಸಂಭವಿಸಬಹುದು. ಅದೇನೇ ಇರಲಿ, ಒಂದು ಸಾಹಿತ್ಯ ಕೃತಿ ಬೇರೊಂದು ಸ್ವರೂಪಕ್ಕೆ ಪರಿವರ್ತನೆಗೊಳ್ಳುವಾಗ ಅದರ ಬಗ್ಗೆ ಹೆಚ್ಚಿನ ನಿರೀಕ್ಷೆಗಳು ಇರುತ್ತವೆ. ಉದಾಹರಣೆಗೆ, ಯಾವುದಾದರೂ ಒಂದು ಕಾದಂಬರಿಯನ್ನು ಅಥವಾ ನಾಟಕ ಕೃತಿಯನ್ನು ದೃಶ್ಯಮಾಧ್ಯಮಕ್ಕೆ ಪರಿವರ್ತಿಸಲು ಹೊರಟಾಗ ನಿರ್ದೇಶಕನಿಗೆ ಅದನ್ನು ಒಂದು ಕಲಾಕೃತಿಯಾಗಿ ನಿರ್ಮಿಸುವ ಜವಾಬ್ದಾರಿಯಲ್ಲದೆ ಅದರ ಮೂಲಸ್ವರೂಪದ ಬಗೆಗಿನ ಕಾಳಜಿಯನ್ನು ಹೊತ್ತುಕೊಂಡು ಓದುಗರನ್ನು ನಿರಾಸೆಗೊಳಿಸಬಾರದೆಂಬ ಆತಂಕವೂ ಇರುತ್ತದೆ.



ಹೊಸದೊಂದು ಮಾಧ್ಯಮಕ್ಕೆ ಕೃತಿಯನ್ನು ಅಳವಡಿಸಿಕೊಳ್ಳುವಾಗ, ಆ ಮಾಧ್ಯಮದ ಪರಿಮಿತಿಗಳು ಮತ್ತು ಅದರಲ್ಲಿ ಸಿಗುವ ಹೊಸ ಸಾಧ್ಯತೆಗಳನ್ನು ಪರಿಶೀಲಿಸಬೇಕಾಗುತ್ತದೆ. ಅದರಲ್ಲೂ ವಿಶೇಷವಾಗಿ ಸಿನಿಮಾರಂಗದಂತಹ ಮಾಧ್ಯಮದಲ್ಲಿ ತಾಂತ್ರಿಕತೆಯಿಂದ ಸಿಗುವ ಹೊಸ ಆಯಾಮಗಳನ್ನು ಬಳಸಿಕೊಳ್ಳುತ್ತಾ ಸಾಹಿತ್ಯದಲ್ಲಿ ಪ್ರಮುಖವಾಗಿ ಇರುವ ವಾಚ್ಯತೆಯನ್ನು ಕಡಿಮೆ ಮಾಡಿಕೊಳ್ಳುತ್ತಾ, ಹೊಸ ಮಾಧ್ಯಮದ ಪ್ರಮುಖ ಪಾಲುದಾರರಾದ ಪ್ರೇಕ್ಷಕರ ಅಪೇಕ್ಷೆಗಳು / ನಿರೀಕ್ಷೆಗಳನ್ನು ಗಮನದಲ್ಲಿಟ್ಟುಕೊಂಡು ಒಂದು ದೃಶ್ಯ ಕೃತಿಯನ್ನು ನಿರ್ಮಿಸಬೇಕಾಗಿರುತ್ತದೆ. ಇದೆಲ್ಲವೂ ನಿರ್ದೇಶಕರು ಆಯ್ಕೆ ಮಾಡಿಕೊಳ್ಳುವ ಕೃತಿ, ಅದನ್ನು ಅವರು ಗ್ರಹಿಸುವ ರೀತಿ ಮತ್ತು ಅವರ ಅಭಿವ್ಯಕ್ತಿ ಸಾಮರ್ಥ್ಯವನ್ನು ಅವಲಂಬಿಸಿರುತ್ತದೆ. ಯಾವುದೇ ಕೃತಿಯನ್ನು ಆಯ್ಕೆಮಾಡಿಕೊಂಡು ಅದನ್ನು ತನ್ನದೇ ಆದ ವಿಶಿಷ್ಟ ರೀತಿಯಲ್ಲಿ ಅತ್ಯಂತ ಸೃಜನಶೀಲವಾಗಿ ಮತ್ತೊಂದು ಮಾಧ್ಯಮದಲ್ಲಿ ರೂಪಿಸುವ ಸ್ವಾತಂತ್ರ್ಯ ನಿರ್ದೇಶಕರಿಗಿರುತ್ತದೆ. ಆದರೆ ಮೂಲ ಕೃತಿಯ ಪ್ರಮುಖ ಉದ್ದೇಶಗಳನ್ನು ಉಳಿಸಿಕೊಳ್ಳಬೇಕಾಗಿರುತ್ತದೆ.



ಚಲನಚಿತ್ರ ಮಾಧ್ಯಮ ಆರಂಭವಾದ ಹೊಸದರಲ್ಲಿ ಭಾರತದಲ್ಲಂತೂ ಇದಕ್ಕೆ ಮೂಲ ಸಾಮಗ್ರಿಯನ್ನು ಒದಗಿಸಿದ್ದು ಸಾಹಿತ್ಯ ಕೃತಿಗಳೇ. ಅದರಲ್ಲೂ ವಿಶೇಷವಾಗಿ ಸಂಸ್ಕೃತ ನಾಟಕ ಕೃತಿಗಳು ಭಾರತದ ಹಲವಾರು ಭಾಷೆಗಳ ಸಿನಿಮಾಗಳಿಗೆ ಸಾಮಗ್ರಿಯನ್ನು ಒದಗಿಸಿಕೊಟ್ಟಿವೆ. ಮೊದಲಲ್ಲಿ ಅತ್ಯಂತ ಸಂಕೀರ್ಣವಾದ, ವಿಷಯ ಗಾಂಭೀರ್ಯದಿಂದ ಕೂಡಿದ ಕೃತಿಗಳನ್ನು ಯಥಾವತ್ತಾಗಿ ಭಾಷೆಯ ಸ್ವರೂಪವನ್ನು ಒಳಗೊಂಡಂತೆ ಪರಿವರ್ತನೆಗೊಳಿಸುವುದೇ ದೊಡ್ಡ ಸವಾಲಾಗಿತ್ತು. ತಾಂತ್ರಿಕತೆಯ ಸಹಾಯದಿಂದ ನೈಜ ಪರಿಸರವನ್ನು ನಿರ್ಮಿಸಿ ಅತ್ಯಂತ ವಾಸ್ತವವಾದ ಅನುಭವವನ್ನು ಪ್ರೇಕ್ಷಕರಿಗೆ ನೀಡುವುದೇ ಅದರ ಉದ್ದೇಶವಾಗಿತ್ತು. ನಿಧಾನವಾಗಿ ಮೂಕಿ ಚಿತ್ರಗಳಿಂದ ಮಾತು/ಸಂಗೀತಮಯ ಚಿತ್ರಗಳೆಡೆಗೆ, ಕಪ್ಪು ಬಿಳುಪಿನಿಂದ ವರ್ಣರಂಜಿತ ಚಿತ್ರಗಳೆಡೆಗೆ, ಕಲಾತ್ಮಕತೆಯಿಂದ ಮನೋರಂಜನೆಯೆಡೆಗೆ, ಸ್ತಬ್ಧ ಚಿತ್ರಗಳಿಂದ ವೀಡಿಯೋ ಚಿತ್ರಗಳೆಡೆಗೆ... ಹೀಗೆ ಅತ್ಯಂತ ಶರವೇಗದಲ್ಲಿ ಚಲನಚಿತ್ರ ಮಾಧ್ಯಮ ಬೆಳೆಯುತ್ತಾ ಬಂತು. ನಿಧಾನವಾಗಿ ಸಾಹಿತ್ಯ ಕೃತಿಯನ್ನು ಆಧಾರ ವಾಗಿಟ್ಟುಕೊಂಡು ಕಥಾನಕವನ್ನು ಭಿನ್ನವಾಗಿ ಚಿತ್ರಿಸುವುದು, ಹೊಸ ಮಾಧ್ಯಮದ ಅವಶ್ಯಕತೆಗಳಿಗೆ ಅದನ್ನು ಮಾರ್ಪಾಡು ಮಾಡಿಕೊಳ್ಳುವುದು, ಉದ್ದೇಶಿತ ಪ್ರೇಕ್ಷಕರ ಅಭಿರುಚಿ, ಅವಶ್ಯಕತೆಗಳನ್ನು ಅರ್ಥಮಾಡಿಕೊಂಡು ಸಿನಿಮಾಗಳನ್ನು ಮಾಡುವುದು... ಹೀಗೆ ಹೊಸ ಆಯಾಮಗಳು ಹುಟ್ಟಿಕೊಳ್ಳುತ್ತಾ ಹೋಯಿತು. ಮನೋರಂಜನೆಗಾಗಿ ಕೆಲವು, ಕಲಾತ್ಮಕತೆಗಾಗಿ ಕೆಲವು, ಹಣ ಮಾಡುವುದಕ್ಕಾಗಿ ಕೆಲವು... ಹೀಗೆ ಹಲವು ರೀತಿಯ ಸಿನಿಮಾಗಳು ಸಿದ್ಧವಾಗುತ್ತಾ ಹೋದವು. ಸಂಖ್ಯೆಯಲ್ಲೂ, ವಿಭಿನ್ನತೆಯಲ್ಲೂ ಬೆಳೆಯುತ್ತಾ ಸಿನಿಮಾಗಳು ಅತ್ಯಂತ ಯಶಸ್ವಿ ಮಾಧ್ಯಮವಾಗತೊಡಗಿದವು. ಸಿನಿಮಾಗಾಗಿಯೇ ಸಾಹಿತ್ಯ ಹುಟ್ಟತೊಡಗಿತು. ಇಲ್ಲಿಂದ ಮುಂದಕ್ಕೆ ಮೂಲತಃ ಸಾಹಿತ್ಯ ಕೃತಿಗಳನ್ನು ಸಿನಿಮಾಗಾಗಿ ಬಳಸುವುದು ಕಡಿಮೆಯಾಯಿತು. ಆದರೆ ಕೆಲವೊಂದು ಸಾಹಿತ್ಯ ಕಲಾಕೃತಿಗಳು ಎಲ್ಲ ಕಾಲಕ್ಕೂ ನಿರ್ದೇಶಕರ ಮನಸ್ಸನ್ನು ಸೆಳೆದಿವೆ, ಅವರ ಸೃಜನಶೀಲತೆಗೆ ಸವಾಲಾಗಿವೆ. ಹಾಗಾಗಿ, ಹೊಸ ಸಾಧ್ಯತೆಗಳನ್ನು ಹುಡುಕುವ ಕಾರ್ಯದಲ್ಲಿ ತೊಡಗಿಸಿವೆ. ರಾಮಾಯಣ, ಮಹಾಭಾರತ, ಪುರಾಣಗಳು, ಹಾಗೆಯೇ ಜಾನಪದ ಕಥಾನಕಗಳು ಮಾನವ ಜೀವನದ ಪುನರಭಿವ್ಯಕ್ತಿಗೆ, ನಿರಂತರವಾದ ಪೂರಕ ಸಾಮಗ್ರಿಯನ್ನು ಒದಗಿಸುತ್ತಾ ಬಂದಿವೆ. ಇವು ದೇಶ, ಭಾಷೆ, ಮಾಧ್ಯಮಗಳ ಪರಿಮಿತಿಗಳನ್ನು ಮೀರಿ ಮತ್ತೆ ಮತ್ತೆ ಸೃಷ್ಟಿ , ಪ್ರತಿಸೃಷ್ಟಿ , ಮರುಸೃಷ್ಟಿಗಳ ಮೂಲಕ ಆಯಾ ಕಾಲದ ಆಶಯಗಳೊಂದಿಗೆ ಸಮೀಕರಿಸಿಕೊಳ್ಳುತ್ತಿವೆ. ಸಾಹಿತ್ಯ, ರಂಗಭೂಮಿ ಮತ್ತು ಚಲನಚಿತ್ರಗಳು ಅತ್ಯಂತ ಪರಿಣಾಮಕಾರಿ ಮಾಧ್ಯಮಗಳಾದುದರಿಂದ ಮಾನವ ಜೀವನದ ಆಶಯಗಳು ಅವುಗಳಲ್ಲಿ ಪ್ರತಿಬಿಂಬಿತವಾಗುತ್ತ , ಅಲ್ಲಿ ಅಭಿವ್ಯಕ್ತವಾದ ಆಶಯಗಳು ನಿಜಜೀವನದಲ್ಲಿ ಪರಿಣಮಿಸುತ್ತ ಸಾಮಾಜಿಕ ಸುಧಾರಣೆಯತ್ತ ಸಾಗಬೇಕಾಗಿರುತ್ತದೆ. ಆದ್ದರಿಂದಲೇ ಈ ಮಾಧ್ಯಮಗಳು ಅತ್ಯಂತ ಪ್ರಬಲವೂ, ಪರಿಣಾಮಕಾರಿಯೂ ಆಗಿರುವುದು.

ಈ ಹಿನ್ನೆಲೆಯಲ್ಲಿ ಗಿರೀಶ್ ಕಾರ್ನಾಡರ ನಾಟಕ ಕಲಾಕೃತಿ 'ನಾಗಮಂಡಲ', ನಾಗಾಭರಣರ ನಿರ್ದೇಶನದಲ್ಲಿ ಅದೇ ಶೀರ್ಷಿಕೆಯಲ್ಲಿ ಚಲನಚಿತ್ರವಾಗಿ ರೂಪುಗೊಂಡದ್ದನ್ನು ಅವುಗಳಲ್ಲಿರುವ ಮಾನವ ಜೀವನದ ಅಭಿವ್ಯಕ್ತಿಯ ನೆಲೆಯಲ್ಲಿ ನೋಡುವ ಸಾಹಸಕ್ಕೆ ಕೈ ಹಾಕಿದ್ದೇನೆ. ನಾಟಕ ಸಂಪೂರ್ಣವಾಗಿ ಜಾನಪದ ಕಥೆಯ ಬದ್ಧತೆಗಳನ್ನು ಉಳಿಸಿಕೊಂಡರೆ, ಚಲನಚಿತ್ರ ವಾಸ್ತವಿಕತೆಯ ಜೊತೆಗೆ ಜಾನಪದ ಕಥೆಯನ್ನು ಮೇಳೈಸುವಲ್ಲಿ ಯಶಸ್ಸು ಕಂಡಿದೆ. ನಾಟಕ ಕೃತಿ ಸಂಪೂರ್ಣವಾಗಿ ಜಾನಪದ ಮೂಲದ ಕಥಾನಕವಾಗಿದೆ. ಇದನ್ನು ನಾಟಕಕಾರ ಗಿರೀಶ್ ಕಾರ್ನಾಡರು ಕೇಳಿದ್ದು ಎ. ಕೆ. ರಾಮಾನುಜಂ ಅವರಿಂದ. ನಾಟಕದ ಆರಂಭದಲ್ಲಿ ಕಾಣುವ ಒಬ್ಬ ಮನುಷ್ಯ ತಾನು ಆ ತಿಂಗಳ ಒಂದು ರಾತ್ರಿಯಾದರೂ ಜಾಗರಣೆ ಮಾಡದೆ ಹೋದರೆ ತಾನು ಸಾಯುತ್ತೇನೆ ಎಂಬ ನಂಬಿಕೆಯಿಂದ ಆರಂಭವಾಗಿ, ಜ್ಯೋತಮ್ಮಗಳು ಮಾತನಾಡುವುದು, ಕತೆಯೊಂದು ಕತೆಗಾರಳ ಒಳಗಿರಲಾಗದೆ ಮೂರ್ತರೂಪ ಪಡೆದು ತಾನೇ ನಾಟಕದ ಕಥೆಯನ್ನು ಹೇಳತೊಡಗುವುದು, ಅದರ ನಾಯಕಿಯಾದ ರಾಣಿಗೆ ತನ್ನ ಗಂಡನನ್ನೊಲಿಸಿ ಕೊಳ್ಳಲು ಕುರುಡವ್ವ ಕೊಟ್ಟ ಬೇರನ್ನು ತೇಯ್ದು ಸಾರಿನಲ್ಲಿ ಹಾಕಿ ಪ್ರಯೋಗಿಸಲು ಹೋಗಿ ಹೆದರಿಕೆಯಿಂದಾಗಿ ಅದು ಹುತ್ತ ಸೇರಿದಾಗ ಅದರ ಪ್ರಭಾವಕ್ಕೆ ಸರ್ಪವೊಂದು ಒಳಗಾಗುವುದು. ಅದು ಅಪ್ಪಣ್ಣನ ರೂಪದಲ್ಲಿ ಬಂದು ರಾಣಿಯೊಂದಿಗೆ ರಾತ್ರಿಗಳನ್ನು ಕಳೆಯುವುದು ರಾಣಿ ಬಸುರಿಯೆಂದು ಗೊತ್ತಾದಾಗ ಪಂಚಾಯ್ತಿ ಕರೆದು ನಾಗದಿವ್ಯವನ್ನು ಮಾಡಿಸುವುದು, ರಾಣಿ ಈ ಪರೀಕ್ಷೆಯಲ್ಲಿ ಗೆದ್ದು ಅಪ್ಪಣ್ಣನೂ ಅದನ್ನು ಪವಾಡವೆಂದು ನಂಬುವುದು, ಕೊನೆಗೂ ನಾಗಪ್ಪ ರಾಣಿಯ ಹಂಬಲವನ್ನು ಬಿಡಲಾಗದೆ ಮಿಡಿನಾಗರವಾಗಿ ಅವಳ ಕೂದಲೆಳೆಗಳಲ್ಲಿ ಸೇರಿಕೊಳ್ಳುವುದು, ಇದಕ್ಕೆ ಸಮಾನಾಂತರವಾಗಿ ಕುರುಡವ್ವನ ಮಗ ಕಪ್ಪಣ್ಣ ಯಕ್ಷಿಣಿಯೊಂದಿಗೆ ಹೊರಟು ಹೋದಂತೆನ್ನಿಸುವುದು... ಹೀಗೆ ನಾಟಕ ಹಲವಾರು ಜಾನಪದ ನಂಬಿಕೆಗಳು, ಘಟನೆಗಳ ಸುತ್ತ ಹೆಣೆಯಲ್ಪಟ್ಟಿದೆ.

ಇದನ್ನು ಆಧರಿಸಿ ಟಿ. ಎಸ್. ನಾಗಾಭರಣರು ಮಾಡಿದ ಚಲನಚಿತ್ರದಲ್ಲಿ ಹಲವಾರು ಮಾರ್ಪಾಟುಗಳಾಗಿವೆ. ಜಾನಪದ ಅಂಶಗಳು ಕಡಿಮೆಯಾಗಿವೆ. ಕುರುಡವ್ವ ಕೊಟ್ಟ ಬೇರು ಮತ್ತು ನಾಗಪ್ಪ ಅಪ್ಪಣ್ಣನ ರೂಪ ಪಡೆಯುವುದು ಮತ್ತು ಅಗ್ನಿದಿವ್ಯಗಳನ್ನು ಬಿಟ್ಟು ಉಳಿದಂತೆ ಎಲ್ಲ ಹಂತಗಳಲ್ಲೂ ವಾಸ್ತವದೊಂದಿಗೆ ಮುಖಾಮುಖಿಯಾಗುವ ಸಂದರ್ಭಗಳು ಹೆಚ್ಚಾಗಿವೆ. ಇಲ್ಲಿ ಅಪ್ಪಣ್ಣನಿಗೆ ರಾಣಿಯಂತಹ ಹುಡುಗಿಯನ್ನು ನೋಡಿ ಮದುವೆ ಮಾಡಿಸುವವಳು ಕುರುಡವ್ವನೇ. ಆದ್ದರಿಂದ ರಾಣಿಯ ಸುಖ ಸಂತೋಷಗಳ ಕಾಳಜಿಯೂ ಅವಳದೇ. ಆದರೆ ಆಶ್ಚರ್ಯವೆಂದರೆ ಅಪ್ಪಣ್ಣನಿಗೆ ಬೇರೆ ಹೆಣ್ಣಿನೊಂದಿಗೆ ಸಂಬಂಧವಿದೆ ಎಂದು ಗೊತ್ತಿದ್ದರೂ ಸಹ ಈ ಮದುವೆ ಮಾಡಿಸುತ್ತಾಳೆ. ನಂತರ ರಾಣಿ ಗಂಡನೊಂದಿಗೆ ಸುಖವಾಗಿಲ್ಲವೆಂದು ಗೊತ್ತಾದಾಗ ಅಪ್ಪಣ್ಣನ ಮನಸ್ಸನ್ನು ಒಲಿಸಿಕೊಳ್ಳಲು ಬೇರನ್ನು ಕೊಡುತ್ತಾಳೆ. ಆದರೆ ಅದರ ಪರಿಣಾಮವೇ ಬೇರೆಯಾಗಿ ಹುತ್ತದಲ್ಲಿದ್ದ ನಾಗಪ್ಪ ಅದರ ಮೋಡಿಗೊಳಗಾಗುತ್ತಾನೆ. ತನ್ನ ನಿಜಸ್ವರೂಪದಲ್ಲಿ ಅವಳನ್ನು ಒಲಿಸಿ ಕೊಳ್ಳುವುದು ಆಗದಿದ್ದಾಗ ಅಪ್ಪಣ್ಣನ ರೂಪದಲ್ಲಿ ಬಂದು ಸಫಲನಾಗುತ್ತಾನೆ. ಹೀಗೆ ಅನೇಕ ದಿನಗಳು ಕಳೆಯುತ್ತವೆ. ಮುಂದೊಂದು ದಿನ ರಾಣಿ ತಾನು ಬಸುರಿ ಎಂಬ ವಿಚಾರವನ್ನು ಮೊಟ್ಟಮೊದಲ ಬಾರಿಗೆ ನಾಗಪ್ಪನಿಗೆ ತಿಳಿಸಿದಾಗ ಇಲ್ಲಿಂದ ಮುಂದಕ್ಕೆ ಈ ಸಂಬಂಧ ಉಳಿಯಲಾರದು ಎಂಬ ಆತಂಕಕ್ಕೊಳಗಾಗುತ್ತಾನೆ. ಅಲ್ಲದೆ ಅಪ್ಪಣ್ಣನ ಸಂಶಯ, ಕೋಪಗಳಿಗೆ ರಾಣಿ ತುತ್ತಾಗಬೇಕಾಗುತ್ತದೆ ಎಂಬ ಭಯ ಬೇರೆ. ಆದ್ದರಿಂದ ಆದಷ್ಟು ಕಾಲ ಈ ವಿಷಯವನ್ನು ಗುಟ್ಟಾಗಿಡುವಂತೆ ರಾಣಿಯನ್ನು ಕೇಳಿಕೊಳ್ಳುತ್ತಾನೆ ಹಾಗೂ

ಒಂದು ವೇಳೆ ಪಂಚಾಯ್ತಿಗೆ ಬಂದರೆ ನಾಗದಿವ್ಯ ಮಾಡುವಂತೆ ಒಪ್ಪಿಸುತ್ತಾನೆ. ಆದರೆ ಅಷ್ಟರಲ್ಲೇ ಅಪ್ಪಣ್ಣನಿಗೆ ವಿಷಯ ಗೊತ್ತಾಗಿ ಅವಳನ್ನು ದಂಡಿಸುತ್ತಾನೆ. ಪಂಚಾಯ್ತಿ ಸೇರಿಸಿ ಅಗ್ನಿದಿವ್ಯ ಮಾಡುವಂತೆ ಹೇಳಿದಾಗ ರಾಣಿ ನಾಗದಿವ್ಯವನ್ನೇ ಮಾಡಲು ಒಪ್ಪುತ್ತಾಳೆ. ಹುತ್ತದಲ್ಲಿ ಕೈಯಿಟ್ಟು ತಾನು ತನ್ನ ಗಂಡನನ್ನ ಮತ್ತು ನಾಗಪ್ಪ (ಹಾವು) ನನ್ನ ಹೊರತುಪಡಿಸಿ ಬೇರಾರನ್ನಾದರೂ ಮುಟ್ಟಿದ್ದರೆ ಹಾವು ತನ್ನನ್ನು ಕಚ್ಚಲಿ ಎನ್ನುತ್ತಾಳೆ. ಹಾವು ಕಚ್ಚುವುದಿಲ್ಲ. ಊರವರೆಲ್ಲ ಪವಾಡವೆಂದು ಹೊಗಳಿ ಅವಳನ್ನು ದೇವಿಯ ಸ್ಥಾನಕ್ಕೇರಿಸುತ್ತಾರೆ. ಅಪ್ಪಣ್ಣನೂ ಇದಕ್ಕೆ ಒಪ್ಪಲೇಬೇಕಾಗುತ್ತದೆ.

ಇಲ್ಲಿಂದ ಮುಂದಕ್ಕೆ ನಾಟಕ ಮತ್ತು ಸಿನಿಮಾ ಮಾಧ್ಯಮಗಳು ಹುಡುಕಿಕೊಳ್ಳುವ ಉತ್ತರಗಳು ವಿಭಿನ್ನವಾಗಿವೆ. ನಾಟಕದಲ್ಲಿ ಅಪ್ಪಣ್ಣ ನಾಗದಿವ್ಯವನ್ನು ಪವಾಡವೆಂದು ನಂಬುತ್ತಾನೆ. ಆದರೂ ಅಪ್ಪಣ್ಣನಿಗೆ 'ನಾನು ಆಕೆಯನ್ನು ಮುಟ್ಟಿಲ್ಲ. ಇದು ನನಗೆ ಗೊತ್ತಿದೆ. ಅಂಥಾ ನನ್ನ ಹೆಂಡತಿ ಗರ್ಭಿಣಿಯಾದರೆ ಆಕೆ ಪತಿವ್ರತೆ ಹೇಗೆ ?...' ಇತ್ಯಾದಿ ಪ್ರಶ್ನೆಗಳು ಕಾಡುತ್ತವೆ. ರಾಣಿಗೂ ಸಹ ನಾಗಪ್ಪನ ಸ್ಪರ್ಶವೂ ಅಪ್ಪಣ್ಣನ ಸ್ಪರ್ಶವೂ ಬೇರೆಯೆನಿಸಿ ಯಾರು-ಯಾರು-ಯಾರು-ಯಾರು ? ಎಂಬ ಪ್ರಶ್ನೆ ಕಾಡಿತ್ತೇನೋ ! ಆದರೂ ಇಬ್ಬರೂ ಅದರ ಬಗ್ಗೆ ಚರ್ಚೆ ನಡೆಸದೆ ಸುಮ್ಮನಾಗುತ್ತಾರೆ. ಇಲ್ಲೂ ಸಹ ಅಪ್ಪಣ್ಣ, ರಾಣಿಯರು ತಮ್ಮ ಸಂಶಯಗಳನ್ನು ಬಗೆಹರಿಸಿಕೊಳ್ಳದೆ ಇರುವುದು ಪಿತೃಪ್ರಧಾನ ವ್ಯವಸ್ಥೆಯ ಒಂದು ಮಾದರಿಯೇ. ಈ ಮಾದರಿಯಲ್ಲಿ ಅಪ್ಪಣ್ಣ ಪ್ರಜ್ಞಾಪೂರ್ವಕವಾಗಿ ಬೇರೊಂದು ಹೆಣ್ಣನ್ನರಸಿ ಹೋಗುವುದು ತಪ್ಪಾಗುವುದಿಲ್ಲ. ಆದರೆ ತನ್ನ ಗಂಡನ ರೂಪದಲ್ಲಿಯೇ ಇರುವ ಮತ್ತೊಬ್ಬನಿಗೆ ಸತ್ಯದ ಅರಿವಿಲ್ಲದ ಕಾರಣ ತನ್ನನ್ನು ಒಪ್ಪಿಸಿಕೊಳ್ಳುವುದು ತಪ್ಪಾಗುತ್ತದೆ. ಆದ್ದರಿಂದ ಪಿತೃಪ್ರಧಾನ ವ್ಯವಸ್ಥೆ ಇದರೊಂದಿಗೆ ಮುಖಾಮುಖಿಯಾಗುವುದೂ ಇಲ್ಲ, ಅದನ್ನು ಬಹಿರಂಗವಾಗಿ ಒಪ್ಪಿಕೊಳ್ಳುವುದೂ ಇಲ್ಲ. ಇದರ ಬಗ್ಗೆ ಮೌನವಾಗಿರುವುದು ಇಡೀ ವ್ಯವಸ್ಥೆಯಲ್ಲಿ ಸ್ತ್ರೀ ಸಂವೇದನೆಯ ಅಭಾವವಿರುವುದನ್ನು ಸೂಚಿಸುತ್ತದೆ. ಒಂದು ಜಾನಪದ ಹಿನ್ನೆಲೆಯ ಕಥೆಯೂ ಇಂತಹ ಒಂದು ಉತ್ತರದಲ್ಲಿ ಅಂತ್ಯ ಕಾಣುವುದು ಬಹಳ ಆಶ್ಚರ್ಯಕರ ಮತ್ತು ಶೋಚನೀಯ.

ಮುಂದೊಂದು ದಿನ ಹುತ್ತದೊಳಗಿದ್ದ ನಾಗಪ್ಪ ರಾಣಿ ಹೇಗಿದ್ದಾಳೋ ಎಂದು ನೋಡಲು ಬಂದವನು ಅವಳು ಗಂಡ ಮಗುವಿನ ಜೊತೆ ಸುಖವಾಗಿರುವುದನ್ನು ನೋಡಿ ಅಸಹಾಯಕತೆ, ಕೋಪ, ದ್ವೇಷ, ಅವಮಾನಗಳನ್ನು ಅನುಭವಿಸುತ್ತ, ಕೊನೆಗೆ ಅವಳ ಕೂದಲಿಗಿಂತ ಸಣ್ಣದಾದ ಮಿಡಿನಾಗರದ ರೂಪ ತಾಳಿ ಅವಳ ಕೂದಲ ರಾಶಿಯನ್ನು ಸೇರಿಕೊಳ್ಳುತ್ತಾನೆ. ನಂತರ ಎಚ್ಚರಗೊಂಡ ರಾಣಿಗೆ ತಲೆ ಭಾರವೆನಿಸಿ ಬಾಚಣಿಗೆ ತರಿಸಿ ಕೂದಲನ್ನು ಬಾಚಿಸಿಕೊಂಡಾಗ ಮಿಡಿನಾಗರದ ಶವ ಕೆಳಗೆ ಬೀಳುತ್ತದೆ. ರಾಣಿ ಅದಕ್ಕೆ ತನ್ನ ಮಗನ ಕೈಯಲ್ಲೇ ಅಗ್ನಿ ಸಂಸ್ಕಾರ ಮಾಡಿಸುತ್ತಾಳೆ. ಪ್ರತಿವರ್ಷ ಅದೇ ದಿನ ಮಗನಿಂದ ಪಿಂಡಪ್ರದಾನ ಮಾಡಿಸುವಂತೆ ಗಂಡನಿಗೆ ಆದೇಶಿಸುತ್ತಾಳೆ. ಅಪ್ಪಣ್ಣ ಮೊದಲು ಪ್ರಶ್ನಿಸಿದರೂ ನಂತರ ಎದುರಾಡದೆ ಒಪ್ಪುತ್ತಾನೆ. ರಾಣಿ ಕಣ್ಣೀರು ತುಂಬಿ ನಾಗರಹಾವಿಗೆ ಬಗ್ಗಿ ನಮಸ್ಕರಿಸುತ್ತಾಳೆ. ಆಮೇಲೆ ಬೊಗಸೆಯಲ್ಲಿ ಎತ್ತಿ ಕೆನ್ನೆಗೊತ್ತಿಕೊಳ್ಳುತ್ತಾಳೆ. ಇಲ್ಲೂ ಸಹ ಅಪ್ಪಣ್ಣ ಸಮಸ್ಯೆಯೊಂದಿಗೆ ಮುಖಾಮುಖಿಯಾಗಲು ಸಿದ್ಧನಾಗಿರುವುದಿಲ್ಲ. ನಾಟಕದ ಈ ಘಟನೆಗಳು ರಾಣಿಗೆ ಸತ್ಯದ ಅರಿವು ಇದೆ ಎಂಬುದನ್ನು ಸ್ಪಷ್ಟಪಡಿಸುತ್ತದೆ. ಅವಳೂ ಸಹ ಪವಾಡದ ನೆರಳಲ್ಲಿ ತನಗೆ ಬೇಕಾದ್ದನ್ನು ಮಾಡಿಸುತ್ತಾಳೆ. ನಂತರ ಏಕಾಂತದಲ್ಲಿ ನಾಗಪ್ಪನ ಸಾವಿಗಾಗಿ ಕಣ್ಣೀರಿಡುತ್ತಾಳೆ. ಇಲ್ಲಿ ಕೂಡ ಅಪ್ಪಣ್ಣನ ಉಳಿವಿಗಾಗಿ ನಾಗಪ್ಪನ ಸಾವನ್ನು ಅನಿವಾರ್ಯವೆಂಬಂತೆ ತರಲಾಗಿದೆ. ಇದೂ ಕೂಡ ಪಿತೃಪ್ರಧಾನ ವ್ಯವಸ್ಥೆ ಕಂಡುಕೊಳ್ಳುವ ಉತ್ತರ. ಈ ವ್ಯವಸ್ಥೆಯಲ್ಲಿ ಅಪ್ಪಣ್ಣ ಸಂಬಂಧವಿಟ್ಟುಕೊಂಡಿದ್ದ ಹೆಣ್ಣು ಬದುಕಿದ್ದರೆ ತೊಂದರೆಯೆನ್ನಿಸುವುದಿಲ್ಲ. ಆದರೆ ನಾಗಪ್ಪನ ಸಾವು ಅನಿವಾರ್ಯವಾಗುತ್ತದೆ. ಇದು ಒಂದು ವಿಪರ್ಯಾಸ.

ಚಲನಚಿತ್ರದಲ್ಲಿ ನಾಗದಿವ್ಯದ ನಂತರವೂ ಸಂಶಯ ನಿವಾರಣೆಯಾಗದ ಅಪ್ಪಣ್ಣ ಅಂದು ರಾತ್ರಿ ಹೊತ್ತಿನಲ್ಲಿಯೇ ಮನೆಯೊಳಗೆ ಪ್ರವೇಶಿಸಿದಾಗ ಅಲ್ಲಿ ರಾಣಿ ಮತ್ತು ನಾಗಪ್ಪರ ಸಂಭಾಷಣೆಯನ್ನು ಕೇಳುತ್ತಾನೆ. ರಾಣಿ ಅವನನ್ನು ನೋಡದೆ ಹೋದರೂ ನಾಗಪ್ಪನಿಗೆ ಇವನ ಆಗಮನ ಗೊತ್ತಾಗಿ ಕೂಡಲೇ ಹಾವಿನ ರೂಪದಲ್ಲಿ ಮರೆಯಾಗಿ ಕಿಟಕಿಯಿಂದ ಆಚೆಗೆ ಹೋಗುವಾಗ ಅಪ್ಪಣ್ಣನ ಕಣ್ಣಿಗೆ ಬೀಳುತ್ತಾನೆ. ಕೂಡಲೆ ಅಪ್ಪಣ್ಣ ಹಾವನ್ನು ಹುಡುಕಿಕೊಂಡು ಹುತ್ತದ ಹತ್ತಿರ ಬರುತ್ತಾನೆ. ಅಲ್ಲಿ ನಾಗಪ್ಪ ತಾನೇ ಅಪ್ಪಣ್ಣನ ರೂಪದಲ್ಲಿ ಮುಖಾಮುಖಿಯಾಗುತ್ತಾನೆ ಮತ್ತು ಸತ್ಯವನ್ನು ಒಪ್ಪಿಕೊಂಡು ತಾನು ಏಕೆ ಹೀಗೆ ನಡೆದುಕೊಳ್ಳಬೇಕಾಯಿತೆಂಬುದನ್ನು ಹೇಳಿ ಇನ್ನು ಮುಂದಾದರೂ ಹೆಂಡತಿಯೊಂದಿಗೆ ಚೆನ್ನಾಗಿರುವಂತೆ ಬುದ್ಧಿ ಹೇಳುತ್ತಾನೆ. ಆದರೆ ಅಪ್ಪಣ್ಣ ಅವನೊಂದಿಗೆ ಸೆಣಸಾಟಕ್ಕೆ ನಿಲ್ಲುತ್ತಾನೆ. ನಾಗಪ್ಪ ಅವನನ್ನು ಕೊಲ್ಲದೆ ಬಿಟ್ಟರೂ ಅಪ್ಪಣ್ಣ ಅವನನ್ನು ಎತ್ತಿ ಬೆಂಕಿಯಲ್ಲಿ ಬಿಸಾಡುತ್ತಾನೆ. ಅಲ್ಲಿಂದ ಮುಂದಕ್ಕೆ ರಾಣಿಯೊಂದಿಗೆ ಸುಖವಾಗಿರುತ್ತಾನೆ. ರಾಣಿಗಂತೂ ಇದ್ಯಾವುದರ ಅರಿವೂ ಇರುವುದಿಲ್ಲ. ಅವಳಿಗೆ ನಾಗಪ್ಪ ಮತ್ತು ಅಪ್ಪಣ್ಣ ಇಬ್ಬರೂ ಬೇರೆ ಎನ್ನುವ ವಿಷಯವೇ ತಿಳಿಯದಷ್ಟು 'ಮುಗ್ಧತೆ'. ಇಂತಹ ಒಂದು ಪರಿಹಾರ ನಾಟಕದಲ್ಲಿರುವುದಕ್ಕಿಂತಲೂ ಹೆಚ್ಚು ಅಪಾಯಕಾರಿಯಾದದ್ದು ಮತ್ತು ಇನ್ನೂ ಲೆಕ್ಕಾಚಾರವಾದದ್ದು ಎಂದು ನನ್ನ ಅನಿಸಿಕೆ. ಏಕೆಂದರೆ, ಇಲ್ಲಿ ರಾಣಿಗೆ ನಿಜಸ್ಥಿತಿಯೂ ಗೊತ್ತಿಲ್ಲ ಮತ್ತು ಅಪ್ಪಣ್ಣನ ಅಥವಾ ಇಡೀ ವ್ಯವಸ್ಥೆಯ ಕ್ರೌರ್ಯವೂ ಗೊತ್ತಾಗುವುದಿಲ್ಲ. ಆದರೆ ಈ ಘಟನೆಯ ನಂತರ ಅಪ್ಪಣ್ಣ ತನ್ನ ಜೊತೆಗೆ ಪ್ರೀತಿಯಿಂದ ನಡೆದುಕೊಳ್ಳುತ್ತಾನೆ ಎಂಬುದರಲ್ಲೇ ತೃಪ್ತಿ ಕಾಣುತ್ತಾಳೆ.

ಆದ್ದರಿಂದ ಎರಡೂ ಕೃತಿಗಳು ಪಿತೃಪ್ರಧಾನ ವ್ಯವಸ್ಥೆಯ ಎರಡು ಮಾದರಿಗಳಲ್ಲಿ ಉತ್ತರಗಳನ್ನು ಕಂಡುಕೊಳ್ಳಲು ಪ್ರಯತ್ನಿಸಿವೆ. ನಾಟಕದಲ್ಲಿ ವಾಸ್ತವತೆಯ ಅರಿವಿದ್ದೂ ರಾಣಿ ಮೌನವಹಿಸಿದ್ದರೆ ಚಲನಚಿತ್ರದಲ್ಲಿ ಮುಗ್ಧತೆಯ ಕಾರಣದಿಂದ ಮೌನ. ಒಂದು ಜಾನಪದ ಕಥಾವಸ್ತುವನ್ನು ಇಟ್ಟುಕೊಂಡು ಕೃತಿಯನ್ನು ನಿರ್ಮಿಸುವಾಗಲೂ ಸಹ ಸ್ತ್ರೀ ಸಂವೇದನಾತ್ಮಕ ಪರ್ಯಾಯ ಮಾದರಿಯೊಂದನ್ನು ಕಂಡುಕೊಳ್ಳಲು ಸಾಧ್ಯವಾಗದೆ ಇರುವುದು ಕಂಡುಬರುತ್ತದೆ. ನಾಟಕದಲ್ಲಿ ರಾಣಿಯ ಮೌನ ಮತ್ತು ಚಿತ್ರದಲ್ಲಿ ಅವಳ ಮುಗ್ಧತೆ ಒಂದು ಪ್ರಮುಖವಾದ ಸ್ತ್ರೀ ದೃಷ್ಟಿಕೋನವೊಂದನ್ನು ನಮ್ಮಿಂದ ಮರೆಯಾಗಿಸುತ್ತದೆ. ಸಿನಿಮಾದಲ್ಲಿ ರಾಣಿಯ ಬಗ್ಗೆ ಸಂವೇದನಾಶೀಲವಾಗಿದ್ದ ಕುರುಡವ್ವನ ಮೂಲಕ ಇದು ಸಾಧ್ಯವಾಗಬಹುದಾಗಿತ್ತು. ಆದರೆ ಕುರುಡವ್ವನಿಗೂ ಇದರ ಅಂತ್ಯ ತಿಳಿಯಲಾಗದಂತಹ ಪರಿಸ್ಥಿತಿಯಲ್ಲಿ ಕಥೆ ಮುಂದುವರಿಯುತ್ತದೆ. ಒಂದು ವೇಳೆ ತಿಳಿದಿದ್ದರೂ ವ್ಯವಸ್ಥೆಯ ಒಂದು ಭಾಗವೇ ಆಗಿರುವ ಕುರುಡವ್ವ ಇದಕ್ಕಿಂತ ಭಿನ್ನವಾಗಿ ಯೋಚಿಸುತ್ತಿದ್ದಳೇನೋ ಗೊತ್ತಿಲ್ಲ. ಇನ್ನೊಂದು ಅಂಶವೆಂದರೆ ಸಿನಿಮಾದಲ್ಲಿ ಎಲ್ಲವನ್ನೂ ವಾಸ್ತವಿಕ ನೆಲೆಯಲ್ಲಿ ನೋಡಲು ಪ್ರಯತ್ನಿಸುವ ನಿರ್ದೇಶಕರು ಅಲ್ಲೂ ನಾಗದಿವ್ಯಕ್ಕೆ, ಅದರಿಂದಾಗುವ ಪವಾಡಕ್ಕೆ ಯಾಕೆ ಮೊರೆಹೋಗುತ್ತಾರೆ ? ಎಂಬುದು ಮತ್ತೊಂದು ಪ್ರಶ್ನೆ. ಜಾನಪದದ ವಿವಿಧ ಕಥಾನಕಗಳನ್ನು ಕಂಡುಕೊಂಡಾಗ ಬಹುಶಃ ಒಂದು ವಿಶಿಷ್ಟವಾದ ಉತ್ತರ ಇದಕ್ಕೆಲ್ಲ ಸಿಗಲು ಸಾಧ್ಯವಾಗಬಹುದು.

**ಡಾ|| ಆರ್. ಶೋಭಾ**
ಸಂಸ್ಕೃತ ಸಹ ಪ್ರಾಧ್ಯಾಪಕರು
ಮಹಾರಾಣಿ ಮಹಿಳಾ ಕಲಾ ವಾಣಿಜ್ಯ ಮತ್ತು ನಿರ್ವಹಣಾ ಕಾಲೇಜು
ಬೆಂಗಳೂರು – ೫೬೦ ೦೦೧



# ರ್ಷ - ಕಿರಣ

- ಸಾನ್ವಿ ಪಿ.


ಮೌನವೇ ಬಂಗಾರ
ಕಲ್ಬುರ್ಗಿ ಹತ್ಯೆ
ಕುಲಕರ್ಣಿ ಮುಖಕ್ಕೆ ಮಸಿ
ದಲಿತರ ಕೊಲೆ
ದಾದ್ರಿಯಲ್ಲಿ ಹತ್ಯೆ


ಜೈ ಮಸಿ ಸೇನೆ
ಮಸಿ ಬಳಿಯುವುದು ನಮ್ಮ ಹಕ್ಕು, ಅದು ದೇಶಾಭಿಮಾನದ ಸಂಕೇತ
– ಉದ್ದವ್ ಠಾಕ್ರೆ


ಎತ್ತಿನ ಹೋಳಿ
ಬೇಡ ಬೇಡ
ಬೇಕು ಬೇಕು
ಕಟೀಲುಗಾಳ

# ಪ್ರಾಚೀನ ಕರ್ನಾಟಕದ ಬಂದರುಗಳು ಮತ್ತು ವ್ಯಾಪಾರೀ ಸಂಘಗಳ ಚಟುವಟಿಕೆ

**ಸುರೇಶ ತಾಂಡೇಲ**

**ಕನ್ನಡ ಕರಾವಳಿ ಮತ್ತು ವ್ಯಾಪಾರ**

ಪ್ರಾಚೀನ ಕರ್ನಾಟಕದ ಬಂದರುಗಳ ಮೂಲಕ ನಡೆದ ಕಡಲೋತ್ತರ ವ್ಯಾಪಾರ ಭಾರತದ ಚರಿತ್ರೆಯಲ್ಲಿ ಒಂದು ಪ್ರಮುಖ ಮೈಲುಗಲ್ಲು. ಕರ್ನಾಟಕದ ತೀರ ಪ್ರದೇಶದ ಭೌಗೋಳಿಕ ಲಕ್ಷಣವೇ ಕಡಲ ಮೂಲಕ ಹೊರದೇಶಗಳೊಡನೆ ವ್ಯಾಪಾರಕ್ಕೆ ಹೇಳಿ ಮಾಡಿಸಿದಂತಿದೆ. ಪ್ರಸ್ತುತ ಕರ್ನಾಟಕದಲ್ಲಿ ಇರುವ ಕಾರವಾರದಿಂದ ಮಂಗಳೂರಿನವರೆಗಿನ ತೀರ ಪ್ರದೇಶ ಪ್ರಾಚೀನ ಕಾಲದಿಂದಲೂ ಕಡಲೋತ್ತರ ವ್ಯಾಪಾರಕ್ಕೆ ಹೆಬ್ಬಾಗಿಲಿನಂತೆ ಸಹಕರಿಸಿದೆ. ಈ ಬಂದರುಗಳಿಗೆ ನಿಸರ್ಗ ಅಪೂರ್ವವಾದ ಸೌಲಭ್ಯಗಳನ್ನು ನೀಡಿ ಸಹಕರಿಸಿದೆ. ತೀರದ ಪೂರ್ವದೆಡೆಗೆ ಎತ್ತರವಾಗಿ ನಿಂತಿರುವ ಪಶ್ಚಿಮ ಘಟ್ಟಗಳು ಅಲ್ಲಲ್ಲಿ ಕಡಲಿಗಿಳಿದು, ಕುದುರೆ ಲಾಳಾಕಾರದಲ್ಲಿ ಬಾಗಿವೆ. ಇದರಿಂದ ತೀರ ಪ್ರದೇಶದಲ್ಲಿ ಎಲ್ಲ ಋತುವಿನಲ್ಲಿ ೧೮ರಿಂದ ೨೦ ಅಡಿಗಳಷ್ಟು ನೀರು ನಿಂತಿರುತ್ತದೆ. ಪರ್ವತಗಳೆಡೆಗೆ ಬೀಸಿ ಬರುವ ಕಡಲ ಗಾಳಿಯು ಸರಾಗವಾಗಿ ಬೆಟ್ಟದೆಡೆಯಲ್ಲಿ ಹಾದುಹೋಗುವುದರಿಂದ ಲಂಗರು ಮಾಡಿದ ನೌಕೆಗಳಿಗೆ ಯಾವುದೇ ಅಪಾಯ ಉಂಟಾಗದು. ಕೆಂಪು ಕಲ್ಲಿನ ತಳ ಹೊಂದಿರುವುದು, ತೀರದ ಬಳಿಯಲ್ಲಿ ಕಡಲಲ್ಲಿ ದ್ವೀಪಗಳಿರುವುದು ತೀರ ಪ್ರದೇಶವನ್ನು ಹೂಳಿನಿಂದ ರಕ್ಷಿಸಿದೆ. ಇವುಗಳೊಂದಿಗೆ ವಿಶಾಲ ಪ್ರವೇಶ ಮಾರ್ಗಗಳಿರುವುದರಿಂದ ಏಕಕಾಲದಲ್ಲಿ ಹಲವು ನೌಕೆಗಳ ಪ್ರವೇಶ ಹಾಗೂ ನಿರ್ಗಮನ ಸಾಧ್ಯವಾಗಿದೆ. ಪಶ್ಚಿಮ ಘಟ್ಟದ ನಡುವಿನ ಕೊರಕಲುಗಳಿಂದ ಉಂಟಾಗಿರುವ ಕಣಿವೆ ಮಾರ್ಗ ಹಿನ್ನಾಡಿಗೆ ಸಂಪರ್ಕ ಕಲ್ಪಿಸುವಂತೆ, ಪಶ್ಚಿಮ ಘಟ್ಟಗಳಲ್ಲಿ ಜನಿಸಿ ಕಡಲೆಡೆ ಹರಿಯುವ ನದಿಗಳು ಬಂದರಿಗೆ ಹಿನ್ನಾಡಿನ ಸರಕನ್ನು, ಸಿದ್ಧವಸ್ತುಗಳನ್ನು ತಲುಪಿಸಲು ಸಹಕಾರಿಯಾಗಿವೆ. ಇವುಗಳೆಲ್ಲದರಿಂದ ಗುಜರಾತಿನ ಬ್ರಗ್‌ಕಛ್ ಹಾಗೂ ಕೇರಳದ ಕ್ವಿಲಾನ ಬಂದರುಗಳ ನಡುವೆ ಸಂಪರ್ಕ ಬಂದರುಗಳಾಗಿ ಕರ್ನಾಟಕದ ಬಂದರುಗಳಿದ್ದವು. ಮುಖ್ಯವಾಗಿ ಕಾರವಾರ, ಅಂಕೋಲಾ, ಕುಮಟಾ, ಮಿರ್ಜಾನ, ತದಡಿ, ಹೊನ್ನಾವರ, ಭಟ್ಕಳ, ಬೈಂದೂರು, ಕುಂದಾಪುರ, ಬಸರೂರು, ಬಾರ್ಕೂರು ಮತ್ತು ಮಂಗಳೂರು ಪ್ರಮುಖ ರೇವು ಪಟ್ಟಣಗಳಾಗಿದ್ದವು. ಆದರೆ ಇವುಗಳ ನಡುವೆ ಇನ್ನೂ ಅನೇಕ ಸ್ಥಳಗಳು ದೊಡ್ಡ, ದೊಡ್ಡ ನೌಕೆಗಳನ್ನು ಲಂಗರು ಮಾಡಲು ಸಹಾಯಕವಾಗಿದ್ದವು. ಈ ಎಲ್ಲಾ ಬಂದರುಗಳಿಗೆ ಹಿನ್ನಾಡಾಗಿ ಉತ್ತರದಲ್ಲಿ ದಖನ್‌ವರೆಗಿನ ವಿಶಾಲ ಪ್ರದೇಶ, ಆಂಧ್ರದಲ್ಲಿ ಅನಂತಪುರ, ಪೆನಗೊಂಡ, ಕರ್ನೂಲು, ಕಡಪವರೆಗೆ, ತಮಿಳುನಾಡಿನಲ್ಲಿ ಧರ್ಮಾವರಂ, ಕೊಯಮತ್ತೂರು, ಸೇಲಂ ಜಿಲ್ಲೆಗಳ ಪ್ರದೇಶಗಳಿದ್ದವು.

ಕರಾವಳಿಯಲ್ಲಿ ಪ್ರಾಚೀನ ಕಾಲದಿಂದ ಕ್ರಿ. ಶ. ೧೮೦೦ರವರೆಗೆ ಸಕ್ರಿಯವಾಗಿದ್ದ ಪ್ರಮುಖ ವ್ಯಾಪಾರಿ ಸಂಘಗಳೆಂದರೆ ಸೆಟ್ಟಿ, ಸೆಟ್ಟಗುತ್ತ, ನಕರ, ಮುಮ್ಮರಿ ದಂಡ, ವಡ್ಡ ವ್ಯವಹಾರಿ, ಗಾವಂತೆ, ಐಹೊಳೆ ಐನೂರ್ವರ್, ಗಾತ್ರಿಗ, ಸೆಟ್ಟಿಕಾರ, ಹಲರು, ಏಳಮೆ, ಸಾಲಿಕೆಯ ಬಲ್ಲಾಳರು ಮುಂತಾದವರು. ಇವರೆಲ್ಲ ದೇಶೀಯರಾಗಿದ್ದರು. ಹಂಜಮಾನರು, ನಖರಹಂಜಮಾನರು ವಿದೇಶೀಯರಾಗಿದ್ದರು. ನಾನಾ ದೇಶೀಯರಲ್ಲಿ ಸ್ಥಳೀಯರೂ ಇರುತ್ತಿದ್ದರು. ಅವರು ಮಧ್ಯವರ್ತಿಗಳಂತೆ ಕೆಲಸ ಮಾಡುತ್ತಿದ್ದರು. ದೇಶದೊಳಗಿನ ವಿವಿಧ ಸ್ಥಳಗಳಿಗೆ ಸಂಪರ್ಕ ಕಲ್ಪಿಸುವ ಕೆಲಸ ಮಾಡುತ್ತಿದ್ದರು. ಈ ವ್ಯಾಪಾರಿ ಸಂಘಗಳು ವಸ್ತುಗಳನ್ನು ಕೊಂಡುಕೊಳ್ಳುವುದು, ವಿದೇಶಿ ವ್ಯಾಪಾರಿಗಳಿಗೆ ಮಾರುವುದು, ಸರಕುಗಳನ್ನು ಸಂಗ್ರಹಿಸಿ ಸಿದ್ಧವಸ್ತುಗಳಾಗಿ ಮಾರ್ಪಡಿಸಿ ಮಾರುವುದು ಮುಖ್ಯ ವೃತ್ತಿಯಾಗಿಸಿಕೊಂಡಿದ್ದರು.

"ಐಹೊಳೆ ಐನೂರ್ವರ್" ಎಂಬ ವ್ಯಾಪಾರಿ ಸಂಘವು ಅತೀ ಪ್ರಾಚೀನ ವ್ಯಾಪಾರಿ ಸಂಘವಾಗಿದೆ. ಇವರು ವರ್ತಕ ಹಾಗೂ ವೃತ್ತಿ ಸಂಘದ ಒಕ್ಕೂಟವಾಗಿದ್ದಿರಬಹುದು. ಇವರು ವ್ಯಾಪಾರಕ್ಕಾಗಿ ಬಹುದೂರದವರೆಗೂ ಹೋಗುತ್ತಿದ್ದರು. ಪ್ರಸ್ತುತದ ಕರ್ನಾಟಕದ ಮೇರೆ ಮೀರಿ ಇವರ ಪ್ರಭಾವವಿತ್ತು. "ವೀರಬಣಂಜು" ಎಂಬ ಸಂಘವು ವ್ಯಾಪಾರಿಗಳಾಗಿದ್ದಂತೆ ಸೈನಿಕರೂ ಆಗಿದ್ದರು. ಇವರು ಕಡಲು ಮತ್ತು ಭೂ ಮಾರ್ಗಗಳಲ್ಲಿ ಉಂಟಾಗುತ್ತಿದ್ದ ದರೋಡೆಯಿಂದ ರಕ್ಷಣೆ ನೀಡುವ ಶಸ್ತ್ರಾಧಾರಿಗಳಾಗಿದ್ದರು. 'ನಕರ' ಸಂಘಗಳು ಬಹುಪ್ರಸಿದ್ಧ ವ್ಯಾಪಾರಿ ಸಂಘವಾಗಿತ್ತು. ಇವರು ನಗರ–



ಪಟ್ಟಣದಂತಹ ಪ್ರದೇಶಗಳಲ್ಲಿ ವ್ಯಾಪಾರ ನಡೆಸುತ್ತಿದ್ದರು. ಇವರನ್ನು ಕೆಲವು ಶಾಸನಗಳು 'ಮುಮ್ಮರಿದಂಡ' ಎಂದೂ ಕರೆದಿವೆ. ಬಂದರು ಪ್ರದೇಶವಲ್ಲದೆ ಉತ್ತರ ಕರ್ನಾಟಕದಲ್ಲೂ ಇವರ ವ್ಯಾಪಾರ–ವಹಿವಾಟು ವಿಶೇಷವಾಗಿತ್ತು. ಇವರ ಉಲ್ಲೇಖಗಳು ಕ್ರಿ.ಶ. ೨೭೫ರಿಂದ ಕ್ರಿ.ಶ. ೧೪೪೬ರವರೆಗೂ ದೊರೆಯುತ್ತವೆ. ಬಹು ಪ್ರಬಲರಾಗಿದ್ದ ಇವರ ಹೆಸರಲ್ಲಿ ಬಸರೂರಿನಲ್ಲಿ 'ನಖರೇಶ್ವರ', ಮಂಗಳೂರಿನಲ್ಲಿ 'ನಳರೇಶ್ವರ' ಹಾಗೂ ಚಂದಾವರದಲ್ಲಿ ನಕರ ಬಸದಿಯಿದ್ದುವೆಂದು ತಿಳಿದುಬರುತ್ತದೆ. ನಖರೇಶ್ವರಕ್ಕೆ ಆಳೂಪ ರಾಜ ಕವಿ ಆಳೂಪೇಂದ್ರ, ವೀರಕುಲಶೇಖರ, ನಾಗದೇವ ಹಾಗೂ ವಿಜಯನಗರದ ಇಮ್ಮಡಿ ಹರಿಹರರಿಂದ ಕ್ರಿ.ಶ. ೧೧೫೪ರಿಂದ ಕ್ರಿ.ಶ. ೧೪೦೦ರವರೆಗೆ ದಾನದತ್ತಿ ದೊರೆತಿತ್ತು. ಎಳಮೆ ಅಥವಾ ಎಳಮೆಗೊಳಗಾದವರು ಎಂಬ ವ್ಯಾಪಾರಿ ವರ್ಗವು ವ್ಯಾಪಾರದೊಂದಿಗೆ ಧಾರ್ಮಿಕ ಚಟುವಟಿಕೆಗಳ ವ್ಯವಸ್ಥಾಪಕರಾಗಿದ್ದರು. "ಸಾಲಿಕೆಯ ಬಲ್ಲಾಳ"ರು ವ್ಯಾಪಾರಿಗಳಾಗಿದ್ದರಲ್ಲದೆ, 'ಬಲ್ಲಾಳರೂ' ಆಗಿದ್ದರು. ಅಂದರೆ ಶಸ್ತ್ರಾಸ್ತ್ರಗಳನ್ನು ಬಳಸುವ ವೀರಕಲಿಗಳಾಗಿದ್ದರು. ವ್ಯಾಪಾರದಲ್ಲಿ ಶಕ್ತಿಪ್ರದರ್ಶನವೂ ಇವರಿಂದ ನಡೆಯುತ್ತಿತ್ತು. ವ್ಯಾಪಾರಿಗಳ, ವ್ಯಾಪಾರಿ ಮಾರ್ಗಗಳ ರಕ್ಷಣೆಯನ್ನು ಮಾಡುತ್ತಿದ್ದರು. ಸೆಟ್ಟಿ, ಸೆಟ್ಟಿಗುತ್ತ, ಹಲರು, ವಡ್ಡ ವ್ಯವಹಾರಿಗಳು, ಗವರೆ, ಗಾತ್ರಿಗ, ಎಲೆಯ ಬೋಜಂಗರು, ತಂಬುಲಿಗೆ ಸಾಸಿರ್ವರು, ಉಗುರು ಮುನ್ನೂರ್ವರು ಮುಂತಾದ ವ್ಯಾಪಾರಿ ಸಂಘಗಳಿದ್ದು, ತೋಟದ ಉತ್ಪನ್ನಗಳು ಹಾಗೂ ಇತರ ವೃತ್ತಿ ಸಂಘಗಳ ಉತ್ಪಾದನೆಗಳನ್ನು ಮಾರಾಟ ಮಾಡುತ್ತಿದ್ದರು.

ಈ ವ್ಯಾಪಾರಿ ಬಣಗಳು ಜೈನ, ಶೈವ, ವೈಷ್ಣವರಾಗಿದ್ದರು. ಶೈವರಲ್ಲಿ ಕಾಳಾಮುಖ ಪಂಥವೂ ಪ್ರಚಲಿತವಾಗಿತ್ತು. ಶಾಕ್ತರು, ಗಾಣಪತ್ಯರೂ ಈ ವರ್ಗದಲ್ಲಿದ್ದರು. ಆರಂಭದಲ್ಲಿ ಬೌದ್ಧ ಅನುಯಾಯಿಗಳೂ ಇದ್ದರೆಂದು ತಿಳಿದುಬರುತ್ತದೆ. ವಿದೇಶಿ ವ್ಯಾಪಾರಿ ವರ್ಗಗಳಲ್ಲಿ ಮುಸ್ಲಿಂ ಧರ್ಮದ ಅನುಯಾಯಿಗಳು, ಕ್ರೈಸ್ತರೂ, ಚೀನಿಯರೂ ರೋಮನ್ನರೂ ಇದ್ದರು.

ಕಡಲೋತ್ತರ ವ್ಯಾಪಾರವು ತಂದಿಡುತ್ತಿದ್ದ ಅಪಾರ ಲಾಭ, ಜಾಗತಿಕ ಗೌರವಗಳು ಪ್ರಭುತ್ವಕ್ಕೆ ವ್ಯಾಪಾರದಲ್ಲಿ ಸಕ್ರಿಯವಾಗಲು ಹುರಿದುಂಬಿಸಿದ್ದುವು. ಆದ್ದರಿಂದಲೇ ಬಂದರುಗಳ ಮೇಲೆ ಹತೋಟಿ ಸಾಧಿಸಲು ರಾಜರುಗಳು ಇನ್ನಿಲ್ಲದ ಪೈಪೋಟಿ ನಡೆಸಿದ್ದರು. ಇದರ ಇನ್ನೊಂದು ರೂಪವಾಗಿ ಅರಮನೆಯೇ ವ್ಯಾಪಾರಿಗಳನ್ನು ಪೋಷಿಸಿ ಕಡಲೋತ್ತರ ವ್ಯಾಪಾರಕ್ಕೆ ಕಳಿಸುತ್ತಿತ್ತು. ಇದೆಲ್ಲದರ ಮೊತ್ತವಾಗಿ ಶಾತವಾಹನರು, ವರ್ತಕರಾಗಿದ್ದವರು ರಾಜಪ್ರಭುತ್ವವನ್ನು ಸ್ಥಾಪಿಸಿದ್ದು ಕಂಡುಬರುತ್ತದೆ. ಗುಜರಾತಿನಿಂದ ಮಂಗಳೂರಿನವರೆಗಿನ ಬಂದರುಗಳ ಮೇಲೆ ಪ್ರಭುತ್ವ ಸಾಧಿಸಿದಂತೆ ಪೂರ್ವ ಕರಾವಳಿಯ ಆಂಧ್ರಪ್ರದೇಶದ ಬಂದರುಗಳ ಒಡೆಯರಾಗಿದ್ದರು. ಮೌರ್ಯರ ನಂತರ ಪ್ರಭುತ್ವ ನಡೆಸಿದ ಖಾರವೇಲ, ಶಾತವಾಹನರಲ್ಲಿ ಮೈತ್ರಿ ಸಾಧಿಸಿದ್ದರೆ, ತಮಿಳುನಾಡಿನ ಮಚಲೀಪಟ್ಟಣವನ್ನು ಗೆದ್ದಿದ್ದನು. ಇಂತಹುದೇ ಬಂದರುಗಳನ್ನು ವಶಪಡಿಸಿಕೊಳ್ಳುವ ಪ್ರಯತ್ನವನ್ನು ಆ ತರುವಾಯ ಕರ್ನಾಟಕವನ್ನು ಆಳಿದ ಎಲ್ಲ ರಾಜಮನೆತನಗಳು ಮಾಡಿದ್ದವು. ಚಾಲುಕ್ಯರಿಗೆ ರಿಡಿ ಇತ್ಯಾದಿ ದ್ವೀಪಗಳಲ್ಲಿ ವಿಜಯ ಸಾಧಿಸಲು, ರಾಷ್ಟ್ರಕೂಟರಿಗೆ ವಿದೇಶಿ ಅರಸರೊಂದಿಗೆ ರಾಜತಾಂತ್ರಿಕ ಮೈತ್ರಿ ಹೊಂದಲು ಹಾಗೂ ಹೊಯ್ಸಳರಿಗೆ ಉತ್ತರದಲ್ಲಿ ಕಳೆದುಕೊಂಡ ಸಂಪತ್ತು ಮರಳಿ ಗಳಿಸಿಕೊಳ್ಳಲು ಕರ್ನಾಟಕದ ಬಂದರುಗಳು ಸಹಾಯ ಮಾಡಿದವು. ವಿಜಯನಗರ ಸಾಮ್ರಾಜ್ಯ ಆರಂಭದಿಂದಲೇ ಕಡಲೋತ್ತರ ವ್ಯಾಪಾರ ಮಾಡಿ ಯುದ್ಧಾಸ್ತ್ರ, ಕುದುರೆಗಳನ್ನು ತರಿಸಿಕೊಳ್ಳಲಾರಂಭಿಸಿತು.

ಮುಂದೆ ಐರೋಪ್ಯ ವ್ಯಾಪಾರಿಗಳು ಕಾನ್‌ಸ್ಟಂಟಿನೋಪಲ್ ನಗರದ ಪತನದಿಂದ ಕಂಗಾಲಾಗಿ ಪರ್ಷಿಯನ್–ಅರಬ್–ವೆನಿಸ್ ನಗರಗಳ ಮಧ್ಯವರ್ತಿ ವರ್ತಕರಿಂದ ಪಾರಾಗಲು ಮರೆತುಹೋಗಿದ್ದ ಕಡಲ ಮಾರ್ಗವನ್ನು ಮತ್ತೆ ಕಂಡುಹಿಡಿದರು. ಈ ಮೂಲಕ ಎಂದೂ ಕಂಡರಿಯದ ಸಂಪತ್ತನ್ನು ದಕ್ಕಿಸಿಕೊಂಡರು. ಮೊಗೆದಷ್ಟೂ ಸಿಗುತ್ತಿದ್ದ ಸಂಪತ್ತನ್ನು ಶಾಶ್ವತವಾಗಿ ತಮ್ಮದಾಗಿಸಿಕೊಳ್ಳುವ ಪ್ರಯತ್ನದ ಮೊದಲ ಹೆಜ್ಜೆಯಾಗಿ ಭಾರತವನ್ನು ತಮ್ಮ ವಸಾಹತನ್ನಾಗಿ ಮಾಡಿಕೊಂಡರು. ಭಾರತಕ್ಕೆ ಸಾಮ್ರಾಜ್ಯಶಾಹಿ ನೊಗವನ್ನು ಕಿತ್ತೆಸೆದು ಸ್ವತಂತ್ರರಾಗಲು ಶತಮಾನಗಳೇ ಹಿಡಿದವು. ಇದೀಗ ನವಸಾಮ್ರಾಜ್ಯಶಾಹಿಯ ಬಹುರಾಷ್ಟ್ರೀಯ ಕಂಪನಿಗಳ ರೂಪದಲ್ಲಿ ತೃತೀಯ ಜಗತ್ತಿನ ದೇಶಗಳನ್ನು ಮುತ್ತುತ್ತಿದೆ!

**ಸುರೇಶ ತಾಂಡೇಲ**
ಮಠದಕೇರಿ, ಹೊನ್ನಾವರ – ೫೮೧ ೩೩೪




# ಗೆರೆ

ಹೇಗೋ ಏನೋ
ಅದೃಶ್ಯ ಗಳಿಗೆಯಲ್ಲಿ
ಹುಟ್ಟಿಕೊಂಡುಬಿಟ್ಟಿದೆಯಲ್ಲ
ನನ್ನ–ನಿನ್ನ ನಡುವಲ್ಲೊಂದು
ತೆಳು ಗೆರೆ.

ನೀನೂ ಎಳೆಯಲಿಲ್ಲ
ನಾನಂತೂ ಮೊದಲೇ ಅಲ್ಲ
ಕಂಡೂ ಕಾಣದಂತಿರುವ
ಎಳೆ ಗೆರೆ.

ಈಗ ಇಂಚಿಂಚೇ ಬೆಳೆಯುತ್ತಿದೆ
ಎಳೆಯದ ಮೇಲೆ ಅಳಿಸುವುದೇತಕೆ?
ಇಬ್ಬರಿಗೂ ಅಸಡ್ಡೆ
ಗೆರೆಯ ಮೇಲೆ.

ಬೆಳೆದೂ ಬೆಳೆದೂ
ಮಿತಿಮೀರಿ ಗೆರೆಯೇ
ಗೋಡೆಯಾದರೇ...?
ನನಗೆ–ನೀನು ನಿನಗೆ–ನಾನು
ಕಾಣಿಸುವುದಾದರೂ ಎಂತು?

ಕೆಲವು ಗೆರೆಗಳು ಒಂದನ್ನೊಂದು
ಕೂಡಿಸುತ್ತದೆ
ಮತ್ತೆ ಕೆಲವು ಕಳೆಯುತ್ತವೆ
ಕೂಡ... ತೀರಾ ನಿಗಾ ಬೇಕು
ಇಲ್ಲಿ. ಬದುಕು ಸೂಕ್ಷ್ಮ ಹಾಳೆ.

ಸದ್ಯ! ಈಗಲಾದರೂ ಕಂಡಿತಲ್ಲ
ಬಿಗುಮಾನ ಬಿಟ್ಟು ಬಾ
ವಿನಾಕಾರಣ ಹುಟ್ಟಿಕೊಂಡಿದೆ
ಅಳಿಸಿಬಿಡೋಣ
ಆ ನಡುವಲ್ಲಿ ಪಾರದರ್ಶಕ ಕನ್ನಡಿ
ತೂಗಿ ಬಿಡೋಣ.

**ಸ್ಮಿತಾ ಅಮೃತರಾಜ್. ಸಂಪಾಜೆ**
'ಹಸಿರು', ಅಂಚೆ : ಬಾಲಂಬಿ, ಚೆಂಬು ಗ್ರಾಮ, ಮಡಿಕೇರಿ ತಾಲೂಕು ಕೊಡಗು – ೫೭೪ ೨೩೪



ಮೂರ್ನಾಡ್ ರಾಮಸ್ವಾಮಿ

# ಅಸ್ಪೃಶ್ಯತೆ ಮತ್ತು ಜಾತಿ ವ್ಯವಸ್ಥೆ

ಮುಸ್ಲಿಂ ಹಾಗೂ ಕ್ರೈಸ್ತ ಧರ್ಮದ ಆಚರಣೆಯಲ್ಲಿಲ್ಲದ ಸಾಮಾಜಿಕ ಬಹಿಷ್ಕಾರದಂಥ ಆಚರಣೆಗೆ ಹಿಂದೂ ಧರ್ಮ ಸ್ವಯಂ ಒಪ್ಪಿಗೆ ನೀಡಿರುವಾಗ ದಲಿತರ ಮೇಲಿನ ಅತ್ಯಾಚಾರ, ಶೋಷಣೆ, ಬೆತ್ತಲೆ ಸೇವೆ, ಮುಂತಾದವುಗಳನ್ನು ಪೂರ್ಣವಾಗಿ ತಡೆಯಲು ಅಸಾಧ್ಯವಾಗಿದೆ. ಏಕೆಂದರೆ, ಧರ್ಮದೊಂದಿಗೆ ಕಲಿತ ವ್ಯವಸ್ಥೆಯ ಬಹುತೇಕ ಎಲ್ಲಾ ಆಯಾಮಗಳು ಅಸ್ಪೃಶ್ಯರ ವಿರುದ್ಧವಾಗಿಯೇ ಕೆಲಸ ಮಾಡಿವೆ ಎಂಬುದಕ್ಕೆ ಬಹಳಷ್ಟು ನಿದರ್ಶನಗಳಿವೆ.

ಸಾವಿರಾರು ವರ್ಷಗಳಿಂದ ವೈದಿಕ ಹಿಂದೂ ಧರ್ಮ ತನ್ನ ಬಾಲವನ್ನಾಗಿ ಉಳಿಸಿಕೊಂಡು ಬಂದಿರುವ ಅಸ್ಪೃಶ್ಯರನ್ನು ವಿಕೃತವಾಗಿ ಹಿಂಸಿಸಿಕೊಂಡು ಬಂದಿದೆ. ಈ ಚರಿತ್ರೆ ಮೇಲ್ಜಾತಿಯದ್ದು. ಇದೇ ಮೇಲ್ಜಾತಿಯ ಗಣ್ಯರು ಅಸ್ಪೃಶ್ಯತಾ ಪದ್ಧತಿಯನ್ನು ಕತ್ತರಿಸಿ ಬಿಸಾಕುವ ಬಗ್ಗೆ ಹಿಂದಿನಿಂದಲೂ ಆಗಾಗ್ಗೆ ಬಹಳಷ್ಟು ಬಾರಿ ಮಾತಾಡಿದ್ದಾರೆ. ಭಕ್ತಿಪಂಥವು ಈ ಬಗ್ಗೆ ಗೋಣಗಿತ್ತು ಕೂಡ. ದುರಂತವೆಂದರೆ, ಅಸ್ಪೃಶ್ಯ ಜಾತಿ ಉಳಿಯಲಿ ...ಎಂಬುದು ಜಾತಿ ಪದ್ಧತಿಯ ಒಳ ತತ್ವವೇ ಆಗಿದೆ. ಈ ತತ್ವವು ಅಂಬೇಡ್ಕರ್ ಜಯಂತಿಯ ಸಂದರ್ಭದಲ್ಲಿ ಒಂದಿಷ್ಟು ಸಡಿಲಗೊಂಡು ನಂತರ ಮಾಮೂಲಿ ಕ್ರಿಯಾ ಸ್ಥಿತಿಗೆ ಮರಳುತ್ತದೆ.

ಹಿಂದೂ ಧರ್ಮದ ಜಾತಿ ಪದ್ಧತಿಯ ಅಡಿಪಾಯದ ಮೇಲೆ ಇಡಲ್ಪಟ್ಟ ಪ್ರತಿ ನಾಲ್ಕೂವರೆ ಸಾವಿರ ಜಾತಿ ಉಪಜಾತಿಗಳ ಇಟ್ಟಿಗೆಯ ಸುತ್ತಲೂ ಜಾತಿಭೇದದ ಸಿಮೆಂಟ್‌ಅನ್ನು ಲೇಪಿಸಲಾಗಿದೆ. ದಲಿತರೆಂಬ ಅಸ್ಪೃಶ್ಯ ಜಾತಿಯನ್ನು ಹೊರತು ಪಡಿಸಿದರೆ, ಬಹುತೇಕ ಜಾತಿಗಳು ಶ್ರೇಣೀಕೃತ ಜಾತಿಭೇದದ ಗುಣಧರ್ಮಕ್ಕೆ ಒಗ್ಗಿಕೊಂಡಿರುವುದು ಮಾನವೀಯತೆಯ ಕಗ್ಗೊಲೆಯನ್ನು ಸಮರ್ಥಿಸುವಂತಿದೆ.

ಅಸ್ಪೃಶ್ಯತೆಯ ನಿವಾರಣೆ ಸಾಧ್ಯವೆನ್ನುವುದು ಒಂದು ಆಶಾಭಾವನೆ, ಅಷ್ಟೆ. ಇಂತಹ ಭಾವನೆಗಳಿಗೆ ಕಾಲುಗಳಿದ್ದರೂ ಅವು ಬಹಳಷ್ಟು ಬಾರಿ ಜಾತಿ ಸಿದ್ಧಾಂತದ ಶಿಸ್ತಿಗೆ ಕಟ್ಟುಬಿದ್ದು ಒಳಗೊಳಗೇ ದಲಿತರನ್ನು ಒದೆಯುವಂಥ ಕಾರ್ಯಗಳಿಗಾಗಿ ತನ್ನ ಕಾಲುಗಳನ್ನು ಬಳಸಿಕೊಂಡಿವೆ. ವಸ್ತುಸ್ಥಿತಿಯ ಕ್ರೌರ್ಯ ಧರ್ಮಬದ್ಧವಾಗಿರುವಾಗ ಅಸ್ಪೃಶ್ಯತೆಯ ಆಚರಣೆಗೆ ಕಾರಣರಾದವರೇ ಅದರ ನಿರ್ಮೂಲನೆಯ ಹೊಣೆ ಹೊತ್ತುಕೊಳ್ಳಬೇಕೆನ್ನುತ್ತಾರೆ. ಹೊಲೆಮಾದಿಗರನ್ನು ನಾವುಗಳೆಲ್ಲಾ ಸೇರಿ ಆಗಾಗ್ಗೆ ಮುಟ್ಟುತ್ತಿದ್ದರೆ..., ಸವರ್ಣೀಯರು ಅವರ ಒಳ ಮನೆಯಲ್ಲೇ ದಲಿತರಿಗೆ ಊಟ ಬಡಿಸಿದಲ್ಲಿ ಅಸ್ಪೃಶ್ಯತೆ ನಿವಾರಣೆಗೊಳ್ಳಬಲ್ಲುದೇ ? ಆಶಯ ಉತ್ತಮವಾದದ್ದೇ. ಆದರೆ ಅದು ಗುರಿ ತಲುಪಿಸಲಾರದು. ಅನಾಗರಿಕ ಶ್ರೇಣೀಕೃತ ಜಾತಿ ವ್ಯವಸ್ಥೆಯ ಕೋಟೆಯನ್ನು ಭದ್ರವಾಗಿ ಉಳಿಸಿಕೊಂಡೇ ಅಸ್ಪೃಶ್ಯತೆಯ ಕ್ರೌರ್ಯವನ್ನು ತೊಡೆದುಹಾಕಲು ಸಾಧ್ಯವೇ ? ನಗರ–ಪಟ್ಟಣಗಳಲ್ಲಿ ನಡೆಯುವ ದಲಿತರ ಮದುವೆ ಸಮಾರಂಭಗಳಿಗೆ ಆಹ್ವಾನಿತರಾಗಿ ಸವರ್ಣೀಯರು ಬರುತ್ತಾರೆ. ಅಡಿಗೆ ಭಟ್ಟರು, ಬಡಿಸುವವರು ಅಸ್ಪೃಶ್ಯರಲ್ಲ ಎನ್ನುವಂಥ ಪೂರ್ವ ನಿರ್ಧಾರಕ್ಕೆ ಬದ್ಧರಾಗಿ ಮೈಲಿಗೆಗೆ ಒಳಗಾಗದೆ ಉಣ್ಣುತ್ತಾರೆ. ಇದು ಹಿಂದೂ ಧರ್ಮದೊಳಗಿನ ಜಾತಿ ಭಾಷೆಯ ಕಟು ವಾಸ್ತವ. ಭಾರತದ ಜಾತಿಬದ್ಧ ಹಳ್ಳಿಗಳನ್ನು ಹೊರತುಪಡಿಸಿ ನೋಡಿದರೆ, ನಗರ–ಪಟ್ಟಣದ ಹೋಟೆಲುಗಳು ಪಕ್ಕಾ ಜಾತ್ಯತೀತ. ಅಂಥ ಹೋಟೆಲುಗಳಲ್ಲಿ ಉಂಡು ಬಂದವರು ಜಾತಿವಿರೋಧಿಗಳಾಗಿ ಅಥವಾ ಅಸ್ಪೃಶ್ಯತೆಯ ವಿರೋಧಿಗಳಾಗಿ ಪರಿವರ್ತಿತರಾಗಿದ್ದಾರೆಯೇ ? ಖಂಡಿತಾ ಇಲ್ಲ...! ಅಂತಹ ಸಾಧ್ಯತೆ ಕಂಡುಬಂದಿದ್ದಿದ್ದಲ್ಲಿ ಹೋಟೆಲುಗಳ ಮೇಲೆ ಎಂದೋ ದಾಳಿ ನಡೆದಿರುತ್ತಿತ್ತು !!

ಶ್ರಮಜೀವಿಗಳ, ಅನಕ್ಷರಸ್ಥರ, ಲೋಕವೆನ್ನಬಹುದಾದ ಭಾರತದ ಲಕ್ಷಾಂತರ



## ಶೋಷಿತರು

ನಮ್ಮ ಹೊಳೆ–
ಹೊಳೆವ ರಕ್ತಬೀಜಗಳೇ
ಬೇಕಲ್ಲವೆ
ಮತಪೆಟ್ಟಿಗೆ ತುಂಬಿಸಲು
ನಿಮಗೆ – ನಾಳೆ
ನಿಮ್ಮಧಿಕಾರದ ವೃಕ್ಷ
ಬೆಳೆಸಲು ?

**ವ. ಉಮೇಶ್ ಕಾರಂತ**
ಮಂಗಳೂರು – ೫೭೫ ೦೦೧

ಹಳ್ಳಿಗಳು ಮನುಸ್ಮೃತಿಯನ್ನು ಓದಿ ಅರ್ಥಮಾಡಿಕೊಂಡಂತೆ ಜಾತಿಪದ್ಧತಿಯ ಕಟ್ಟಲೆಗಳನ್ನು, ಅಸ್ಪೃಶ್ಯರ ವಿರುದ್ಧ ಕ್ರೂರವಾಗಿ, ಕಾನೂನಿಗೆ ಬೆಲೆ ಕೊಡದೆ ಆಚರಿಸಿಕೊಂಡು ಬರುತ್ತಿವೆ. ಇಂದಿಗೂ ಗ್ರಾಮೀಣ ಬದುಕು ದಲಿತರ ಪಾಲಿಗೆ ನರಕವಾಗಿದ್ದರೂ ಅಲ್ಲಿನ ಶೋಷಕ ವರ್ಗದ ಶೂದ್ರ ಜಾತಿಗಳು ಹೇಳುವ ಸುಳ್ಳು ಹೀಗಿರುತ್ತದೆ : "ನಾವು ಹಾಗೂ ಹರಿಜನ್ರು ಅಣ್ಣ ತಮ್ಮಂದಿರಂಗೆ ಅನ್ಯೋನ್ಯ ವಾಗಿದ್ದೇವೆ." ಇಂತಹ ಕುದಿಯುವ ಸೀಸದಂಥ ಸುಳ್ಳು ಹೇಳಿಕೆಗಳನ್ನು, ದುಡಿಮೆಗಾಗಿ ಜಮೀನ್ದಾರರನ್ನು ಅವಲಂಬಿಸಿರುವ ಶೋಷಿತರು ಪ್ರಶ್ನಿಸದೆ ಸಹಿಸಬೇಕು. ಪ್ರಶ್ನಿಸಿದರೆ ದೌರ್ಜನ್ಯ, ಸಾಮಾಜಿಕ ಬಹಿಷ್ಕಾರ, ಅತ್ಯಾಚಾರಗಳನ್ನು ಎಸಗುವ ಸೈನ್ಯ ದಾಳಿ ನಡೆಸಲು ಹಳ್ಳಿಗಳಲ್ಲಿ ಸದಾ ಸಿದ್ಧವಾಗಿರುತ್ತದೆ. ಗ್ರಾಮ 'ಸ್ವರಾಜ್ಯ'ವು ಅಸ್ಪೃಶ್ಯರ ಪಾಲಿಗೆ ನರಕವಾಗಿರುವುದನ್ನು ಕದಲಿಸಲು ಅದೆಷ್ಟು ಮಂದಿ ಪ್ರಯತ್ನಿಸಿದ್ದಾರೆ ?

ಮುಸ್ಲಿಂ ಹಾಗೂ ಕ್ರೈಸ್ತ ಧರ್ಮದ ಆಚರಣೆಯಲ್ಲಿಲ್ಲದ ಸಾಮಾಜಿಕ ಬಹಿಷ್ಕಾರದಂಥ ಆಚರಣೆಗೆ ಹಿಂದೂ ಧರ್ಮ ಸ್ವಯಂ ಒಪ್ಪಿಗೆ ನೀಡಿರುವಾಗ ದಲಿತರ ಮೇಲಿನ ಅತ್ಯಾಚಾರ, ಶೋಷಣೆ, ಬೆತ್ತಲೆ ಸೇವೆ, ಮುಂತಾದವುಗಳನ್ನು ಪೂರ್ಣವಾಗಿ ತಡೆಯಲು ಅಸಾಧ್ಯವಾಗಿದೆ. ಏಕೆಂದರೆ, ಧರ್ಮದೊಂದಿಗೆ ಕಲೆತ ವ್ಯವಸ್ಥೆಯ ಬಹುತೇಕ ಎಲ್ಲಾ ಆಯಾಮಗಳು ಅಸ್ಪೃಶ್ಯರ ವಿರುದ್ಧವಾಗಿಯೇ ಕೆಲಸ ಮಾಡಿವೆ ಎಂಬುದಕ್ಕೆ ಬಹಳಷ್ಟು ನಿದರ್ಶನಗಳಿವೆ. ಅಲ್ಪಸಂಖ್ಯಾತ ಹಿಂದುಳಿದ ಬಡ ಜಾತಿಗಳೂ ಕೂಡ ದಲಿತರ ಮೇಲೆ ಸಾಮಾಜಿಕ ಬಹಿಷ್ಕಾರವನ್ನು ಹೇರುವಂಥ ಅಧಿಕಾರವನ್ನು ಹಿಂದೂ ಧರ್ಮ ನೀಡಿದೆ. ಇಂತಹ ಅಮಾನವೀಯ ಬಹಿಷ್ಕಾರ ಧರ್ಮಸಮ್ಮತವಾಗಿರುವುದರಿಂದ ಸನಾತನ ಹಿಂದೂ ಧಾರ್ಮಿಕ ಕೇಂದ್ರಗಳು ಈ ಕ್ರೌರ್ಯವನ್ನು ಧರ್ಮಬದ್ಧ ಆಚರಣೆಯನ್ನಾಗಿ ಬೆಸೆದುಬಿಟ್ಟಿರುವುದರಿಂದ ದೇಶದ ಅಸ್ಪೃಶ್ಯತಾ ವಿರೋಧಿ ಕಾನೂನು ಕೂಡ ಸ್ಪಷ್ಟವಾಗಿ ಮುಗ್ಗರಿಸಿದೆ. ಕರುಣೆ ಹಾಗೂ ಬಂಧುತ್ವದ ನೆಲೆಗಳು ಅವರವರ ಜಾತಿಗಳಿಗೆ ಮಾತ್ರ ಸೀಮಿತಗೊಂಡಿರುವಂಥದ್ದು. ಈ ನೆಲೆಗಳು ಕೃತಿಯಾಗಿ ತಳಜಾತಿಗಳತ್ತ ಚಲಿಸಿದ್ದು ತೀರಾ ಅಪರೂಪ.

ದುರಂತವೆಂದರೆ, ಉದಾರವಾದಿ ನಿಲುವಿನ ಮೇಲ್ಜಾತಿಯ ಹಿಂದುತ್ವವಾದಿಗಳು ಜಾತಿ ವಿನಾಶದ ಹೋರಾಟವನ್ನು ಸ್ಪಷ್ಟವಾಗಿ ನಿರ್ಲಕ್ಷಿಸಿ, ಹರಿಜನೋದ್ಧಾರ ಕಾರ್ಯಕ್ರಮಕ್ಕೆ ಜೋತುಬಿದ್ದಿದ್ದರು. ಈ ಬಗ್ಗೆ ಭ್ರಮನಿರಸನಗೊಂಡ ಅಂಬೇಡ್ಕರ್ ೧೯೫೬ರಲ್ಲಿ ನಾಲ್ಕು ಲಕ್ಷ ದಲಿತರೊಂದಿಗೆ ಬೌದ್ಧ ಧಮ್ಮ ಸೇರಿಕೊಂಡರು. ಇಂದಿಗೂ ಈ ಧರ್ಮಾಂತರ ಚಲನೆ ನಿಂತಿಲ್ಲ. ಅಸ್ಪೃಶ್ಯರು ಬೌದ್ಧರಾಗುತ್ತಿದ್ದಾರೆ. ಮುಸ್ಲಿಮರಾಗುತ್ತಿದ್ದಾರೆ, ಕ್ರೈಸ್ತರಾಗುತ್ತಿದ್ದಾರೆ, ಸಿಖ್ಖರಾಗುತ್ತಿದ್ದಾರೆ. ಮೊನ್ನೆ ಅಂಬೇಡ್ಕರ್ ಜಯಂತಿಯ ದಿನದಂದು ೮೦೦ಕ್ಕೂ ಹೆಚ್ಚು ವಾಲ್ಮೀಕಿ ಸಮುದಾಯದ ಜನರು ಇಸ್ಲಾಂ ಧರ್ಮಕ್ಕೆ ಸೇರಿಕೊಂಡಂತಹ ಕ್ರಿಯೆ ಏನನ್ನು ಸೂಚಿಸುತ್ತದೆ ? ಅದು ತಳಜಾತಿಗಳ ಕೇರಿಗಳಲ್ಲಿ ಆಮ್ಲಜನಕದ ಮಟ್ಟ ತೀವ್ರವಾಗಿ ಕುಸಿದಿದೆ... ಎಂಬಂಥ ಉಸಿರುಗಟ್ಟಿಸುವ ನೋವನ್ನು ಮೌನವಾಗಿ ಸ್ಪಷ್ಟಪಡಿಸುತ್ತಿದೆಯಲ್ಲವೇ ?

ಅಂಬೇಡ್ಕರ್ ಅವರ ದಿಟ್ಟ ಪ್ರಯತ್ನದಿಂದಾಗಿ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ವರ್ಗದವರಿಗೆ ಸಂವಿಧಾನದಲ್ಲಿ ಕಲ್ಪಿಸಲ್ಪಟ್ಟ ಮೀಸಲಾತಿ ಸೌಲಭ್ಯದ ಕಾಲಾವಧಿ ಹತ್ತು ವರ್ಷವಾಗಿತ್ತು. ಹತ್ತು ವರ್ಷಗಳ ನಂತರ ಮೀಸಲಾತಿ ಸೌಲಭ್ಯ ರದ್ದಾಗುವ ಸಾಧ್ಯತೆ ಬಗ್ಗೆ ಎಚ್ಚರಿಕೆ ನೀಡಿದ್ದರು. ಹಾಗೆ ಮೀಸಲಾತಿಗಿಂತ ಮುಖ್ಯವಾಗಿ ದಲಿತ ಸಮುದಾಯಗಳು ಸ್ವಾಭಿಮಾನಿಗಳಾಗಿ, ಸ್ವಾವಲಂಬಿಗಳಾಗಿ, ವಿದ್ಯಾವಂತರಾಗಿ, ಇಂಗ್ಲಿಷ್ ಹಾಗೂ ಉನ್ನತ ಶಿಕ್ಷಣಕ್ಕೆ ಆದ್ಯತೆ ನೀಡುವ ಅಗತ್ಯವಿದೆ ಎಂದಿದ್ದರು. ಅಂದು ಐದಾರು ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ವರ್ಗಗಳಿದ್ದರೆ, ಇಂದು ಮೀಸಲಾತಿಯ ಸೌಲಭ್ಯಕ್ಕಾಗಿ ಅಸ್ಪೃಶ್ಯರಲ್ಲದವರೂ ಅಸ್ಪೃಶ್ಯರಾಗಿ ಅಂತಹ ಜಾತಿಗಳ ಸಂಖ್ಯೆ ನೂರಾಹತ್ತು ದಾಟಿದೆ !! ಇಂದು ಮೀಸಲಾತಿ ಸೌಲಭ್ಯವು ಬಹುತೇಕ ಎಲ್ಲ ಸವರ್ಣೀಯ ಜಾತಿಗಳಿಗೂ ಬೇರೆ ಬೇರೆ ಹಂತಗಳಲ್ಲಿ ದಕ್ಕುತ್ತಿರುವುದನ್ನು ಅಗತ್ಯವಾಗಿ ಗಮನಿಸಬೇಕಿದೆ. ಒಂದು ವೇಳೆ ಅಂಬೇಡ್ಕರ್ ನೀಡಿದ ಎಚ್ಚರಿಕೆಯಂತೆ ಎಪ್ಪತ್ತರ ದಶಕದಲ್ಲಿ ಪರಿಶಿಷ್ಟ ಜಾತಿಯ ಮೀಸಲಾತಿ ಸವಲತ್ತು ರದ್ದಾಗಿದ್ದಲ್ಲಿ ಏನಾಗಿರುತ್ತಿತ್ತು !? ಮತಾಂತರದ ವೇಗ ತೀವ್ರಗೊಂಡು; ಹೆಚ್ಚು ಕಮ್ಮಿ ಹದಿನೈದರಿಂದ ಇಪ್ಪತ್ತು ಕೋಟಿ ಅಸ್ಪೃಶ್ಯರು ಹಾಗೂ ಹಿಂದುಳಿದ ಜಾತಿಗಳು ಬೌದ್ಧ ಧರ್ಮೀಯರಾಗಿರುತ್ತಿದ್ದರು. ಅಥವಾ ಅವರಿಷ್ಟಪಟ್ಟಂಥ ಧರ್ಮಕ್ಕೆ ಖಂಡಿತವಾಗಿ ಮತಾಂತರಗೊಂಡಿರುತ್ತಿದ್ದರು...! ಹಾಗಾದರೆ ಮೀಸಲಾತಿ ಸೌಲಭ್ಯ ಮತಾಂತರಕ್ಕೆ ಕಡಿವಾಣ ಹಾಕಿದೆಯೇ ? ಹೌದೆಂಬ ಉತ್ತರವನ್ನು ಅಲ್ಲಗಳೆಯುವುದಾದರೂ ಹೇಗೆ ?

ವರ್ಣಾಶ್ರಮ ಧರ್ಮ ಚಾಲ್ತಿಯಲ್ಲಿದ್ದ ಆ ಪುರಾತನ ಕಾಲದಲ್ಲಿ ಪ್ರತಿಭಾ ಚಲನೆಗೆ ಮುಕ್ತ ಅವಕಾಶವಿತ್ತು. ಪ್ರತಿಭಾ ಅರ್ಹತೆಗೆ ಪೂರಕವಾಗಿ ಆ ನಾಲ್ಕು ವರ್ಣಗಳಿಗೂ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರು ಚಲಿಸಬಹುದಾಗಿತ್ತು. ಹಾಗೆ ವರ್ಣ ವಿಭಜಿತ ವೃತ್ತಿಗಳಲ್ಲಿ ಮುಕ್ತವಾಗಿ ತೊಡಗಿಸಿಕೊಳ್ಳಬಹುದಾಗಿತ್ತು. ವರ್ಣಗಳು ಕ್ರಮೇಣ ಜಾತಿಗಳಾಗಿ ಮಾರ್ಪಟ್ಟ ಕಾರಣಗಳಿಂದಾಗಿ ಅಂತಹ ಸಾಧ್ಯತೆಗಳು ನಾಶಹೊಂದಿದವು ಎಂಬ ವಾದವೂ ಇದೆ. ಇದ್ದಲ್ಲಿ ಅಂತಹ ಚಲನಶೀಲ ಲೋಕವನ್ನು ಹಿಂದೂ ಧರ್ಮಕ್ಕೆ ಮರಳಿಪಡೆಯಲಾಗುವುದಿಲ್ಲವೇ ?

ಈ ಸಾವಿರಾರು ಜಾತಿ ಗೋಡೆಗಳನ್ನು ನಾಶಪಡಿಸುವ ಮೂಲಕ ಅಸ್ಪೃಶ್ಯ ಜಾತಿ ತನ್ನಷ್ಟಕ್ಕೇ ತಾನೇ ನಿವಾರಣೆಗೊಳ್ಳುತ್ತದೆ. ಏಕೆಂದರೆ, ಜಾತಿ ವಿನಾಶದ ಹಾದಿ ಸರಳ, ನೇರ ಹಾಗೂ ಸ್ಪಷ್ಟವಾಗಿರುವಂಥದ್ದು. ಈ ಮಾರ್ಗದಲ್ಲಿ ಪ್ರವಾಹವಾಗಿ ಸಾಗುವಂಥ ತಾಯ್ತನದ ಎದೆಗಾರಿಕೆ ಹಿಂದೂ ಧರ್ಮದ ಜನ್ಮದಾತರಾದ ವೈದಿಕ ಬ್ರಾಹ್ಮಣರಲ್ಲಿ ಪ್ರಪ್ರಥಮವಾಗಿ ಚಿಗುರೊಡೆಯಬೇಕಿದೆ. ಜೊತೆಗೆ ಈ ಸಮುದಾಯದ ಪ್ರಜ್ಞಾವಂತ ಬ್ರಾಹ್ಮಣರ ಧ್ವನಿಯೂ ಉಳಿದ ಮೇಲ್ಜಾತಿಗಳ ಧ್ವನಿಗಳೂ ಸೇರಿಕೊಳ್ಳಬೇಕಿದೆ. ಹಾಗೆ ಜಾತಿಭೇದದ ದಾಸರಾಗಿ ಮಾರ್ಪಟ್ಟಿರುವಂಥ ಸಾವಿರಾರು ಜಾತಿಗಳನ್ನು, ಅವರವರ ಸಂಸ್ಕೃತಿಗಳನ್ನು ಜಾತ್ಯತೀತ ಹಾದಿಗೆ ತರುವಂಥ ಜವಾಬ್ದಾರಿಯನ್ನು ಆಯಾಯ ಜಾತಿಯ ಪ್ರಜ್ಞಾವಂತರು ಹೊತ್ತುಕೊಳ್ಳಬೇಕಿದೆ. ಜಾತಿಗಳನ್ನು ಉಳಿಸಿಕೊಂಡೇ ಅಸ್ಪೃಶ್ಯತೆಯ ನಿವಾರಣೆ ಸಾಧ್ಯವೆನ್ನುವುದು ಯಾರೂ ಚಲಿಸಲಾಗದಂಥ ದುರ್ಗಮ ಹಾದಿಯೇ ಇಲ್ಲದ ಸುಳ್ಳಿನ ಮಾರ್ಗವಾಗಿರುತ್ತದೆ...! ಇದರಲ್ಲಿ ಅನುಮಾನವೇ ಇಲ್ಲ...!!



**ಮೂರ್ನಾಡ್ ರಾಮಸ್ವಾಮಿ**
ನಂ. ೨೪೨೧, ೪ನೇ ಅಡ್ಡರಸ್ತೆ
ಕನಕದಾಸ ನಗರ, ದಟ್ಟಗಳ್ಳಿ, ಮೈಸೂರು – ೫೭೦ ೦೨೨

# ಬೆಳಗಾವಿ ಕರ್ನಾಟಕದ ಅವಿಭಾಜ್ಯ ಅಂಗ

ಬೆಳಗಾವಿ ಸ್ಥಳನಾಮದ ಹಿಂದಿನ ಹೆಸರು ವೇಣುಗ್ರಾಮ. ಅಂದರೆ ಬಿದುರುಗಳ ಗ್ರಾಮ. 'ವ್' ಕಾರವು 'ಬ್' ಆಗುವುದು ಕನ್ನಡದಲ್ಲಿ ಸರ್ವೇಸಾಮಾನ್ಯ. ಬೆಳಗಾವಿ ಪ್ರಾಂತವನ್ನು ಕದಂಬರು, ಚಾಲುಕ್ಯರು, ಕಲಚೂರ್ಯರು, ಹೊಯ್ಸಳರು, ಯಾದವರು ಆಳಿದರು. ಬೆಳಗಾವಿ ಜಿಲ್ಲೆಯ ಪ್ರತಿ ಊರಿನಲ್ಲೂ ಶಾಸನಗಳಿವೆ. ಅವೆಲ್ಲ ಕನ್ನಡ ಶಾಸನಗಳೇ.




ಬೆಳಗಾವಿ ಅಪ್ಪಟ ಕನ್ನಡ ಪ್ರದೇಶವೆಂಬುದನ್ನು ಸಾಬೀತುಪಡಿಸುವುದು ಅನಗತ್ಯವಾಗಿದ್ದರೂ ಮಹಾರಾಷ್ಟ್ರದ ಎಂ.ಇ.ಎಸ್.ನ ಕೆಲವು ಸದಸ್ಯರು ಬೆಳಗಾವಿ, ಮಹಾರಾಷ್ಟ್ರಕ್ಕೆ ಸೇರಬೇಕೆಂದು ಒತ್ತಾಯಿಸುತ್ತಿರುವ ಹಿನ್ನೆಲೆಯಲ್ಲಿ ಈ ಕೆಳಕಂಡ ಅಂಶಗಳನ್ನು ಸಾರ್ವಜನಿಕರ ಗಮನಕ್ಕೆ ತರಲು ಬಯಸುತ್ತೇನೆ :

**ಡೆಕ್ಕನ್ ಮಹಾರಾಷ್ಟ್ರ (ಮುಂಬೈ ಕರ್ನಾಟಕ)**

೧೮೧೮ರಲ್ಲಿ ಪೇಶ್ವೆಗಳಿಂದ ಬ್ರಿಟಿಷರ ವಶಕ್ಕೆ ಬಂದ 'ಡೆಕ್ಕನ್' ಮಹಾರಾಷ್ಟ್ರದ ಭಾಗವಾಗಿದ್ದ ಕನ್ನಡದ ಭಾಗವೂ ಸೇರಿದಂತೆ ಕನ್ನಡ ನಾಡು ಇಪ್ಪತ್ತೆರಡು ಆಡಳಿತಗಳಲ್ಲಿ ಹಂಚಿಹೋಯಿತು. ಆಗಲೂ ಡೆಕ್ಕನ್ ಮಹಾರಾಷ್ಟ್ರದ ಭಾಗವಾಗಿದ್ದ ಕೊಲ್ಹಾಪೂರದಲ್ಲಿದ್ದ ಬ್ರಿಟಿಷ್ ಏಜೆಂಟರನ್ನು "ಕರವೀರ ಇಲಾಖಾ" ಮತ್ತು "ಕರ್ನಾಟಕ ಪ್ರಾಂತ"ದ ಅಧಿಕಾರಿಗಳೆಂದೇ ಗುರುತಿಸಲಾಗಿತ್ತು. 'ಡೆಕ್ಕನ್ ಮಹಾರಾಷ್ಟ್ರ' ಎಂದು ಕನ್ನಡ ಪ್ರದೇಶವನ್ನು ಮರಾಠಿ ಅಧಿಕಾರಿಗಳು ಮತ್ತು ವಿದ್ವಾಂಸರು ಕರೆಯುತ್ತಿದ್ದುದನ್ನು ಬ್ರಿಟಿಷ್ ವಿದ್ವಾಂಸರು ವಿರೋಧಿಸಿ ಅದನ್ನು 'ಬಾಂಬೆ ಕರ್ನಾಟಕ' ಎಂದು ಕರೆದರು. ಡೆಕ್ಕನ್ ಮಹಾರಾಷ್ಟ್ರದಲ್ಲಿ ಧಾರವಾಡ, ಉತ್ತರಕನ್ನಡ ಜಿಲ್ಲೆ, ಬೆಳಗಾವಿ, ಬಿಜಾಪೂರ, ಕೊಲ್ಹಾಪೂರ, ಸೊಲ್ಲಾಪೂರ, ಸತಾರಾ, ನಾಂದೇಡ್ ಇತ್ಯಾದಿ ಜಿಲ್ಲೆಗಳು ಸೇರಿದ್ದವು. ಅದಕ್ಕೆ ಕಾರಣ ಆ ಜಿಲ್ಲೆಗಳ ಹಿಂದಿನ ಎಲ್ಲ ದಾಖಲೆಗಳು (ಶಾಸನಗಳು) ಕನ್ನಡದಲ್ಲಿದ್ದುದು.

"ಬ್ರಿಟಿಷರ ಕಾಲದ ಮುಂಬೈ ಸರ್ಕಾರವು ೧೯೦೦ರ ಸುಮಾರಿನಲ್ಲಿ ಪಠ್ಯಗ್ರಂಥಗಳಲ್ಲಿ ಬಳಸಲು ತಯಾರಿಸಿದ್ದ ಕರ್ನಾಟಕದ ನಕ್ಷೆ ಬೆಳಗಾವಿಯು ಕರ್ನಾಟಕದ ಭಾಗವೆಂಬುದನ್ನು ಸೂಚಿಸುತ್ತದೆ. ಫ್ಲೀಟ್ ಹಂಟರ್ ಇವರೇ ಮೊದಲಾದವರು ಅದನ್ನೇ ಹೇಳಿದ್ದಾರೆ. ಅಚ್ಚಾಗಿರುವ ನಕ್ಷೆಯ ಮೇಲೆ (ಚಿತ್ರ–೧) ಆ ನಕ್ಷೆಯು ಹತ್ತೊಂಭತ್ತನೆಯ ಶತಮಾನದ್ದು ಎಂಬುದನ್ನು ಡಿ.ಡಿ.ಪಿ.ಐ. ಕಚೇರಿಯ ಅಧಿಕಾರಿಗಳೇ ಕೈಯಲ್ಲಿ ಬರೆದು ರುಜು ಹಾಕಿ ೧೧-೦೪-೧೯೦೯ ಎಂಬ ತೇದಿಯನ್ನು ನಮೂದಿಸಿದ್ದಾರೆ. ಅದು ಕನ್ನಡ ಪಠ್ಯ ಪುಸ್ತಕಗಳಿಗಾಗಿ ಸಿದ್ಧವಾದದ್ದೇನೂ ಅಲ್ಲ ; ಒಟ್ಟು ಮುಂಬೈ ಸರ್ಕಾರದ ವ್ಯಾಪ್ತಿಗೆ ಬರುವ ಎಲ್ಲ ಶಾಲೆಗಳಲ್ಲಿ ಬಳಸಬೇಕಾದುದಾದರೂ ನನಗೆ ಲಭ್ಯವಾಗಿರುವ ನಕ್ಷೆಯ ನಮೂನೆಯಲ್ಲಿ ಸ್ಥಳನಾಮಗಳು ಕನ್ನಡದಲ್ಲಿ ಅಚ್ಚಾಗಿರುವುದರಿಂದ ಅದು ೧೮೫೦–೬೦ರ ಸುಮಾರಿನಲ್ಲಿ ಮುಂಬೈ ರಾಜ್ಯದ ಕನ್ನಡ ಪಠ್ಯಪುಸ್ತಕಗಳಲ್ಲಿ ಅಚ್ಚಾಗಿತ್ತು ಎಂಬುದು ಸ್ಪಷ್ಟ." (ಡಾ॥ ಎಂ. ಚಿದಾನಂದಮೂರ್ತಿ 'ಬೃಹತ್ ಕರ್ನಾಟಕ : ಭಾಷಿಕ ಸಾಂಸ್ಕೃತಿಕ', ಪುಟ ೧೧).

– ಡಾ॥ ಚಿದಾನಂದಮೂರ್ತಿಯವರ ಪ್ರಸ್ತುತಪಡಿಸಿರುವ ಈ ಅಂಶ ಬಹಳ ಪ್ರಸ್ತುತವಾದದ್ದು.

ಆ ನಕಾಶೆಯ ಪ್ರಕಾರ 'ಕರ್ನಾಟಕ' ಎಂದರೆ ಕನ್ನಡ ಮಾತನಾಡುವ ಪ್ರದೇಶದ ಉತ್ತರ ಗಡಿಯಲ್ಲಿ ಕೊಲ್ಹಾಪೂರ, ಮಿರಜೆ (ಮೀರಜ್), ಸೊಲ್ಲಾಪೂರ, ಕಲ್ಯಾಣ, ಬೀದರುಗಳು ಸೇರಿವೆ. ಪಶ್ಚಿಮದ ಗಡಿಯಲ್ಲಿ ಇಡೀ ಗೋವೆ, ಮಂಗಳೂರು; ಇನ್ನೂ ದಕ್ಷಿಣಕ್ಕೆ ಬಂದರೆ ಕಾಸರಗೋಡು, ಕಣ್ಣಾನೂರು, ತಲಚೇರಿ, ಕಲ್ಲಿನಕೋಟೆ ಸೇರಿವೆ. ದಕ್ಷಿಣದ ಗಡಿ ಇಡೀ ನೀಲಗಿರಿ ಪರ್ವತ ಶ್ರೇಣಿ (ನೀಲಗಿರಿ ಘಟ್ಟಗಳು), ಪಶ್ಚಿಮದ ಗಡಿಯಲ್ಲಿ ಕೋಲಾರ ಜಿಲ್ಲೆಯಂತೂ ಸರಿಯೇ, ಪೆನಗೊಂಡ, ತಾಡಪತ್ರೆ, ಆದವಾನಿ, ಕರ್ನೂಲುಗಳು ಸೇರಿವೆ. ಅದರಲ್ಲಿ ಚಿತ್ರಕಲ್ಲದುರ್ಗ (ಚಿತ್ರದುರ್ಗ), ಮಿರಜೆ (ಮೀರಜ್), ಕಲಬುರಗಿ (ಗುಲಬರ್ಗಾ) ಸೀರಾ (ಸಿರಾ) ಇವೇ ಮುಂತಾದ ೧೯ನೇ ಶತಮಾನದಲ್ಲಿ ರೂಢಿಯಲ್ಲಿದ್ದ ಸ್ಥಳನಾಮರೂಪಗಳು ಸ್ವಾರಸ್ಯಕರವಾಗಿವೆ. ಇದು ಬ್ರಿಟಿಷರು ವಸ್ತುನಿಷ್ಠ ದೃಷ್ಟಿಯಿಂದ ಲಭ್ಯ ಭಾಷಿಕ ಸಾಮಗ್ರಿಯನ್ನು ವರದಿಗಳನ್ನು ಪರಿಶೀಲಿಸಿ ತಯಾರಿಸಿದ ಭೂಪಟ ಎಂಬುದು ಸ್ಪಷ್ಟ. ಅಂದಿನ (೧೯೦೦) ಕನ್ನಡ

**ಡಾ॥ ರಾಜಶೇಖರ ಇಚ್ಚಂಗಿ**

ಮಾತನಾಡುವ ಪ್ರದೇಶದ ಒಟ್ಟಾರೆ ಎಂಟು ಜಿಲ್ಲೆಗಳನ್ನು ಇಂದಿನ ಕರ್ನಾಟಕವು ಕಳೆದುಕೊಂಡಿದೆಯೆಂಬಲ್ಲಿ ಅನುಮಾನವಿಲ್ಲ. ಇದು ಅತ್ಯಂತ ನಿರ್ವಿವಾದದ ವಿಷಯ ಮತ್ತು ಶಾಸನ ಇತ್ಯಾದಿ ಆಧಾರಗಳೂ ಅದನ್ನು ಸ್ಪಷ್ಟಪಡಿಸುತ್ತವೆ.

ಈಸ್ಟ್ ಇಂಡಿಯಾ ಕಂಪನಿ ಸರ್ಕಾರದಲ್ಲಿ ಗವರ್ನರ್ ಆಗಿದ್ದ ಎಲ್ಫಿನ್‌ಸ್ಟನ್ನನು ೧೮೧೯ರಲ್ಲಿ ತನ್ನ ವರದಿಯಲ್ಲಿ "ಮರಾಠಿಗರು ಕೃಷ್ಣಾ ನದಿಯ ದಕ್ಷಿಣಕ್ಕಿರುವ ಭಾಗವನ್ನು (ಅಂದರೆ ಕೊಲ್ಹಾಪೂರ, ಸಾಂಗ್ಲಿ, ಬೆಳಗಾವಿ, ಹುಬ್ಬಳ್ಳಿ ) 'ಕರ್ನಾಟಿಕ್' ಎಂದು ಕರೆಯುತ್ತಿದ್ದು, ಈ ಜಿಲ್ಲೆಯೂ ಸೇರಿದಂತೆ ಬಿಜಾಪೂರ ಪ್ರದೇಶದ ಜನ ಆಡುವ ಭಾಷೆ 'ಕ್ಯಾನರೀಸ್' (ಕನ್ನಡ) ಎಂದಿದ್ದಾನೆ. ಚಾಪ್ಲಿನ್‌ನ ಪ್ರಕಾರ ಆ ಪ್ರದೇಶದ ಜನಸಂಖ್ಯೆಯಲ್ಲಿ ಹತ್ತನೇ (ಅಥವಾ) ಎಂಟನೇ ಒಂದು ಭಾಗದಷ್ಟು ಜನ ಮಾತ್ರ ಮರಾಠಿ ಮಾತನಾಡುತ್ತಾರೆ (ಜಿ. ಎಸ್. ಹಾಲಪ್ಪ: ಮೂವಿಂಗ್ ಫ಼್ರಾಂಟಿಯರ್ಸ್ ಆಫ್ ಮಹಾರಾಷ್ಟ್ರ (೧೯೬೭), ಪುಟ. ೧೮).

ಸೊಲ್ಲಾಪೂರದ ಪ್ರಧಾನ ಕಲೆಕ್ಟರ್ ಆಗಿದ್ದ ಜನರಲ್ ಮನ್ರೋ, "ಬಿಜಾಪೂರ, ಸೊಲ್ಲಾಪೂರ, ಬೆಳಗಾವಿ, ಧಾರವಾಡ ಜಿಲ್ಲೆಗಳನ್ನು ಮುಂಬೈ ಪ್ರಾಂತದಿಂದ ಬೇರ್ಪಡಿಸಿ ಮದ್ರಾಸ್ ಪ್ರಾಂತಕ್ಕೆ ಸೇರಿಸುವುದು ಒಳ್ಳೆಯದು. ಏಕೆಂದರೆ ಇವು ಮರಾಠರ ಆಕ್ರಮಣಕ್ಕೆ ಒಳಗಾಗಿದ್ದರೂ ಎಂದೂ ಮಹಾರಾಷ್ಟ್ರದ ಭಾಗವಾಗಿರಲಿಲ್ಲ. ಮೈಸೂರು ಸೊಂಡೂರು, ಬಳ್ಳಾರಿ ಪ್ರದೇಶಗಳ ಜನರಂತೆ ಇವರ ಭಾಷೆ ಕೂಡ ಕನ್ನಡವೇ" (ಅದೇ ಪುಟ ೨೦) ಎನ್ನುತ್ತಾನೆ.

ಸಾಂಗ್ಲಿಯ ಜಾಯಿಂಟ್ ಆಡಳಿಗಾರನಾಗಿದ್ದ ಮೇಜರ್ ಜಿ. ಡಬ್ಲ್ಯು. ವೆಸ್ಟ್ ಎಂಬಾತನು ೧೮೭೭ರಲ್ಲಿ ರಚಿಸಿದ "ಹಿಸ್ಟರಿ ಆಫ್ ಬಾಂಬೆ ಕರ್ನಾಟಕ, ಕ್ರಿ. ಶ. ೧೫೦೦–೧೮೧೮" ಎಂಬ ತನ್ನ ಕೃತಿಯಲ್ಲಿ ಮುಂಬೈ ಕರ್ನಾಟಕದ ವ್ಯಾಪ್ತಿಗೆ ಬೆಳಗಾವಿ, ಧಾರವಾಡ, ಬಿಜಾಪೂರಗಳನ್ನು ಸೇರಿಸಿದ್ದನು (ಅದೇ).

ಟೀಪೂ ಸೋತ ಬಳಿಕ ಮೈಸೂರಿನ ರಾಜಕೀಯ ರೆಸಿಡೆಂಟ್ ಆಗಿದ್ದ ಕರ್ನಲ್ ವಿಲ್‌ಕ್ಸನು ೧೮೧೦ರಲ್ಲಿ ಪ್ರಕಟವಾದ 'ಮೈಸೂರು ಚರಿತ್ರೆ'ಯ ಸಂಪುಟಗಳಲ್ಲಿ ಕೊಡುವ ಕನ್ನಡ ದೇಶದ ಚಿತ್ರದಲ್ಲಿ ಬೀದರ್, ಆದವಾನಿ, ಅನಂತಪೂರ, ನೀಲಗಿರಿ ಸೇರಿದಂತೆ ಇಂದಿನ ಕರ್ನಾಟಕದ ಹೊರಗಿರುವ ಆದವಾನಿ, ಧರ್ಮಪುರಿ, ನೀಲಗಿರಿ, ಕೊಲ್ಹಾಪೂರ, ಸಾಂಗ್ಲಿಗಳನ್ನೂ ಸೇರಿಸಿದ್ದಾನೆ (ಅದೇ ಪುಟ ೨೦–೨೧).

ಎಚ್. ಜೆ. ಸ್ಟೋಕ್ಸ್ ಎಂಬ ಬಾಂಬೆ ಸಿವಿಲ್ ಸರ್ವಿಸ್ ಅಧಿಕಾರಿಯು ೧೮೩೦ರ ಬಳಿಕ ಮೈಸೂರು ರಾಜ್ಯದ ಕಮಿಷನರ್ ಆಗಿ ಕೂಡ ಕೆಲಸ ಮಾಡಿದ. ಅವನು ಬರೆದ ಬೆಳಗಾವಿ ಜಿಲ್ಲೆಯ ಚರಿತ್ರೆ (೧೮೭೦) ಬಹು ಅಮೂಲ್ಯವಾದುದು. ಅವನ ಅಭಿಪ್ರಾಯಗಳು ಹೀಗಿವೆ :

ಬೆಳಗಾವಿ ಸ್ಥಳನಾಮದ ಹಿಂದಿನ ಹೆಸರು ವೇಣು ಗ್ರಾಮ. ಅಂದರೆ ಬಿದುರುಗಳ ಗ್ರಾಮ. 'ವ್' ಕಾರವು 'ಬ್' ಆಗುವುದು ಕನ್ನಡದಲ್ಲಿ ಸರ್ವೇಸಾಮಾನ್ಯ. ಬೆಳಗಾವಿ ಪ್ರಾಂತವನ್ನು ಕದಂಬರು, ಚಾಲುಕ್ಯರು, ಕಲಚೂರ್ಯರು, ಹೊಯ್ಸಳರು, ಯಾದವರು ಆಳಿದರು. ಬೆಳಗಾವಿ ಜಿಲ್ಲೆಯ ಪ್ರತಿ ಊರಿನಲ್ಲೂ ಶಾಸನಗಳಿವೆ. ಅವೆಲ್ಲ ಕನ್ನಡ ಶಾಸನಗಳೇ. ವಾಲ್ಟರ್ ಈಲಿಯಟ್ ಅವುಗಳಲ್ಲಿ ಹಲವನ್ನು ಪ್ರಕಟಿಸಿದ್ದಾನೆ.

ಸ್ಟೋಕನು ಬೆಳಗಾವಿಯು ಕನ್ನಡ ಭಾಷೆ, ಸಂಸ್ಕೃತಿಗೆ ಸಂಬಂಧಿಸಿದ್ದೆಂಬುದಕ್ಕೆ ಒಂದು ಅಪೂರ್ವ ಸಮಕಾಲೀನ ಸಾಕ್ಷ್ಯಾಧಾರ ನೀಡಿದ್ದಾನೆ. ಅದು ಕೋಟೆಯಲ್ಲಿರುವ ದ್ಯಾಮವ್ವ ಎಂಬ ಗ್ರಾಮದೇವತೆಯ ದೇವಾಲಯ. ಆ ಗ್ರಾಮದೇವತೆ ಬೆಳಗಾವಿಯು ಹಲವು ಶತಮಾನಗಳ ಹಿಂದೆ ಚಿಕ್ಕ ಹಳ್ಳಿಯಾಗಿದ್ದಾಗ ಸ್ಥಾಪಿತವಾದುದು. ಬೆಳಗಾವಿಯನ್ನು ಗೆದ್ದ ಮಹಮ್ಮದ್ ಗವಾನನು ಆ ದೇವಾಲಯವನ್ನು ೧೫ನೇ ಶತಮಾನದಲ್ಲಿ ಭಗ್ನಗೊಳಿಸಿ ಆ ದೇವತೆಯನ್ನು ಹೊರಹಾಕಿದರೂ, ಸ್ಟೋಕ್ಸ್ ಹೇಳುವಂತೆ ಆ ದ್ಯಾಮವ್ವಳನ್ನು ಜನರು ಈಗಲೂ ಹನ್ನೆರಡು ವರ್ಷಗಳಿಗೊಮ್ಮೆ ಕೋಟೆ ಮತ್ತು ಆಸ್ಪತ್ರೆ ಮಧ್ಯದಲ್ಲಿರುವ ಚಿಕ್ಕ ದೇವಾಲಯದಲ್ಲಿ ಆರಾಧಿಸಿ ಕುರಿ, ಮೇಕೆ, ಕೋಳಿ, ತೆಂಗಿನಕಾಯಿಗಳೇ ಅಲ್ಲದೆ ಹನ್ನೆರಡು ಎಮ್ಮೆಗಳನ್ನು ಬಲಿಕೊಡುತ್ತಾರೆ (ಅದೇ ಪು. ೨೪). ದ್ಯಾಮವ್ವ ಉತ್ತರ ಕರ್ನಾಟಕದ ಹಲವು ಹಳ್ಳಿಗಳ ಗ್ರಾಮದೇವತೆ.

ಇತಿಹಾಸಕಾರ ಫೆರಿಷ್ತನು ಹಲವು ಪ್ರದೇಶಗಳು ಎಂದರೆ ಗೋವಾ ಬಂದರು, ಬೆಳಗಾವಿ ಕೋಟೆಯೂ ಸೇರಿದಂತೆ ಬಿಜನಗರ (ವಿಜಯನಗರದ) ದೊರೆಗಳ ಅಧೀನದಲ್ಲಿದ್ದವು ಎಂದಿದ್ದಾನೆ.

ಬಾಲಶಾಸ್ತ್ರಿ ಜಂಬೇಕರ್ ಎಂಬ ಪ್ರಸಿದ್ಧ ಮರಾಠಿ ವಿದ್ವಾಂಸರು ಶಿಕ್ಷಣ ಇಲಾಖೆಯಲ್ಲಿ ಹಲವು ವರ್ಷ ಕೆಲಸ ಮಾಡಿದವರು. ಅವರು 'ದಕ್ಷಿಣ ಮರಾಠಾ ಪ್ರಾಂತ'ದ ಭಾಷೆಯು ಕನ್ನಡವಾದ್ದರಿಂದ ಅಲ್ಲಿ ಕನ್ನಡ ಶಾಲೆಗಳು ಆರಂಭವಾಗಬೇಕೆಂದು ೧೮೪೨ರಲ್ಲಿ ವರದಿ ನೀಡಿದ್ದರು. ಇದು ನಡೆದುದು ರಸೆಲ್ಲರ ಕಾಲಕ್ಕಿಂತ ಮುಂಚೆ. ಮರಾಠಿಯು ಮುಂಬೈ ಪ್ರಾಂತದಲ್ಲಿ ಪೇಶ್ವೆಗಳ ಕಾಲದಿಂದ ಅಧಿಕೃತ ಭಾಷೆಯಾಗಿದ್ದರೂ ಎಲ್ಲರಿಗೂ ಆ ಭಾಷೆ ತಿಳಿಯದು. ಕನ್ನಡ ಮಕ್ಕಳಿಗೆ ಅವರ ಮಾತೃಭಾಷೆಯಲ್ಲಿಯೇ ಶಿಕ್ಷಣ ಕೊಡುವದು ಅಗತ್ಯವೆಂದೂ, ಬೆಳಗಾವಿ ಕನ್ನಡವು ನಿಜವಾದ ಕನ್ನಡವಲ್ಲವೆಂದು ಅನ್ನಿಸಿದರೆ ಶುದ್ಧವಾಗಿರುವ ಮೈಸೂರು ಕನ್ನಡದಲ್ಲಿ ಪಠ್ಯಪುಸ್ತಕಗಳನ್ನು ಸಿದ್ಧಪಡಿಸಬಹುದೆಂದೂ ವರದಿ ನೀಡಿದರು.

ಮುಂಬೈ ಶಿಕ್ಷಣಾಧಿಕಾರಿಯಾಗಿದ್ದ ರಸೆಲ್ಲರು ೧೮೬೫ – ೬೬ರಲ್ಲಿ ಬೆಳಗಾವಿಯಲ್ಲಿ ಮರಾಠಿಗರ ವಿರೋಧವನ್ನು ಲೆಕ್ಕಿಸದೆ ಕನ್ನಡ ತರಬೇತಿ ಕೇಂದ್ರವನ್ನು ತೆರೆದು ಅದು ಪೂನಾ ಅಹಮದಾಬಾದ್‌ಗಳ ಮರಾಠಿ ತರಬೇತಿ ಶಾಲೆಗೆ ಸಂಪಾದಿಯೆಂದರು (ಅದೇ ಪುಟ ೨೫).

ಆರ್. ವಿ. ಜಾಗೀರ್‌ದಾರರು (ಶ್ರೀರಂಗ) ಮರಾಠಿ ಭಾಷೆಯ ದಬಾವಣೆ ಧೋರಣೆ ಕುರಿತು ೧೯೩೦ರ ಲೇಖನವೊಂದರಲ್ಲಿ ೧೯೨೫ಕ್ಕೂ ಹಿಂದೆ ಆರ್. ಜಿ. ಜೋಶಿಯವರು ಮರಾಠಿಯಲ್ಲಿ ಬರೆದಿರುವುದನ್ನು ಉಲ್ಲೇಖಿಸಿ ಮುಂಬೈವರೆಗೆ ಕನ್ನಡ ಹಬ್ಬಿದ್ದುದನ್ನು ಹೇಳಿದ್ದಾರೆ. ಅವರಿಗಿಂತ ಮುಂಚೆಯೇ ನಾ. ಶ್ರೀ ರಾಜಪುರೋಹಿತರು, ಬಳಿಕ ಶಂ. ಬಾ. ಜೋಶಿಯವರು ಗೋದಾವರಿಯವರೆಗೆ ಹಬ್ಬಿದ್ದ ಕರ್ನಾಟಕದ ಬಗ್ಗೆ ಬರೆದಿದ್ದಾರೆ. ಡಾ॥ ಎಂ. ಚಿದಾನಂದಮೂರ್ತಿ ಅವರ ಭಾಷಿಕವು ಬೃಹತ್ ಕರ್ನಾಟಕ ನೀಲಗಿರಿಯಿಂದ ನಾಸಿಕದವರೆಗೆ ವಿಸ್ತರಿಸಿದ್ದ ಬಗ್ಗೆ ಹಲವು ವಿವರಗಳನ್ನು ಒಳಗೊಂಡಿದೆ.

ಇಪ್ಪತ್ತನೇ ಶತಮಾನದ ಎಂ. ಎಚ್. ಕೃಷ್ಣ, ಎಸ್. ಜಿ. ಸರ್ದೇಸಾಯಿ ಅವರಂತಹ ಶ್ರೇಷ್ಠ ಇತಿಹಾಸಕಾರರು ಬೆಳಗಾವಿಯು ಕನ್ನಡನಾಡೇ ಎಂಬುದನ್ನು ಎತ್ತಿ ಹಿಡಿದಿದ್ದಾರೆ (ಪುಟ ೨೬–೨೮). ಅವರು ಸಿದ್ಧಪಡಿಸಿರುವ ನಕ್ಷೆಗಳಲ್ಲಿ (೧೯೩೫ ಮತ್ತು ೧೯೪೬) ಬೆಳಗಾವಿ ಕರ್ನಾಟಕದ ಭಾಗವಾಗಿದೆ. ಸರ್ದೇಸಾಯಿಯವರು ಹೇಳುವ "ಹದಿನೇಳನೇ ಶತಮಾನದ ಮರಾಠಾ ದೇಶ"ದಲ್ಲಿ ಕೊಲ್ಹಾಪೂರವೂ ಸೇರಿದೆ. ಬೆಳಗಾವಿಯು ಅದರ ದಕ್ಷಿಣಕ್ಕೆ, ಮರಾಠಾ ದೇಶದ ಹೊರಗಿದೆ, ಎಂದರೆ ಕನ್ನಡನಾಡಿನಲ್ಲಿದೆ.

೧೯೨೧ರಲ್ಲಿ ಇಂಡಿಯನ್ ನ್ಯಾಷನಲ್ ಕಾಂಗ್ರೆಸ್ ತನ್ನ ಪ್ರಾದೇಶಿಕ ಘಟಕಗಳನ್ನು ರೂಪಿಸಿದಾಗ ಮರಾಠಿಗರಾದ ಎಸ್. ಸಿ. ಕೇಳ್ಕರ್ ಬೆಳಗಾವಿ ಜಿಲ್ಲೆಯನ್ನು ಕರ್ನಾಟಕ ಪ್ರದೇಶ ಕಾಂಗ್ರೆಸ್ ವ್ಯಾಪ್ತಿಗೆ ಸೇರಿಸಿದರು. ಆಗ ಯಾವ ಮಹಾರಾಷ್ಟ್ರೀಯರೂ ಪ್ರತಿಭಟಿಸಲಿಲ್ಲ. ಆ ಅಧಿವೇಶನದ ರೂವಾರಿ ಬೆಳಗಾವಿಯ ಗಂಗಾಧರರಾವ್ ದೇಶಪಾಂಡೆ 'ಕರ್ನಾಟಕದ ಸಿಂಹ' ಎಂದೇ ಪ್ರಸಿದ್ಧರಾಗಿದ್ದರು. ಆ ಅಧಿವೇಶನದ ಸ್ಥಳಕ್ಕೆ 'ವಿಜಯನಗರ' ಎಂದು ಹೆಸರಿಡಲಾಗಿತ್ತು.

೧೯೪೦ರಲ್ಲಿ ಬೆಳಗಾವಿಯಿಂದ ಪ್ರಕಟವಾಗಿರುವ ಗೋಪಾಳ ಆಬಾಜಿ ಜೋಗಳೇಕರ ಎಂಬ ಲೇಖಕರ ಮರಾಠಿ ಭಾಷೆಯ "ಕರ್ನಾಟಕಾ ಗೋಷ್ಠಿ ರೂಪ

"ಇತಿಹಾಸ" ಎಂಬ ಕೃತಿಯಲ್ಲಿ ನೀಡಿರುವ ಅರ್ವಾಚೀನ ಭೂಪಟದಲ್ಲಿ (ಆಧುನಿಕ ಭೂಪಟ) ಬೆಳಗಾವಿ, ಉತ್ತರ ಕನ್ನಡ ಜಿಲ್ಲೆಗಳೂ ಸೇರಿವೆ. ಅವೂ ಸೇರಿದಂತೆ ಧಾರವಾಡ, ಬಿಜಾಪೂರ ಜಿಲ್ಲೆಗಳನ್ನು 'ಮುಂಬಯಿ ಕರ್ನಾಟಕ' ಎಂದು ಗುಲ್ಬರ್ಗ, ಬೀದರ್, ರಾಯಚೂರುಗಳನ್ನು ನಿಜಾಮ ಕರ್ನಾಟಕ ಎಂದು ಗುರುತಿಸಲಾಗಿದೆ. ಬಳ್ಳಾರಿ, ಮಂಗಳೂರು, ಉದಕಮಂಡಲ (ನೀಲಗಿರಿ) ಇವುಗಳನ್ನು ಮದ್ರಾಸ್ ಕರ್ನಾಟಕ ಎಂದೂ, ಹಳೆಯ ಮೈಸೂರನ್ನು ಮೈಸೂರು ಸಂಸ್ಥಾನ ಎಂದು ಗುರುತಿಸಲಾಗಿದೆ. (ನೋಡಿ : ಗೋಪಾಳ ಆಬಾಜಿ ಜೋಗಳೇಕರ, ಕರ್ನಾಟಕ ಗೋಷ್ಠಿರೂಪ ಇತಿಹಾಸ, ೧೯೪೦).

ಕರ್ನಾಟಕದಲ್ಲಿನ ಮರಾಠೀ ನಾಲ್ಕನೇ ತರಗತಿ ವಿದ್ಯಾರ್ಥಿಗಳಿಗಾಗಿ ರಚಿತವಾಗಿರುವ 'ಕರ್ನಾಟಕ ಕಾಂತೀಲ ಮರಾಠೀ ಚೌಥ್ಯಾ ಇಯತ್ತೇ ಕರಿತಾಂ' ಎಂಬ ಗ್ರಂಥವು 'ಟೆಕ್ಸ್ಟ್‌ಬುಕ್ ಮ್ಹಾರೂನ್ ಮಂಜೂರ್' ಅರ್ಥಾತ್ ಮುಂಬೈ ಸರ್ಕಾರದ ಪಠ್ಯಪುಸ್ತಕ ಇಲಾಖೆಯಿಂದ ಮಂಜೂರಾಗಿದೆ. ಈ ಗ್ರಂಥಕ್ಕೆ ಸರ್ಕಾರದ ಅನುಮೋದನೆ ಇದೆ. ಆ ಪಠ್ಯಗ್ರಂಥದ ಆರಂಭದಲ್ಲಿ ಡಾ॥ ದ. ವಾ. ಚಾಪೇಕರ್ ಅವರು ಬರೆದಿರುವ 'ಕರ್ನಾಟಕ ಗೀತ' ಎಂಬ ಕವನ ಹೀಗಿದೆ :

**ಕರ್ನಾಟಕ ಗೀತ**

*ಕರ್ನಾಟಕ ಪುಣ್ಯಭೂಮಿ ಧನ್ಯ ತ್ರಿಭುವನೀಂ*
*ವೈಭವ ಖನಿ ತೇಜಸ್ವಿನಿ ತೂಂಚಿ ಜನ್ಮನೀ ॥ ಧ್ರು ॥*

*ಕೃಷ್ಣಾಜಲ ವಿಮಲಸ್ನಾನ ।*
*ತುಂಗೇ ಚೇ ಮದುರಪಾನ*
*ಮಲಪ್ರಭಾ ವಿಭವ ಭಾನ*
*ಭಾಗ್ಯಶಾಲಿನೀ (೧)*

*ಕ್ಷೇತ್ರ ಪುಣ್ಯ ಗೋಕರ್ಣ ।*
*ಉಡಪಿ ಉಳವಿ ಸಂಕೀರ್ಣ*
*ಹಂಪೀ ಉದ್ಭೂತ ಪೂರ್ಣ*
*ತ್ವದಂಗ ಪರ್ವಣೀ (೯)*

ಕವಿ ಚಾಪೇಕರರ ಕರ್ನಾಟಕ ದೇವಿಯ ಸ್ತುತಿ ನಿಜವಾಗಿಯೂ ಹೃದಯಸ್ಪರ್ಶಿಯಾಗಿದೆ. ಮರಾಠಿಗರು ಕನ್ನಡವನ್ನು ಔದಾಸೀನ್ಯದಿಂದ ನೋಡುತ್ತಿದ್ದರೂ ಕನ್ನಡವನ್ನು ಗೌರವಿಸುವ ಪ್ರಾಜ್ಞರು ಅಲ್ಲಿಯೂ ಇದ್ದರೆಂದು ಹೇಳಬಹುದು.

೧೯೪೮ರಲ್ಲಿ ನ್ಯಾಧರ್ ಆಯೋಗವು ನಿಯೋಜಿತ ಕರ್ನಾಟಕದ ಗಡಿಗಳೊಳಗೆ ಬೆಳಗಾವಿಯನ್ನು ಸೇರಿಸಿತು. ರಾಜ್ಯವನ್ನು ಪುನರ್ವಿಂಗಡಿಸಿ ಇಡೀ ಬೆಳಗಾವಿ ಜಿಲ್ಲೆಯನ್ನು ಕರ್ನಾಟಕಕ್ಕೆ ಸೇರಿಸಿತು. ರಾಜ್ಯ ಪುನರ್ವಿಂಗಡಣಾ ಆಯೋಗದ ಶಿಫಾರಸ್ಸಿನಂತೆ ರೂಪಗೊಂಡದ್ದು. ಇಂದಿನ ಕರ್ನಾಟಕಕ್ಕೆ ಮೊದಲು ಮೈಸೂರು ರಾಜ್ಯ ಎಂಬ ಹೆಸರಿತ್ತು. ದೇವರಾಜ ಅರಸುರವರ ಕಾಲದಲ್ಲಿ (೧೯೭೩) ಕರ್ನಾಟಕ ಎಂದು ನಾಮಕರಣ ಮಾಡಲಾಯಿತು.

**ಮಹಾಜನ ವರದಿ (ಡಾ॥ ಓಂಕಾರ ಕಾಕಡೆ ಕೃತಿಯಿಂದ)**

ರಾಜ್ಯ ಪುನರ್ವಿಂಗಡಣಾ ಆಯೋಗದ ಶಿಫಾರಸು ಬೆಳಗಾವಿಯನ್ನು ಕರ್ನಾಟಕಕ್ಕೆ ಸೇರಿಸಿರುವದನ್ನು ವಿರೋಧಿಸಿದ ಮಹಾರಾಷ್ಟ್ರದ ಒತ್ತಾಯದ ಮೇರೆಗೆ ಕೇಂದ್ರ ಸರಕಾರ ಕರ್ನಾಟಕ ಸರಕಾರದ ಒಪ್ಪಿಗೆ ಪಡೆದು ನ್ಯಾ॥ ಮಹಾಜನ್ ಆಯೋಗವನ್ನು ರಚಿಸಿತು. ಆಯೋಗವು ೧೯೬೭ರಲ್ಲಿ ವರದಿ ಸಲ್ಲಿಸಿತು. ಅದರ ಪ್ರಕಾರ ಕಾಸರಗೋಡು ಭಾಗ ಕರ್ನಾಟಕಕ್ಕೂ, ನಿಪ್ಪಾಣಿ ಭಾಗವು ಮಹಾರಾಷ್ಟ್ರಕ್ಕೂ, ಅಕ್ಕಲಕೋಟೆ ತಾಲೂಕು ಕರ್ನಾಟಕಕ್ಕೂ, ಸೇರ್ಪಡೆಯಾಗಬೇಕೆಂದು ಶಿಫಾರಸು ಮಾಡಿತು. ಆ ಶಿಫಾರಸನ್ನು ಕರಾರಿನ ಪ್ರಕಾರ ಕರ್ನಾಟಕ ಒಪ್ಪಿದರೂ ಮಹಾರಾಷ್ಟ್ರ ತಿರಸ್ಕರಿಸಿ ವಚನಭಂಗ ಮಾಡಿತು. ಪ್ರಧಾನಿ ರಾಜೀವ ಗಾಂಧಿ ಮಹಾರಾಷ್ಟ್ರದ ಬೆಳಗಾವಿ ಬೇಡಿಕೆಯನ್ನು ಸಾರಾಸಗಟಾಗಿ ತಳ್ಳಿಹಾಕಿದರೂ ಕೇಂದ್ರ ಸರಕಾರ ಲೋಕಸಭೆಯ ಮುಂದಿಟ್ಟು ಅದರ ಒಪ್ಪಿಗೆ ಪಡೆಯದೆ ಹೋದುದರಿಂದ ಬೆಳಗಾವಿ ಸಮಸ್ಯೆ ಜೀವಂತವಾಗಿ ಉಳಿಯಿತು. ಅದರ ಹಿಂದೆ ಮಹಾರಾಷ್ಟ್ರದ ಕೈವಾಡವಿರುವುದು ಸ್ವಯಂವೇದ್ಯ.

ಬೆಳಗಾವಿ ತಾಲ್ಲೂಕು (ನಗರ) ಕುರಿತು ಈ ರೀತಿ ಹೇಳಲಾಗಿದೆ :

"ಮಹಾರಾಷ್ಟ್ರ ಸರ್ಕಾರ ಮತ್ತು ಮಹಾರಾಷ್ಟ್ರ ಏಕೀಕರಣ ಸಮಿತಿ ಬೆಳಗಾವಿಯನ್ನು ಮಹಾರಾಷ್ಟ್ರಕ್ಕೆ ಸೇರಿಸಲು ಒತ್ತಾಯಿಸಿ ಚಳುವಳಿ ನಡೆಸಿದ್ದು, ಈ ಸಂಬಂಧ ಸಾಕಷ್ಟು ದಾಖಲೆಗಳನ್ನು ಆಯೋಗಕ್ಕೆ ಒದಗಿಸಿವೆ. ಇದಕ್ಕೆ ವಿರುದ್ಧವಾಗಿ ಹಲವಾರು ಕನ್ನಡಿಗರು ಮತ್ತು ಮೈಸೂರು ಸರ್ಕಾರ ಯಥಾಸ್ಥಿತಿ ಮುಂದುವರಿಸುವಂತೆ ಆಗ್ರಹಿಸಿ ಪೂರಕ ದಾಖಲೆಗಳನ್ನು ಮಂಡಿಸಿದ್ದಾರೆ. ಮಹಾರಾಷ್ಟ್ರ ಏಕೀಕರಣ ಸಮಿತಿಯು ತಾನು ಸಲ್ಲಿಸಿರುವ ಮನವಿ ಪುಟವನ್ನು ಅತ್ಯಂತ ಕಾಳಜಿ ಪೂರ್ವಕವಾಗಿ ಪರಿಶೀಲಿಸುವಂತೆ ಆಗ್ರಹಪಡಿಸಿದೆ.




ಈ ಪ್ರಕಾರ ನಾನು ಈ ವಿಷಯ ಕುರಿತು ತೀರ್ಮಾನ ಕೈಗೊಳ್ಳುವ ಮುನ್ನ ಹಲವಾರು ಬಾರಿ ಸಮಿತಿಯ ಮನವಿ ಪತ್ರವನ್ನು ಓದಿದ್ದೇನೆ."

"ಅತ್ಯಂತ ವಿವಾದಾತ್ಮಕವಾದ ಬೆಳಗಾವಿ ನಗರದ ಕುರಿತು ಎರಡೂ ಕಡೆಯ ವಾದ – ಪ್ರತಿವಾದಗಳನ್ನು ಆಲಿಸಿದ ಮೇಲೆ ಈ ವಿಷಯಕ್ಕೆ ಸಂಬಂಧಿಸಿದಂತೆ ಸಲ್ಲಿಸಲಾಗಿರುವ ಅಹವಾಲುಗಳು, ಮನವಿ ಪತ್ರಗಳನ್ನು ಅತ್ಯಂತ ಕಾಳಜಿಪೂರ್ವಕವಾಗಿ ಪರಿಶೀಲಿಸಿದ ನಂತರ ಶಹಾಪೂರ ಮತ್ತು ಕಂಟೋನ್ಮೆಂಟ್ ಸಹಿತ ಬೆಳಗಾವಿ ಯನ್ನು ಮಹಾರಾಷ್ಟ್ರಕ್ಕೆ ಸೇರ್ಪಡೆ ಮಾಡುವಂತೆ ನಾನು ಶಿಫಾರಸು ಮಾಡಲು ಸಾಧ್ಯವಿಲ್ಲ. ಇಡೀ ವಿವಾದವನ್ನು ಸಮಗ್ರವಾಗಿ ಮತ್ತು ವಸ್ತುನಿಷ್ಠವಾಗಿ ಪರಿಶೀಲಿಸಿದ ನಂತರವೇ ನಾನು ಈ ತೀರ್ಮಾನಕ್ಕೆ ಬಂದಿದ್ದೇನೆ."

"ಮರಾಠಿ ಭಾಷಿಕ ಜನರು ಸ್ವಲ್ಪಮಟ್ಟಿನ ಬಹುಮತ ಹೊಂದಿದ್ದಾರೆ ಎಂಬ ಕಾರಣಕ್ಕೆ ಬೆಳಗಾವಿ ನಗರವನ್ನು ಹಸ್ತಾಂತರಿಸಲಾಗದು. ಈ ಜನಸಂಖ್ಯೆಯಲ್ಲಿ ಹೆಚ್ಚುಕಡಿಮೆ ಕೂಡ ಆಗಿದೆ. ಸಾಮಾನ್ಯವಾಗಿ ನಾನು ಯಾವುದೇ ಒಂದು ಪ್ರದೇಶವನ್ನು ಹಸ್ತಾಂತರಿಸಲು ಶಿಫಾರಸು ಮಾಡಿದರೆ ಅದರ ಜನಸಂಖ್ಯೆ ಕನಿಷ್ಠ ಶೇ. ೬೦ಕ್ಕಿಂತ ಕಡಿಮೆಯಿರುವುದಿಲ್ಲ. ಅಷ್ಟೇ ಅಲ್ಲ, ಎಷ್ಟೋ ಸಂದರ್ಭಗಳಲ್ಲಿ ಅದು ಶೇ. ೮೦ರಷ್ಟಿದೆ. ಈ ತತ್ವವನ್ನು ಬೆಳಗಾವಿ ನಗರದ ಸಮಸ್ಯೆಯ ಇತ್ಯರ್ಥಕ್ಕೆ ಅನ್ವಯಿಸಿದಾಗ ಮಹಾರಾಷ್ಟ್ರದ ಬೇಡಿಕೆಯನ್ನು ಈಡೇರಿಸಲು ಸಾಧ್ಯವಿಲ್ಲ. ನಗರದಲ್ಲಿ ಮರಾಠಿ ಭಾಷಿಕರ ಜನಸಂಖ್ಯೆ ಶೇ. ೪೬ ಮಾತ್ರ. ಆದರೆ ಸುತ್ತಮುತ್ತಲಿನ ಮರಾಠಿ ಭಾಷಿಕ ಹಳ್ಳಿಗಳನ್ನು ಸೇರಿಸಿದರೂ ಈ ಜನಸಂಖ್ಯೆ ಶೇ. ೪೭ರಷ್ಟಾಗುತ್ತದೆ."

ಬೆಳಗಾವಿ ಮಾಧವಪೂರ, ಅನಗೋಳ, ವಡಗಾಂವ, ಧಾಮನೆ (ದಕ್ಷಿಣ ಬೆಳಗಾವಿ), ಈ ಪ್ರದೇಶದ ಹೆಚ್ಚು ಜನಸಂಖ್ಯೆ ೧,೭೪,೪೨೫. ಈ ಪೈಕಿ ೮೩,೬೭೨ ಮರಾಠಿಗರು, ೪೬,೭೯೩ ಕನ್ನಡಿಗರು ಮತ್ತು ೨೫,೦೦೦ ಇತರ ಭಾಷಿಕರು. ಆದರೆ ಮರಾಠಿ ಭಾಷಿಕರ ಅನುಕೂಲಕ್ಕಾಗಿ ಸುಮಾರು ೯೦ ಸಾವಿರ ಇತರ ಭಾಷಿಕರ ಹಿತವನ್ನು ಬಲಿಕೊಡಲು ಸಾಧ್ಯವಿಲ್ಲ. ನಗರದಲ್ಲಿ ಮರಾಠಿ ಭಾಷಿಕರು ಅತಿ ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ ಎಂಬುದು ಸತ್ಯ. ಆದರೆ ಇದು ಯಥಾಸ್ಥಿತಿ ಬದಲಾವಣೆ ಮಾಡಲು ಬಲವಾದ ಕಾರಣವಾಗಲಾರದು.

ಭೌಗೋಲಿಕವಾಗಿ ಬೆಳಗಾವಿ ಪಶ್ಚಿಮದಲ್ಲಿ ಮರಾಠಿ ಭಾಷಿಕ ಹಳ್ಳಿಗಳಿಗೆ ಹೊಂದಿಕೊಂಡಿದೆ. ಆದರೆ ಉಳಿದ ಮೂರು ದಿಕ್ಕುಗಳಲ್ಲಿ ಕನ್ನಡದ ಹಳ್ಳಿಗಳೊಂದಿಗೆ ಹೊಂದಿಕೊಂಡಿದೆ. ಕುಡಚಿ ಮತ್ತು ಕಣಬರಗಿ ಹಳ್ಳಿಗಳನ್ನು ಹಸ್ತಾಂತರಿಸಿರುವಂತೆ ಕೇಳಿರುವ ಮಹಾರಾಷ್ಟ್ರದ ಬೇಡಿಕೆಯನ್ನು ಈಡೇರಿಸಲು ಸಾಧ್ಯವಿಲ್ಲ. ಯಾಕೆಂದರೆ ಈ ಎರಡೂ ಹಳ್ಳಿಗಳಲ್ಲಿ ಕನ್ನಡ ಭಾಷೆಯ ಪ್ರಾಬಲ್ಯ ಇದೆ. ೧೯೫೧ರ ಜನಗಣತಿ ಪ್ರಕಾರ ಕುಡಚಿಯಲ್ಲಿ ಶೇ. ೭೩.೪ ಮತ್ತು ಕಣಬರಗಿಯಲ್ಲಿ ಶೇ. ೬೬.೩ ಕನ್ನಡಿಗರಿದ್ದರೆ, ಮರಾಠಿ ಭಾಷಿಕರು ಕುಡಚಿಯಲ್ಲಿ ಶೇ. ೨೬.೨ ಮತ್ತು ಕಣಬರಗಿಯಲ್ಲಿ ಶೇ. ೩೧.೧ರಷ್ಟು ಇದ್ದಾರೆ. ಆದರೆ ೧೯೬೧ರ ಜನಗಣತಿಯಲ್ಲಿ ಕುಡಚಿಯಲ್ಲಿ

ಮರಾಠಿ ಭಾಷಿಕರು ಶೇ. ೫೦.೪ ಮತ್ತು ಕನ್ನಡಿಗರು ಶೇ. ೪೭.೯, ಅಲ್ಪ ಬಹುಮತ ಭಾಷಿಕರಿರುವುದರಿಂದ ಕಣಬರಗಿಯನ್ನು ಮಹಾರಾಷ್ಟ್ರಕ್ಕೆ ಸೇರಿಸಲಾಗದು.

ನನ್ನ ಅಭಿಪ್ರಾಯದಲ್ಲಿ ಜನಸಾಮಾನ್ಯರಿಗೆ ಈ ಗಡಿವಿವಾದದಲ್ಲಿ ಆಸಕ್ತಿಯೇ ಇಲ್ಲ. ಇದು ಕೇವಲ ರಾಜಕೀಯ ಕಾರ್ಯಕರ್ತರು ಹುಟ್ಟುಹಾಕಿದ ಸಮಸ್ಯೆ, ಅಷ್ಟೆ. ಬೆಳಗಾವಿ ಮತ್ತು ಇತರ ಕೆಲವು ಪ್ರದೇಶಗಳನ್ನು ಮಹಾರಾಷ್ಟ್ರಕ್ಕೆ ಸೇರಿಸಬೇಕು ಎಂಬ ಹಠದಿಂದ ಚಳುವಳಿ ಆರಂಭಿಸಿರುವ ಮಹಾರಾಷ್ಟ್ರ ಏಕೀಕರಣ ಸಮಿತಿ ಕಾರ್ಯಕರ್ತರು ಭಾಷಾಭಿಮಾನದ ದುರುಪಯೋಗ ಮಾಡಿಕೊಂಡು ಅಶಾಂತಿ ಹುಟ್ಟುಹಾಕುತ್ತಿದ್ದಾರೆ.

ಈ ಎಲ್ಲ ಕಾರಣಗಳಿಗಾಗಿ ಬೆಳಗಾವಿ ಮತ್ತು ಸುತ್ತಮುತ್ತಲಿನ ಮಾಧವಪೂರ, ಅನಗೋಳ, ವಡಗಾಂವ, ಧಾಮನೆ–ಎನ್ ಬೆಳಗಾವಿ ಹಳ್ಳಿ ಹಾಗೂ ಮಜಗಾಂವ್ ಮತ್ತು ಪೀರನವಾಡಿಯ ೨ ಕೈಗಾರಿಕಾ ಪ್ರದೇಶಗಳನ್ನು ಮಹಾರಾಷ್ಟ್ರಕ್ಕೆ ಹಸ್ತಾಂತರಿಸಲು ಸಾಧ್ಯವಿಲ್ಲ.

**ಬೆಳಗಾವಿ ತಾಲ್ಲೂಕು (ಗ್ರಾಮೀಣ)**

ಈಗಾಗಲೇ ಬೆಳಗಾವಿ ಮತ್ತು ಸುತ್ತಮುತ್ತಲಿನ ಮಾಧವಪೂರ, ಅನಗೋಳ, ವಡಗಾಂವ, ಧಾಮನೆ–ಎನ್ ಈ ಹಳ್ಳಿ ಹಾಗೂ ಮಜಗಾಂವ್ ಮತ್ತು ಪೀರನವಾಡಿಯ ೨ ಕೈಗಾರಿಕಾ ಪ್ರದೇಶಗಳನ್ನು ಮಹಾರಾಷ್ಟ್ರಕ್ಕೆ ಹಸ್ತಾಂತರಿಸಲು ಸಾಧ್ಯವಿಲ್ಲ ಎಂದು ಶಿಫಾರಸು ಮಾಡಿರುವುದರಿಂದ ಮಹಾರಾಷ್ಟ್ರದ ಬೇಡಿಕೆ ೭೬ಕ್ಕೆ ಇಳಿದಿತ್ತು. ಮಹಾರಾಷ್ಟ್ರ ಸಲ್ಲಿಸಿರುವ ೯ ಹಳ್ಳಿಗಳ ಬೇಡಿಕೆಯನ್ನು ಒಪ್ಪಲು ಸಾಧ್ಯವಿಲ್ಲ. ಹೀಗಾಗಿ ನೀಲಜಿ, ಕಲಕಂಬಾ, ಮುತಗಾ, ಸಾಂಬ್ರಾ , ಮುಚ್ಚಂಡಿ, ಬಸರಿಕಟ್ಟೆ , ಖನಗಾಂವ್, ಕೆ. ಚಂದಗಡ ಅಷ್ಟೇ ಗ್ರಾಮಗಳನ್ನು ಮಹಾರಾಷ್ಟ್ರಕ್ಕೆ ಹಸ್ತಾಂತರಿಸುವಂತೆ ಶಿಫಾರಸು ಮಾಡಲು ಸಾಧ್ಯವಿಲ್ಲ. ಈಗ ಮಹಾರಾಷ್ಟ್ರದ ಬೇಡಿಕೆ ೬೫ಕ್ಕೆ ಇಳಿದಿತ್ತು.

ಕನ್ನಡ ಭಾಷಿಕ ವಲಯದಲ್ಲಿರುವ ಹಲಗಾ, ಮಾರನಹೊಳಿ ಮತ್ತು ಬಂಡಿಹೊಳಿ ಗ್ರಾಮಗಳನ್ನು ಕೂಡ ಹಸ್ತಾಂತರಿಸಲು ಶಿಫಾರಸು ಮಾಡಲು ಸಾಧ್ಯವಿಲ್ಲ. ಆದರೆ ಕನ್ನಡದ ಹಳ್ಳಿಗಳಾದ ಸಂತಿ ಬಸ್ತವಾಡ ಮತ್ತು ಕುಟಲವಾಡಿ ಗ್ರಾಮಗಳು ಮರಾಠಿ ಭಾಷಿಕ ಹಳ್ಳಿಗಳಿಂದ ಸುತ್ತುವರಿದಿರುವುದರಿಂದ ಈ ಎರಡೂ ಗ್ರಾಮಗಳನ್ನು ಮಹಾರಾಷ್ಟ್ರಕ್ಕೆ ಹಸ್ತಾಂತರಿಸುವಂತೆ ಶಿಫಾರಸು ಮಾಡಲಾಗಿದೆ.

ಮಹಾರಾಷ್ಟ್ರ ಏಕೀಕರಣ ಸಮಿತಿ ಕಾಕತಿ ಮತ್ತು ಯಮುನಾಪೂರ ಗ್ರಾಮಗಳನ್ನು ಮಹಾರಾಷ್ಟ್ರಕ್ಕೆ ಹಸ್ತಾಂತರಿಸುವಂತೆ ಸಲ್ಲಿಸಿರುವ ಬೇಡಿಕೆಯನ್ನು ಪುರಸ್ಕರಿಸಲು ಸಾಧ್ಯವಿಲ್ಲ. ಬೆಳಗಾವಿ ನಗರ ಮತ್ತು ಪೂರ್ವ ಭಾಗ ೯ ಹಳ್ಳಿಗಳನ್ನು ಗಮನದಲ್ಲಿಟ್ಟುಕೊಂಡು ಈ ಎರಡು ಹಳ್ಳಿಗಳನ್ನು ಮಹಾರಾಷ್ಟ್ರಕ್ಕೆ ಹಸ್ತಾಂತರಿಸುವಂತೆ ಶಿಫಾರಸು ಮಾಡಿಲ್ಲದಿರುವುದರಿಂದ ಕನ್ನಡಿಗರಿರುವ ಈ ಹಳ್ಳಿಗಳನ್ನು ಮಹಾರಾಷ್ಟ್ರಕ್ಕೆ ಹಸ್ತಾಂತರಿಸುವಂತೆ ಶಿಫಾರಸು ಮಾಡುವ ಪ್ರಮೇಯ ಉದ್ಭವಿಸುವುದಿಲ್ಲ.

ಈ ಮೇಲಿನ ಎಲ್ಲ ಅಂಶಗಳ ಹಿನ್ನೆಲೆಯಲ್ಲಿ ಬೆಳಗಾವಿ ತಾಲ್ಲೂಕಿನ ಒಟ್ಟು ೬೨ ಹಳ್ಳಿಗಳನ್ನು ಮೈಸೂರು ರಾಜ್ಯದಿಂದ ಮಹಾರಾಷ್ಟ್ರಕ್ಕೆ ಹಸ್ತಾಂತರಿಸುವಂತೆ ಶಿಫಾರಸು ಮಾಡಲಾಗಿದೆ. ಮೈಸೂರು ರಾಜ್ಯದಿಂದ ಮಹಾರಾಷ್ಟ್ರಕ್ಕೆ ವರ್ಗಾವಣೆಯಾಗುತ್ತಿರುವ ಈ ೬೨ ಹಳ್ಳಿಗಳಲ್ಲಿ ಒಟ್ಟು ೭೫,೩೦೩ ಜನಸಂಖ್ಯೆಯಿದ್ದು, ಈ ಪೈಕಿ ೬೦,೯೯೯ ಮರಾಠಿ ಭಾಷಿಕರು, ಉಳಿದವರು ಕನ್ನಡ ಮತ್ತಿತರ ಭಾಷಿಕರಿದ್ದಾರೆ. ಶೇಕಡವಾರು ಲೆಕ್ಕದಲ್ಲಿ ಶೇ. ೮೦.೬ ಮರಾಠಿ ಭಾಷಿಕರಿದ್ದರೆ ಶೇ. ೧೬.೨ ಕನ್ನಡಿಗರಿದ್ದಾರೆ.

ಮೇಲ್ಕಂಡ ಎಲ್ಲ ಅಂಶಗಳನ್ನು ಪರಿಶೀಲಿಸಿದಾಗ ಬೆಳಗಾವಿ ಜಿಲ್ಲೆ ಕರ್ನಾಟಕದ ಅವಿಭಾಜ್ಯ ಅಂಗ ವಾಗಿದ್ದು, ೧೮ನೇ ಶತಮಾನದ ಕೊನೆ ಅಥವಾ ೧೯ನೇ ಶತಮಾನದ ಆದಿಯಿಂದಲೇ ಕನ್ನಡ ಅನುಷ್ಠಾನದಲ್ಲಿತ್ತು ಎಂಬುದರಲ್ಲಿ ಯಾವುದೇ ಸಂದೇಹವಿಲ್ಲ. ಗಡಿ ವಿವಾದದಲ್ಲಿ ಶ್ರೀಸಾಮಾನ್ಯನಿಗೆ ಎಳ್ಳುಕಾಳಿನಷ್ಟೂ ಆಸಕ್ತಿಯಿಲ್ಲ.

ಕನ್ನಡಿಗರು ಹಾಗೂ ಮರಾಠಿಗರು ಪ್ರಾಚೀನ ಕಾಲದಿಂದಲೂ ಅನ್ಯೋನ್ಯವಾಗಿ ಬಾಳುತ್ತ ಬಂದಿದ್ದಾರೆ. ಆದರೆ ಈ ವಿವಾದದ ಹಿಂದೆ ರಾಜಕೀಯ ಉದ್ದೇಶಗಳಿವೆ ಎಂಬುದರಲ್ಲಿ ಎರಡು ಮಾತಿಲ್ಲ.

**ಡಾ|| ರಾಜಶೇಖರ ಇಚ್ಚಂಗಿ**
ಸಹ ಪ್ರಾಧ್ಯಾಪಕರು, ಎಸ್. ಎಸ್. ಎನ್. ಕಾಲೇಜು, ಹುಕ್ಕೇರಿ




## ಮುಖವಾಡದ ಮರೆಯಲ್ಲಿ

ಅಣ್ಣ,
ನನ್ನ ನೀ
ಜಾತಿ–ಧರ್ಮದ ಕಣ್ಣಿಂದ ಅಳದ–
ನೋಡಿ ನಗಬ್ಯಾಡೋ
ಒಮ್ಮೆSS–ಒಮ್ಮೆ
ಮನುಷ್ಯತ್ವದ ಕರಳಿನಿಂದ
ಬೆರಳು ಹಿಡಿದು
ಜಗ್ಗಿ ಅಪ್ಪಿಬಿಡು
ಕಾಣದಂತೆ ಅತ್ತು
ಕರಗಲಿ–ಚಿಗುರಲಿ ಮನ !

ಪ್ರತಿ ಆತ್ಮಕ್ಕೂ ಗೊತ್ತು
ತಾ ಹೊದ್ದ ಕವಚದ ಪಾಪ !
ಕಾಣದಾಗಿದೆ ಮನ–ಮನದಲ್ಲೂ
ಸಾಚಾತನದ ರೂಪ... !

ಎಣ್ಣೆಯೂ ಇದೆ
ಹಣತೆಯಲ್ಲಿ; ಜೊತೆಗೆ ಬತ್ತಿಯೂ
ಬಿರುಗಾಳಿಯ ಉಸಿರಿಲ್ಲದಿದ್ದರೂ
ಬಿಕ್ಕುತಿದೆ ದೀಪ ?

ತಾಸಿನ ಮಾತು
ಇಲ್ಲಿ ನಗೆ ಹೊನಲು ಚೆಲ್ಲಿದರೆ

ಅಲ್ಲಿ ಎಲ್ಲಿಯೋ
ಕರುಳಿಗೆ–ಕರುಳSS ಜಗ್ಗಿ
ಜೀವ ಹಿಂಡತ್ತ !

ದ್ವೇಷಕ್ಕ ಕೂಸುSS
ಕೊಡ್ಡಕೆರ–
ಬರ–ಬರ ಜಗ್ಗತ್ತ ;
ಪ್ರೀತಿಗೆ–
ರೌರವ ರಾಕ್ಷಸ
ಅಂಗೂಲಿಮಾಲ, ಬುದ್ಧನ
ಕರುಣೆಗೆ ಬದಲಾದ
ಅಲ್ಲ ಬೆಳಕಾದ !
ಸಾಕ್ಷಿ ಐತಿ ಇತಿಹಾಸ

ಖಂಡಿತ ನೀನೀಗ
ಬುದ್ಧನಲ್ಲ ;
ನಾನಂತೂ ಅಲ್ಲವೇ ಅಲ್ಲ
ಆ... ಮಾಲ !

ಯಾರೋ ಹಚ್ಚಿಟ್ಟ
ದೀಪದ ಬೆಳಕಿನೊಳಗ
ಸರಿ ಹೆಜ್ಜಿ ಹಾಕೋಣು
ಜಗತ್ತು ಬೊಗಳಿದ್ರ
ನಾವತ್ತು ; ನಗಿಸಿಬಿಡೋಣು !

**ಜೆ. ಬಿ. ಕಾಶೀಮ**
ಅಂಚೆ : ಕೊಣ್ಣೂರ – ೫೮೨ ೨೦೬,
ನರಗುಂದ ತಾಲೂಕು, ಗದಗ ಜಿಲ್ಲೆ



# ಮೋಸಗಾರರಿದ್ದಾರೆ – ಜಾಗ್ರತೆ

**ಮೂ**ಢನಂಬಿಕೆಗಳನ್ನು ನಿವಾರಿಸಲು ಕಾನೂನಿನ ಕಟ್ಟುನಿಟ್ಟಿನ ದಾರಿಯನ್ನು ಆಯ್ಕೆಮಾಡಿಕೊಂಡು ಅದರ ಬಗ್ಗೆ ಚರ್ಚೆಗಳು ನಡೆಯುತ್ತಿರುವ ಸಂದರ್ಭವಿದು. ನಮ್ಮ ದೇಶದಲ್ಲಿ ಮೂಢನಂಬಿಕೆಗಳು ಹಾಸುಹೊಕ್ಕಾಗಿ ದಿನನಿತ್ಯದ ಜೀವನದಲ್ಲಿ ಬೆರೆತುಹೋಗಿವೆ. ಇವುಗಳ ಬಗ್ಗೆ ಜನಜಾಗೃತಿ ಉಂಟುಮಾಡಲು ಅನೇಕ ಸಂಘ–ಸಂಸ್ಥೆಗಳು, ವ್ಯಕ್ತಿಗಳು ಅನೇಕ ದಶಕಗಳಿಂದ ಪ್ರಯತ್ನಿಸುತ್ತಿದ್ದಾರೆ. ಇಲ್ಲಿ 'ಪ್ರಯತ್ನ' ಎಂಬ ಪದಪ್ರಯೋಗ ಉದ್ದೇಶಪೂರ್ವಕವಾದದ್ದು.

ನಮ್ಮಲ್ಲಿ ಮೂಢನಂಬಿಕೆಗಳ ಹರಹು ಬಹು ವಿಸ್ತಾರ. ಮುಂಜಾನೆ ಕಣ್ಣುಬಿಡುವಾಗಿನಿಂದ ಹಿಡಿದು ರಾತ್ರಿ ನಿದ್ದೆಗೆ ಜಾರುವವರೆಗೆ ಅನೇಕ ಮೂಢನಂಬಿಕೆಗಳು ನಮಗೆ ಎದುರು ನಿಲ್ಲುತ್ತವೆ. ಬೆಳಿಗ್ಗೆ ಏಳುವಾಗ ಎಡ ಮಗ್ಗುಲಲ್ಲಿ ಏಳಬಾರದು, ಎದ್ದ ಕೂಡಲೇ ಕಸಬರಿಗೆ, ಚಪ್ಪಲಿ ಇತ್ಯಾದಿ ನೋಡಬಾರದು. ಇನ್ನು ಬೆಕ್ಕಂತೂ ಬಿಡಿ. ಆ ಪಾಪದ ಪ್ರಾಣಿ ಯಾವ ಸಂದರ್ಭದಲ್ಲಿ ಎದುರು ಬಂದರೂ ಅಪಶಕುನವೇ. ಬೆಳಿಗ್ಗೆ ಎದ್ದು ವಿಧವೆಯರನ್ನು ನೋಡಬಾರದು, ಖಾಲಿ ಕೊಡ ಯಾವ ಸಂದರ್ಭದಲ್ಲೂ ಎದುರು ಬರಬಾರದು, ಎಡಕಣ್ಣು ಹಾರಬಾರದು, ಒಂಟಿ ಸೀನು ಬರಬಾರದು, ಹೊಸ್ತಿಲ ಮೇಲೆ ಕೂಡಬಾರದು, ಸೀನಬಾರದು, ಹಲ್ಲಿ ಮೈಮೇಲೆ ಬೀಳಬಾರದು... ಹೀಗೆ ದಿನವಿಡೀ ನೂರಾರು ಮೂಢನಂಬಿಕೆಗಳ ಎದುರು ಹಾಯ ಬೇಕಾಗುತ್ತದೆ. ಇವೆಲ್ಲವುಗಳಿಗೆ ಕೆಟ್ಟ ಅರ್ಥವನ್ನು ಹಚ್ಚಿದ್ದಾದರೂ ಹೇಗೆ...? ಏಕೆ...? ಯಾರು...? ಎಂಬಿತ್ಯಾದಿ ಪ್ರಶ್ನೆಗಳಿಗೆ ಉತ್ತರವೇನು ಸುಲಭವಲ್ಲ. ಇಂತಹ ನೂರಾರು ಮೂಢನಂಬಿಕೆಗಳು ಪ್ರಾದೇಶಿಕವಾಗಿ ಬದಲಾಗುತ್ತಲೂ ಹೋಗುತ್ತವೆ. ಈ ಸಣ್ಣಪುಟ್ಟ ಮೂಢನಂಬಿಕೆಗಳಿಂದ ಹಿಡಿದು ಉರುಳು ಸೇವೆ, ಹೊರಳು ಸೇವೆ, ಜಡೆ ಬಿಡುವುದು, ದೇವರಿಗೆ ಬಿಡುವುದು, ದೇವದಾಸಿ ಪದ್ಧತಿ, ಮುಂತಾದ ಸಾಮಾಜಿಕ ಅನಿಷ್ಟಗಳವರೆಗೆ ಇವುಗಳ ವೈವಿಧ್ಯತೆ ಹಾಗೂ ಭಿನ್ನತೆ ಅಪಾರ.

ಇಂತಹ ನಂಬಿಕೆಗಳಲ್ಲಿ ಜನರಿಗೆ ಇರುವ ಶ್ರದ್ಧೆ, ಭಕ್ತಿಯನ್ನು ಕದಲಿಸುವುದು ಅದರಲ್ಲೂ ಗ್ರಾಮೀಣ ಭಾಗದಲ್ಲಿ ಆಗದ ಮಾತೇ ಸರಿ. ಕೆಲವು ನಂಬಿಕೆಗಳನ್ನು ಅಲ್ಲಗಳೆದರೆ ತಮ್ಮ ಮನೆಗೆ, ಮನೆತನಕ್ಕೆ, ಗ್ರಾಮಕ್ಕೆ ಹಾನಿಯಾಗುತ್ತದೆ ಎಂಬ ಭಯ ಜನರಲ್ಲಿ. ಇವುಗಳಿಗೆ ಪೂರಕವಾಗಿ ಆಯಾ ಊರು–ಕೇರಿಗಳಲ್ಲಿ ಕೆಲ ನಂಬಿಕೆಗಳಿಗೆ ಇಂಬುಕೊಡುವ, ಕಾಕತಾಳೀಯವೋ ಎಂಬಂಥ ಅನೇಕ ಘಟನೆಗಳ ರಂಜಿತ ಕಥೆಗಳು ಜನರ ಬಾಯಲ್ಲಿ ನಲಿಯುತ್ತಿರುತ್ತವೆ. ಹಳ್ಳಿಗಾಡಿನಲ್ಲಿ ಗಲ್ಲಿಗಲ್ಲಿಗೊಂದು ಭೂತದ ಕಟ್ಟೆ, ಚೌಡಿ ಮರಗಳಿದ್ದು, ಅವುಗಳಿಗೆ ಕೆಲ ಸಂದರ್ಭಗಳಲ್ಲಿ ಪ್ರತಿದಿನ, ಇನ್ನು ಕೆಲ ಸಂದರ್ಭಗಳಲ್ಲಿ ಅಮಾವಾಸ್ಯೆ, ಹುಣ್ಣಿಮೆಗಳಂದು ವಿಶೇಷ ಪೂಜೆ–ಪುನಸ್ಕಾರಗಳು ನಡೆಯುತ್ತವೆ. ಇವುಗಳೇ ಅಲ್ಲದೆ ಅನೇಕ ಆಚರಣೆಗಳೂ ಜಾರಿಯಲ್ಲಿವೆ. ಅವುಗಳೂ ಸಹ ಜನಜೀವನದೊಂದಿಗೆ ನೇರಸಂಪರ್ಕ ಹೊಂದಿದಂಥವು. ಇವುಗಳಲ್ಲಿ, ಜಾತ್ರೆ, ವ್ರತಾಚರಣೆಗಳು, ಹೋಮ–ಹವನಗಳು, ಮಡಿ–ಮೈಲಿಗೆಗಳು, ಊಟ–ಉಪಚಾರ, ಸಂತರ್ಪಣೆ, ಬಲಿ ಮುಂತಾದವೂ ಸೇರಿಕೊಳ್ಳುತ್ತವೆ. ಬೇರೆ ಬೇರೆ ಧರ್ಮಗಳಲ್ಲಿ ಇವು ಬೇರೆ ಬೇರೆ ರೀತಿಯಲ್ಲಿ ರೂಢಿಯಲ್ಲಿರುತ್ತವೆ. ಈ ಮೂಢನಂಬಿಕೆಗಳು, ನಂಬಿಕೆಗಳು, ಆಚರಣೆಗಳು ಇವೆಲ್ಲವುಗಳ ಸಂಖ್ಯೆ ಒಟ್ಟಾಗಿ ಎಷ್ಟು ಸಹಸ್ರವಿದೆಯೊ !

ಇವುಗಳಲ್ಲಿ ನಂಬಿಕೆಗಳು, ಆಚರಣೆಗಳು ಅನೇಕ ಸಂದರ್ಭಗಳಲ್ಲಿ ಅಪಾಯಕಾರಿ ಅಲ್ಲ. ಅವು ಆಯಾ ಜನಸಮುದಾಯದ ಒಳಿತಿಗಾಗಿ ಎಂದು ಬಹುತೇಕ ವಾಗಿ ಗುರುತಿಸಲ್ಪಡುವವು. ಇವುಗಳಲ್ಲಿ ದೇವ, ದೈವ, ಸ್ಥಳ ಮಹಿಮೆ ಮುಂತಾದ ಅಪಾಯಕಾರಿಯಲ್ಲದ ಅಂಶಗಳು ಹೆಚ್ಚು ಇರುತ್ತವೆ. ಇನ್ನು ಹಲವು ಆಚರಣೆಗಳು ಸಾಂಸ್ಕೃತಿಕ, ಸಾಮಾಜಿಕ ಹಾಗೂ

**ನೂತನ ಎಮ್. ದೋಶೆಟ್ಟಿ**

ಮಾನವ ದಾಹ, ಹೆಚ್ಚುಗಾರಿಕೆ ಹಾಗೂ ಪ್ರತಿಷ್ಠೆಗಳು, ದೇವರು, ದೈವ, ಗುಡಿ–ಗುಂಡಾರಗಳು, ನಂಬಿಕೆ, ಆಚರಣೆಗಳನ್ನೂ ಬಿಟ್ಟಿಲ್ಲ. ಅದರಂತೆ ಮೂಢನಂಬಿಕೆಗಳನ್ನು ಉಳಿಸುವ, ಪೋಷಿಸುವ ವರ್ಗವೂ ಇದೆ. ಎಲ್ಲಿಯವರೆಗೆ ಅವನ್ನು ನಂಬುವ ವರ್ಗವಿರುತ್ತದೆಯೋ ಅಲ್ಲಿಯವರೆಗೂ ಅಂತಹ ನಂಬಿಕೆಗಳ ಮೌಢ್ಯತೆಯ ನೆಲೆಯನ್ನು ವ್ಯವಸ್ಥಿತವಾಗಿ ಈ ವರ್ಗ ವಿಸ್ತರಿಸುತ್ತದೆ. ಇದನ್ನು ಅರಿಯಬೇಕಾದವರು ಮೋಸಹೋಗುವ ಜನರೇ. ನಟರಾಜ ಹುಳಿಕಲ್ ಅವರು ದಶಕದಿಂದ ಮೂಢನಂಬಿಕೆಗಳ ವಿರುದ್ಧ ಸಮರ ಸಾರಿದ್ದಾರೆ, ಜನರನ್ನು ಜಾಗೃತಗೊಳಿಸಲು ಪವಾಡ ಬಯಲು ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಾರೆ. ಪ್ರಸಿದ್ಧ ಜಾದೂಗಾರರಾಗಿದ್ದ ಪಿ. ಸಿ. ಸರ್ಕಾರ್ ಅವರೂ ಅಂತಹ ಕಾರ್ಯಕ್ರಮಗಳನ್ನು ದೇಶದಾದ್ಯಂತ ಮಾಡುತ್ತಿದ್ದರು. ಅವರ ಕಾರ್ಯಕ್ರಮಗಳನ್ನು ನೋಡಿ 'ಹೋ ಇಷ್ಟೇನಾ !' ಎಂದು ಉದ್ಗಾರ ತೆಗೆಯುವ ಜನ ಮನೆ ತಲುಪುತ್ತಲೇ ಮತ್ತೆ ಮೊದಲಿನಂತಾಗುತ್ತಾರೆ. ಇದರಿಂದ ತೊಂದರೆ ಅವರಿಗೇ. ಆತ್ಮಬಲ ಕುಗ್ಗಿ ಮುಂಗೈನ ಬಣ್ಣಬಣ್ಣದ ದಾರಗಳು, ಅವರನ್ನು ಕಾಪಾಡುವ ಹೊಣೆ ಹೊರಬೇಕಾಗುತ್ತಿರುವುದು ಇಂದಿನ ದುರಂತ.

ಧಾರ್ಮಿಕ ಒಂದುಗೂಡುವಿಕೆಯನ್ನು ಪುಷ್ಟೀಕರಿಸುವಂತಹವಾಗಿರುತ್ತವೆ. ಇವುಗಳಲ್ಲಿ ಅನೇಕ ಜಾತ್ರೆ–ಉತ್ಸವಗಳು, ಹಬ್ಬ–ಹರಿದಿನಗಳೂ ಬರುತ್ತವೆ. ಇವೆಲ್ಲ ಕಾಲಾಂತರದಿಂದ ಸಮಾಜದ ಬೇರೆ ಬೇರೆ ವರ್ಗಗಳನ್ನು ಒಂದುಗೂಡಿಸಿಯೇ ಇಟ್ಟಿವೆ (ಕೆಲವು ಅಪವಾದಗಳ ಹೊರತಾಗಿ). ಇವೆಲ್ಲ ಮೂಢನಂಬಿಕೆಗಳಲ್ಲ. ಅನೇಕ ಸಂದರ್ಭಗಳಲ್ಲಿ ಈ ಆಚರಣೆಗಳು ಪ್ರಸ್ತುತ ಸಾಮಾಜಿಕ ವಾತಾವರಣಕ್ಕೆ ಹೊಂದಿಕೊಂಡು ಬದಲಾವಣೆಯನ್ನೂ ಕಂಡಿವೆ. ಉದಾಹರಣೆಗೆ, ಸಿರ್ಸಿಯ ಸುಪ್ರಸಿದ್ಧ ಮಾರಿಯಮ್ಮನ ಜಾತ್ರೆ. ಅಲ್ಲಿ ಕೋಣನ ಬಲಿ ನಡೆಯುತ್ತಿದ್ದ ಕಾಲವೊಂದಿತ್ತು. ಆದರೆ ಪ್ರಾಣಿ ಬಲಿ ಕಾನೂನು ರೀತ್ಯಾ ಅಪರಾಧವಾಗಿರುವುದರಿಂದ ಅದನ್ನು ಈಗ ಸಾಂಕೇತಿಕವಾಗಿ ನಡೆಸುತ್ತ ದಶಕವೇ ಕಳೆದಿದೆ. ಇದು ಅಲ್ಲಿನ ಜನರ ಧಾರ್ಮಿಕ ನಂಬಿಕೆಗೆ ಯಾವ ಕುಂದನ್ನೂ ತರಲಿಲ್ಲ. ಅದರಂತೆ ಚಂದ್ರಗುತ್ತಿಯ ಎಲ್ಲಮ್ಮನ ಜಾತ್ರೆಯ ಸಂದರ್ಭದಲ್ಲಿ ಬೆತ್ತಲೆ ಸೇವೆ. ಇದನ್ನು ನಿಲ್ಲಿಸಲು ಅಂದಿನ ಆಡಳಿತವೇ ಟೊಂಕ ಕಟ್ಟಿ ನಿಲ್ಲಬೇಕಾಯಿತು. ತೀವ್ರ ಪ್ರತಿಭಟನೆಯ ಮಧ್ಯದಲ್ಲೂ ಅದನ್ನು ಕಟ್ಟುನಿಟ್ಟಾಗಿ ಜಾರಿಗೊಳಿಸುವಲ್ಲಿ ಆಡಳಿತ ಯಶಸ್ವಿಯಾಗಿ ದಶಕಗಳೇ ಕಳೆದಿವೆ. ಈ ಎರಡು ಉದಾಹರಣೆಗಳೂ ಸಾಮಾಜಿಕ ಹಾಗೂ ಧಾರ್ಮಿಕ ನಂಬಿಕೆಯ ಭದ್ರ ತಳಹದಿಯನ್ನೇ ಹೊಂದಿದ್ದಂಥವು. ಆದರೂ ಜನರಲ್ಲಿ ಜಾಗೃತಿ ಮೂಡಿಸುವುದರ ಮೂಲಕ ಹಾಗೂ ಕಾನೂನು ಪಾಲನೆಯ ಮೂಲಕ ಅವುಗಳನ್ನು ನಿಲ್ಲಿಸಲಾಯಿತು. ಆಡಳಿತ ವ್ಯವಸ್ಥೆ, ನ್ಯಾಯಾಂಗ ಹಾಗೂ ಜನಜಾಗೃತಿ ಎಲ್ಲವೂ ಒಟ್ಟಾಗಿ ಕಾರ್ಯ ನಿರ್ವಹಿಸುವುದರ ಮೂಲಕ ಇಂತಹ ಸಾಮಾಜಿಕ ಹಾಗೂ ಧಾರ್ಮಿಕ ಮೂಢನಂಬಿಕೆಗಳನ್ನು ದೂರಮಾಡಲು ಸಾಧ್ಯ ಎನ್ನುವುದಕ್ಕೆ ಇವೆರಡು ಉತ್ತಮ ಉದಾಹರಣೆಗಳಾಗಬಲ್ಲವು.



ಇತ್ತೀಚಿನ ದಿನಗಳಲ್ಲಿ ನಿಧಿ ಶೋಧದ ಕಾರಣದಿಂದ ಮಕ್ಕಳ, ಕುಮಾರಿಯರ ಬಲಿಯಂತಹ ಅಮಾನವೀಯ ಪ್ರಕರಣಗಳು ಅಲ್ಲಲ್ಲಿ ಕೇಳಿಬರುತ್ತವೆ. ಇವುಗಳ ಹಿಂದೆ ಅನೇಕ ದುಷ್ಟಶಕ್ತಿಗಳ ಕೈವಾಡವಿರುತ್ತದೆ. ಇದು ಮೂಢನಂಬಿಕೆಗೆ ಒಂದು ಉದಾಹರಣೆ. ಇಂತಹವುಗಳನ್ನು ನಿಗ್ರಹಿಸುವುದು ಅತ್ಯಗತ್ಯ ಹಾಗೂ ಇದನ್ನು ನಿಗ್ರಹಿಸಲು ಈಗಿರುವ ಕಾನೂನು ಸಶಕ್ತವಾಗಿದೆ. ನಮ್ಮ ಪೊಲೀಸ್ ಇಲಾಖೆಯೇ ಇದನ್ನು ಮಟ್ಟಹಾಕಬಲ್ಲದು. ಇನ್ನೊಂದು ಉದಾಹರಣೆ ದೇವದಾಸಿ ಎಂಬ ಅನಿಷ್ಟ ಸಾಮಾಜಿಕ ಪದ್ಧತಿ. ಇದು ಕರ್ನಾಟಕದ ಕೆಲ ಜಿಲ್ಲೆಗಳಲ್ಲಿ ಇನ್ನೂ ಜೀವಂತವಾಗಿದೆ. ಇದರ ವಿರುದ್ಧ ಕಾನೂನಿನ ರಕ್ಷಣೆಯಿದೆ ಹಾಗೂ ಸರ್ಕಾರಗಳು ಇದನ್ನು ಹೋಗಲಾಡಿಸಲು ಅನೇಕ ಯೋಜನೆಗಳನ್ನು ಜಾರಿಗೆ ತಂದಿವೆ. ದೇವದಾಸಿಯರ ಪುನರ್ವಸತಿ, ಅವರಿಗೆ ಸೌಲಭ್ಯಗಳು, ಅವರ ಮಕ್ಕಳಿಗೆ ಶಿಕ್ಷಣ ಮುಂತಾದ ಉತ್ತಮ ಯೋಜನೆಗಳಿವೆ. ಅಲ್ಲದೆ, ಅನೇಕ ಸಂಘ–ಸಂಸ್ಥೆಗಳು ಈ ಪದ್ಧತಿಯ ವಿರುದ್ಧ ಜನಜಾಗೃತಿ ಮೂಡಿಸುತ್ತಿವೆ. ಪರಿಸ್ಥಿತಿ ಈಗ ಹಿಂದಿಗಿಂತ ಉತ್ತಮವಾಗುತ್ತಿದೆ.

ಆದರೆ ಜನರ ದುಃಖವನ್ನು, ಸಂಕಟವನ್ನು, ನೋವನ್ನು, ರೋಗ–ರುಜಿನಗಳನ್ನು ಬಂಡವಾಳವಾಗಿಟ್ಟುಕೊಂಡು ಅವರಿಂದ ಹಣ ವಸೂಲಿಮಾಡುವ ಸಲುವಾಗಿ ತಂತ್ರ–ಮಂತ್ರ ಜೊತೆಗೆ, ತಾಯಿತ, ಚೀಟಿ ಮುಂತಾದವುಗಳನ್ನು ಕಟ್ಟಿ ಅವರ ಭಾವನೆಗಳು ಹಾಗೂ ಆರೋಗ್ಯದೊಂದಿಗೆ ಚೆಲ್ಲಾಟ ಆಡುವವರನ್ನು ಮಟ್ಟಹಾಕಬೇಕು. ನಾಲ್ಕಾರು ಮನೆಯ ಕೆಲಸ ಮಾಡಿ ಮಗಳ ಮದುವೆ ಮಾಡಿದ ಒಬ್ಬ ಹೆಂಗಸು ತನ್ನ ಮಗಳ ಮಗು ಅಳಲಿಲ್ಲವೆಂದು, ನಾಲ್ಕು ದಿನಗಳ ಕೂಸಿನ ಮೂಗಿಗೆ ಎಣ್ಣೆ ಬಿಟ್ಟು ಅದು ಮರಣ ಹೊಂದಿದ್ದನ್ನು ನೋಡಿದಾಗ ಮನಸ್ಸು ಗೋಳಾಡುತ್ತದೆ. ಅವಳು ತನ್ನ ಇಂತಹ ಮೂಢನಂಬಿಕೆಗಳಿಗೆ ಅದೆಷ್ಟು ಮಾರುಹೋಗಿದ್ದಾಳೆ ಎಂದರೆ ಆಕೆಗೆ ತನ್ನ ಮಗಳ ಹಾಗೂ ಅವಳ ಮಗುವಿನ ಜೀವದ ಬಗ್ಗೆಯೂ ಯೋಚನೆಯಿಲ್ಲ. ಇಂತಹ ಅದೆಷ್ಟೋ ತಾಯಂದಿರು, ಅಜ್ಜಿಯರು ತಮ್ಮ ಮಕ್ಕಳ, ಮೊಮ್ಮಕ್ಕಳ ಜೀವನಗಳನ್ನು ಮೂಢನಂಬಿಕೆಗಳಿಗೆ ಬಲಿ ಕೊಡುತ್ತಿದ್ದಾರೆ. ಇವರಿಗೆ ಬೇಕಾಗಿರುವುದು ಕಾನೂನಿನ ರಕ್ಷಣೆಯಲ್ಲ, ಅರಿವು.

ಈ ಅರಿವು ಶಿಕ್ಷಣದಿಂದ ಬಂದೀತೆ? ನಮ್ಮ ದೇಶದಲ್ಲಿ ಅದನ್ನೂ ಒಪ್ಪಿಕೊಳ್ಳುವಂತಿಲ್ಲ. ಇಂದಿನ ಶಿಕ್ಷಿತ ವರ್ಗ ಕೆಲ ವ್ರತಾಚರಣೆಗಳನ್ನು ಎಷ್ಟು ಕುರುಡಾಗಿ ನಂಬುತ್ತದೆ ಎಂದರೆ ಅಕ್ಷಯ ತದಿಗೆ ಇದಕ್ಕೊಂದು ಉತ್ತಮ ಉದಾಹರಣೆ. ಅಂದು ಬಂಗಾರದ ಖರೀದಿ ಮಾಡಿ ತಮ್ಮ ಮನೆಯನ್ನು ಬಂಗಾರದಂತೆ ಮಾಡಿಕೊಳ್ಳುವ, ಅಂದರೆ ಸಮೃದ್ಧವಾಗಿಸುವ ಧಾವಂತ. ಜನರ ಈ ಭಾವನೆಗಳನ್ನು ಚೆನ್ನಾಗಿ ಉಪಯೋಗಿಸಿಕೊಂಡು ಅಂದು ನೂರಾರು ಕೋಟಿ ಬಂಗಾರದ ವಹಿವಾಟಿಗೆ ಪ್ರತಿವರ್ಷ ಈ ದೇಶ ಸಾಕ್ಷಿಯಾಗುತ್ತದೆ. ಹಬ್ಬ–ಹರಿದಿನಗಳಲ್ಲಿ ಗಗನಕ್ಕೇರುವ ಬೆಲೆಗಳೂ ಕೂಡ ಇದೇ ಹುನ್ನಾರದ ಹಿನ್ನೆಲೆಯಿರುವವು. ಸಂಘಟಕಿ ದು.ಸರಸ್ವತಿಯವರು 'ಧರ್ಮ'ದ ಕುರಿತ ತಮ್ಮ ಭಾಷಣವೊಂದರಲ್ಲಿ "ಭಯ–ಭಕ್ತಿ ಎರಡು ಪದಗಳನ್ನೂ ಒಟ್ಟಿಗೆ ಉಪಯೋಗಿಸುತ್ತೇವೆ. ಆದರೆ ಭಕ್ತಿ ಇದ್ದಲ್ಲಿ ಭಯವೇಕೆ?" ಎಂದು ಪ್ರಶ್ನಿಸುವುದು ಎಷ್ಟು ಅರ್ಥಪೂರ್ಣ! ಇಂದು ಜನರನ್ನು ಆವರಿಸಿರುವುದು ಭಯ ಹಾಗೂ ಆಡಂಬರ. ಇವೆರಡರಲ್ಲಿ ಭಕ್ತಿ ನಿಜಕ್ಕೂ ಸೊರಗುತ್ತಿದೆ. ನಮ್ಮ ಎಲ್ಲ ಧಾರ್ಮಿಕ ಸ್ಥಳಗಳು ಈಗ ಬಹುತೇಕ ಸುಸ್ಥಿತಿಯಲ್ಲಿವೆ. ಅಲ್ಲಿ ಕಾಣಿಕೆಗಳ ಮಹಾಪೂರ ಹರಿದುಬರುತ್ತದೆ. ಖ್ಯಾತ ನಾಟಕಕಾರ ರಂಗನಟ ಮಾಸ್ಟರ್ ಹಿರಣ್ಣಯ್ಯ ಅವರು ದೇವರುಗಳನ್ನು 'ಸೋಷಿಯಲಿಸ್ಟ್' ಎಂದು ಅರ್ಥಗರ್ಭಿತವಾಗಿ ಕರೆಯುತ್ತಿದ್ದರು.

ಮಾನವ ದಾಹ, ಹೆಚ್ಚುಗಾರಿಕೆ ಹಾಗೂ ಪ್ರತಿಷ್ಠೆಗಳು, ದೇವರು, ದೈವ, ಗುಡಿ–ಗುಂಡಾರಗಳು, ನಂಬಿಕೆ, ಆಚರಣೆಗಳನ್ನೂ ಬಿಟ್ಟಿಲ್ಲ. ಅದರಂತೆ ಮೂಢನಂಬಿಕೆಗಳನ್ನು ಉಳಿಸುವ, ಪೋಷಿಸುವ ವರ್ಗವೂ ಇದೆ. ಎಲ್ಲಿಯವರೆಗೆ ಅವನ್ನು ನಂಬುವ ವರ್ಗವಿರುತ್ತದೆಯೋ ಅಲ್ಲಿಯವರೆಗೂ ಅಂತಹ ನಂಬಿಕೆಗಳ ಮೌಢ್ಯತೆಯ ನೆಲೆಯನ್ನು ವ್ಯವಸ್ಥಿತವಾಗಿ ಈ ವರ್ಗ ವಿಸ್ತರಿಸುತ್ತದೆ. ಇದನ್ನು ಅರಿಯಬೇಕಾದವರು ಮೋಸಹೋಗುವ ಜನರೇ. ನಟರಾಜ ಹುಲಿಕಲ್ ಅವರು ದಶಕದಿಂದ ಮೂಢನಂಬಿಕೆಗಳ ವಿರುದ್ಧ ಸಮರ ಸಾರಿದ್ದಾರೆ, ಜನರನ್ನು ಜಾಗೃತಗೊಳಿಸಲು ಪವಾಡ ಬಯಲು ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಾರೆ. ಪ್ರಸಿದ್ಧ ಜಾದೂಗಾರರಾಗಿದ್ದ ಪಿ. ಸಿ. ಸರ್ಕಾರ್ ಅವರೂ ಅಂತಹ ಕಾರ್ಯಕ್ರಮಗಳನ್ನು ದೇಶದಾದ್ಯಂತ ಮಾಡುತ್ತಿದ್ದರು. ಅವರ ಕಾರ್ಯಕ್ರಮಗಳನ್ನು ನೋಡಿ 'ಹೋ ಇಷ್ಟೇನಾ!' ಎಂದು ಉದ್ಗಾರ ತೆಗೆಯುವ ಜನ ಮನೆ ತಲುಪುತ್ತಲೇ ಮತ್ತೆ ಮೊದಲಿನಂತಾಗುತ್ತಾರೆ. ಇದರಿಂದ ತೊಂದರೆ ಅವರಿಗೇ. ಆತ್ಮಬಲ ಕುಗ್ಗಿ ಮುಂಗೈನ ಬಣ್ಣಬಣ್ಣದ ದಾರಗಳು, ಅವರನ್ನು ಕಾಪಾಡುವ ಹೊಣೆ ಹೊರಬೇಕಾಗುತ್ತಿರುವುದು ಇಂದಿನ ದುರಂತ. ಇದಕ್ಕೆ ವಿದ್ಯಾವಂತರೂ ಬಲಿಯಾಗುತ್ತಿರುವುದು, ಜ್ಞಾನ ಪ್ರಸಾರದ ಹೊಣೆ ಹೊರಬೇಕಾದ ಮಾಧ್ಯಮಗಳು ಇಂತಹ ಕಾರ್ಯಕ್ರಮಗಳ ಮೂಲಕ ಟಿ.ಆರ್.ಪಿ.ಯನ್ನು ಹೆಚ್ಚಿಸಿಕೊಳ್ಳುತ್ತಿರುವುದು ಬೇಲಿಯೇ ಎದ್ದು ಹೊಲ ಮೇದಂತೆಯೇ ಸರಿ. ಇವುಗಳಿಗೆ ಬಲಿಯಾಗುತ್ತಿರುವವರು ಬಹುತೇಕವಾಗಿ ಸ್ತ್ರೀಯರು. ಇವರು ಕಳೆದುಕೊಳ್ಳುತ್ತಿರುವುದು ಹಣ ಮಾತ್ರವಲ್ಲ; ಆತ್ಮಬಲ ಹಾಗೂ ನೆಮ್ಮದಿ. ಇವು ಯಾವ ಮಂತ್ರ–ತಂತ್ರದಿಂದಲೂ ದೊರಕುವುದಿಲ್ಲ. ನಮ್ಮೊಳಗೆ ನಾವೇ ಇವನ್ನು ಬೆಳೆಸಿ, ಪೋಷಿಸಬೇಕಾಗುತ್ತದೆ. ಮುಗ್ಧ, ಅಸಹಾಯಕ ಪರಿಸ್ಥಿತಿಯಲ್ಲಿರುವವರನ್ನು ತಮ್ಮ ಹೊಟ್ಟೆ ಹೊರೆದುಕೊಳ್ಳುವುದಕ್ಕಾಗಿ ಮರುಳುಗೊಳಿಸುವ ಸಣ್ಣಪುಟ್ಟ ತಾಂತ್ರಿಕ, ಮಾಂತ್ರಿಕರಿಂದ ಹಿಡಿದು ಕೋಟಿ ಕೋಟಿ ಬೆಲೆಬಾಳುವ ಮಾಧ್ಯಮಗಳೂ ಈ ಹಗಲು ದರೋಡೆಗೆ ಇಳಿದಿರುವುದು ಯಾವುದೇ ಸ್ವಸ್ಥ ಸಮಾಜದ ಲಕ್ಷಣವಲ್ಲ.

**ನೂತನ ಎಮ್. ದೋಶೆಟ್ಟಿ**
ಕಾರ್ಯಕ್ರಮ ನಿರ್ವಾಹಕರು, ಆಕಾಶವಾಣಿ
ರಾಜಭವನ ರಸ್ತೆ, ಬೆಂಗಳೂರು – ೫೬೦ ೦೦೧

# ಹೊಸಗನ್ನಡ ಸಾಹಿತ್ಯ: ಜನಪದ ಭಾಷೆ

**ಪ್ರೊ॥ ಧನವಂತ ಹಾಜವಗೋಳ**

ಹೊಸಗನ್ನಡ ಸಾಹಿತ್ಯದ ಅನೇಕ ಕಾದಂಬರಿಕಾರರು ಪ್ರಾದೇಶಿಕ ನೆಲೆಯಲ್ಲಿ ಕಾದಂಬರಿಗಳನ್ನು ರಚಿಸಿದ್ದಾರೆ. ಮಿರ್ಜಿ ಅಣ್ಣಾರಾಯರ 'ನಿಸರ್ಗ', ರಾವಬಹಾದ್ದೂರರ 'ಗ್ರಾಮಾಯಣ', ಕುವೆಂಪು ಅವರ 'ಕಾನೂರು ಸುಬ್ಬಮ್ಮ ಹೆಗ್ಗಡತಿ', 'ಮಲೆಗಳಲ್ಲಿ ಮದುಮಗಳು', ಕಾರಂತರ 'ಚೋಮನ ದುಡಿ', ಬಸವರಾಜ ಕಟ್ಟೀಮನಿಯವರ 'ನೀ ನನ್ನ ಮುಟ್ಟಬೇಡ', ದೇವನೂರು ಮಹಾದೇವರ 'ಒಡಲಾಳ', ಮ. ನ. ಜವರಯ್ಯ ಅವರ 'ಮಾಗಿ', ಅರವಿಂದ ಮಾಲಗತ್ತಿಯವರ 'ಕಾರ್ಯ' ಮೊದಲಾದ ಕಾದಂಬರಿಗಳ ಜೀವಾಳ ಪ್ರಾದೇಶಿಕತೆ, ಅಲ್ಲಿ ಬಳಕೆಯಾದ ಭಾಷೆ ಜಾನಪದ ಭಾಷೆ ಎಂದು ಹೇಳಬಹುದು. ಅದರಲ್ಲೂ ದಲಿತರ ಬದುಕನ್ನು ಬಿಚ್ಚಿಡುವಾಗ, ಅವರ ಬದುಕಿನ ವಾಸ್ತವವನ್ನು ಕಟ್ಟಿಕೊಡುವಾಗ, ಬದುಕಿನ ಭಾಷೆಯೆಂದೇ ಭಾವಿಸಲಾದ ಜಾನಪದ ಭಾಷೆಯ ನುಡಿಮುತ್ತುಗಳು, ವಾಕ್ಯವೃಂದಗಳು, ಸಂಭಾಷಣೆಯ ರೀತಿ, ಬೈಗುಳಗಳು ಎಗ್ಗಿಲ್ಲದೆ ಸುರಿಯುತ್ತವೆ. ಈ ಜಾನಪದ ಭಾಷೆಯ ಸೊಗಡಿನ ಎಲ್ಲ ಆಯಾಮಗಳನ್ನು ಇಂಥ ಕಾದಂಬರಿಗಳಲ್ಲಿ ನೋಡಬಹುದು.

**ಹೊ**ಸಗನ್ನಡ ಸಾಹಿತ್ಯಕ್ಕೆ ಸುಮಾರು ಒಂದು ಶತಮಾನದ ಇತಿಹಾಸವಿದೆ. ಮುದ್ದಣ್ಣನ 'ರಾಮಾಶ್ವಮೇಧ' ಕೃತಿಯಲ್ಲಿಯೇ ಹೊಸಗನ್ನಡ ಸಾಹಿತ್ಯದ ಅರುಣೋದಯವನ್ನು ಗುರುತಿಸಬಹುದಾಗಿದೆ. ಆದರೆ ಬಿ. ಎಂ. ಶ್ರೀಕಂಠಯ್ಯನವರ 'ಇಂಗ್ಲಿಷ್ ಗೀತೆಗಳು' ಎಂಬ ಕೃತಿ ಹೊಸಗನ್ನಡ ಸಾಹಿತ್ಯದ ಉದಯವನ್ನು ತನ್ನ ಪ್ರಯೋಗಶೀಲತೆ, ಆಧುನಿಕ ಮನೋಧರ್ಮ ಮತ್ತು ಗಾಢವಾದ ಪ್ರಭಾವದ ಮೂಲಕ ಸೂಚಿಸಿದೆ. ಹೊಸಗನ್ನಡ ಸಾಹಿತ್ಯದ ಕೇಂದ್ರ ವಸ್ತು ಮನುಷ್ಯ. ಈ ಮನುಷ್ಯ ಸಂಬಂಧಗಳು, ಪ್ರಕೃತಿ ಜೀವನಮೌಲ್ಯಗಳು, ಆಸೆ ಆಕಾಂಕ್ಷೆಗಳು, ತಲ್ಲಣ–ತಳಮಳಗಳು, ಒಟ್ಟು ಬದುಕಿನ ಆಗುಹೋಗುಗಳೆಲ್ಲ ಈ ಸಾಹಿತ್ಯದಲ್ಲಿ ದಾಖಲಾಗಿವೆ. ಮನುಷ್ಯ ಜೀವನದ ಎಲ್ಲ ಸಾಧ್ಯತೆಗಳನ್ನು, ಸಾಧನೆಗಳನ್ನು, ವೈಫಲ್ಯಗಳನ್ನು ಈ ಸಾಹಿತ್ಯ ತೆರೆದು ತೋರಿಸಿದೆ. ಆಯಾ ಕಾಲಘಟ್ಟದಲ್ಲಿ ಮನುಷ್ಯನ ಆಸಕ್ತಿಗಳಿಗೆ ಅನುಗುಣವಾಗಿ ಹೊಸಗನ್ನಡ ಸಾಹಿತ್ಯ ವೈವಿಧ್ಯತೆಯನ್ನು ಪಡೆದುಕೊಂಡಿದೆ. ಸಮೃದ್ಧವಾಗಿ ಬೆಳೆದಿದೆ. ಹೊಸಗನ್ನಡ ಸಾಹಿತ್ಯ ಗದ್ಯ ಪ್ರಧಾನವಾಗಿದ್ದರೂ ಕವಿತೆಗಳಿಗೇನೂ ಬರವಿಲ್ಲ. ಕವಿತೆ, ಕಥೆ, ಕಾದಂಬರಿ, ನಾಟಕ, ಪ್ರಬಂಧ, ಜೀವನಚರಿತ್ರೆ, ಆತ್ಮಕಥೆ ಮುಂತಾದ ರೂಪಗಳಲ್ಲಿ ಆಧುನಿಕ ಮನುಷ್ಯನ ಬದುಕನ್ನು ಕಟ್ಟಿಕೊಟ್ಟಿದೆ. ಹೀಗಾಗಿ ಹೊಸಗನ್ನಡ ಸಾಹಿತ್ಯದ ಹರವು ಬಹು ದೊಡ್ಡದಾಗಿದೆ.

ನವೋದಯ ಕಾವ್ಯಕ್ಕೆ 'ಬಿ.ಎಂ.ಶ್ರೀ.' ಅವರ 'ಇಂಗ್ಲಿಷ್ ಗೀತೆಗಳು' ಎಂಬ ಸಂಕಲನ ಪ್ರಮುಖ ಪ್ರೇರಣೆಯಾಗಿದೆ ಎಂದು ಹೇಳುವುದು ಎಷ್ಟು ಮುಖ್ಯವೋ ಜನಪದಗೀತೆಗಳು ಕೂಡ ಅಷ್ಟೇ ಮುಖ್ಯ ಎಂದು ಹೇಳಬೇಕಾಗುತ್ತದೆ. ಜನಪದರ ದೇಸಿ ಪ್ರಜ್ಞೆಯ ತಿಳುವಳಿಕೆಯಿಂದಾಗಿ ನವೋದಯ ಕಾವ್ಯದಲ್ಲಿ ಜನಪದ ಸಾಹಿತ್ಯದ ನೆಲೆಗಳು ಕಾಣುತ್ತಿವೆ. ಅದರ ನಾದ, ಲಯ ವಿನ್ಯಾಸಗಳು ನವೋದಯ ಕಾವ್ಯದ ಶಕ್ತಿಯಾಗಿ ನಿಂತುಕೊಂಡಿರುವುದನ್ನು ಕಾಣಬಹುದು.

ಧಾರವಾಡ, ಹಲಸಂಗಿ, ಮೈಸೂರು, ಮಂಗಳೂರುಗಳನ್ನು ಕೇಂದ್ರವಾಗಿಟ್ಟುಕೊಂಡು ಕನ್ನಡ ನವೋದಯ ಕಾವ್ಯವನ್ನು ಸೂಕ್ಷ್ಮವಾಗಿ ನೋಡಿದರೆ ಜನಪದ ಭಾಷೆಯ ಸತ್ವವನ್ನು ಬಳಸಿಕೊಂಡ ಬಗೆ ಗೊತ್ತಾಗುತ್ತದೆ. "ಜನಪದ ಭಾಷೆಯ ಸತ್ವಗಳಾದ ಆಡುನುಡಿ, ನುಡಿಗಟ್ಟು, ಲಯ, ಧಾಟಿಗಳು" ನವೋದಯ ಕಾವ್ಯಗಳಲ್ಲಿ ಪ್ರಯೋಗಗೊಂಡಿವೆ.

ಬೇಂದ್ರೆಯವರ ಕಾವ್ಯದ ತಾಯಿಬೇರು ಜಾನಪದ. ಅವರ ಕಾವ್ಯದ ಮೇಲೆ 'ಗರತಿಯ ಹಾಡು', 'ಮಲ್ಲಿಗೆ ದಂಡೆ' ಸಂಕಲನಗಳ ಗಾಢವಾದ ಪ್ರಭಾವವನ್ನು ಕಾಣಬಹುದು. ಅವರ 'ಸಖಿಗೀತದಲ್ಲಿ' –



*ಗರತಿಯರದೆವಾತು, ನೆರವಾತುಗಳು ಬೆರೆತು*
*ಲಾವಣಿಯಲಂಕಾರದಲಿ ಹೊಂದಿದೆ*
*ಪಂಡಿತ ಪಾಮರರಿಬ್ಬರ ನಾಲಿಗೆ*
*ಯೊಳು ಒಡಂಬಡುವಂತೆ ರಂಜಿಸಿದೆ*

– ಎಂದು ಹೇಳಿರುವಲ್ಲಿ ಜನಪದ ಭಾಷೆಯ ಸೊಗಡನ್ನು ಕಾಣಬಹುದು.

ಬೇಂದ್ರೆಯವರ 'ನಗೀ ನವಿಲು' ಜನಪದ ಆಶಯದ ಗೀತೆಯಾಗಿದೆ. "ನಾರಿ ನಿನ್ನ ಮಾರಿ ಮ್ಯಾಗ ನಗೀ ನವಿಲು ಆಡುತ್ತಿತ್ತ" – ಇಂಥ ಸಾಲುಗಳಲ್ಲಿ ಜನಪದ ಪ್ರಯೋಗಗಳ ಅರ್ಥ ವ್ಯಾಪಕತೆಯನ್ನು ಕಾಣಬಹುದು. ಜನಪದ ಭಾಷೆ ಕಟ್ಟಿಕೊಡುವ ಅರ್ಥಪರಂಪರೆ ಇಲ್ಲಿ ಬಿಚ್ಚಿಕೊಂಡಿದೆ. ಬೇಂದ್ರೆಯವರ ವೈಶಿಷ್ಟ್ಯ ಇರುವುದೇ ಜನಪದ ಭಾಷೆಯ ಬಳಕೆಯಲ್ಲಿ ಎಂಬುದು ಇಲ್ಲಿ ಗಮನಾರ್ಹವಾಗಿದೆ. ಅವರ 'ಹುಬ್ಬಳ್ಳಿಯಾಂವ' ಬಹಳ ಪ್ರಸಿದ್ಧವಾದ ಭಾವಗೀತೆ; ಇದರ ಸತ್ವವಿರುವುದು ಕವನದ ವಸ್ತು ಮತ್ತು ಜನಪದ ಭಾಷೆಯಲ್ಲಿ ಎಂಬುದು ಸ್ಪಷ್ಟವಿದೆ. ಜನಪದ ಬದುಕಿನ ರೀತಿಯೊಂದನ್ನು ಅತ್ಯಂತ ಸತ್ವಯುತವಾದ ಜನಪದ ಭಾಷೆಯಲ್ಲಿ ಕಟ್ಟಿಕೊಟ್ಟಿರುವ ಬೇಂದ್ರೆಯವರು ಬಹುದೊಡ್ಡ ಕವಿಯಾಗಿ ಕಾಣುತ್ತಾರೆ. ಅವರ ಕವಿತೆಗಳ ಅಂತಃಸತ್ವ ಇರುವುದೇ ಜನಪದ ಭಾಷೆಯೊಳಗೆ ಎಂಬುದು ಗಮನಾರ್ಹವಾದುದು. ಬೇಂದ್ರೆಯವರ ಕಾವ್ಯದಲ್ಲಿಯ ಜನಪದ ಭಾಷೆಯ ಅಧ್ಯಯನವೇ ಒಂದು ಸಂಪ್ರಬಂಧ ಅಥವಾ ಮಹಾಪ್ರಬಂಧದ ವಸ್ತುವಾಗಬಹುದು. ಇಲ್ಲಿ ಅವರ ಕೆಲವು ಪ್ರಾತಿನಿಧಿಕ ಕವನಗಳನ್ನು ಗಮನದಲ್ಲಿಟ್ಟುಕೊಂಡು ಜನಪದ ಭಾಷೆಯ ಬಳಕೆಯ ಮಹತ್ವವನ್ನು ಹೇಳಲಾಗಿದೆ.

ಮಧುರಚೆನ್ನರು ಜನಪದ ಸಾಹಿತ್ಯ ಕ್ಷೇತ್ರಕ್ಕೆ ಅಮೂಲ್ಯ ಕಾಣಿಕೆ ನೀಡಿದ್ದಾರೆ. ಜನಪದ ಸಾಹಿತ್ಯ ಸಂಗ್ರಹ, ಪ್ರಕಟಣೆ ಮಾಡಿದ್ದಾರೆ. ಅವರ ಸ್ವತಂತ್ರ ಗೀತೆಗಳಲ್ಲಿ ಜನಪದ ಭಾಷೆಯ ಪ್ರಭಾವವನ್ನು ಕಾಣಬಹುದು. ಅವರ ಬಹಳ ಪ್ರಸಿದ್ಧವಾದ 'ನನ್ನ ನಲ್ಲ' ಕವಿತೆಯಲ್ಲಿ ಬರುವ ಒಂದು ಸಾಲು "ಪ್ರೀತಿಯಂಥ ವಸ್ತು ಭವದಲಿ ಕಾಣೆ" ಎಂಬುದು ಜನಪದರು 'ಪ್ರೀತಿ'ಯನ್ನು ಬಲವಾಗಿ ನಂಬಿದವರು. ಅವರ ನಂಬಿಕೆಗಳನ್ನು ಜನಪದ ಭಾಷೆಯಲ್ಲಿ ಅಭಿವ್ಯಕ್ತಿಗೊಳಿಸಿದವರು ಮಧುರಚೆನ್ನರು.

ಬೆಟಗೇರಿ ಕೃಷ್ಣಶರ್ಮ ಅವರ 'ನಲ್ವಾಡುಗಳು' ಪ್ರೇಮವನ್ನು ಸ್ಥಾಯಿಯಾಗಿ ಹೊಂದಿರುವ ಕವಿತೆಗಳ ಸಂಕಲನವಾಗಿದೆ. ಜನಪದರ ಆಡುನುಡಿಯಲ್ಲಿ ಸೊಗಸಾದ ಹಾಡುಗಳನ್ನು ಕಟ್ಟಿ ಆ ಭಾಷೆಯ ಶಕ್ತಿ ಸಾಮರ್ಥ್ಯವನ್ನು ಪ್ರಕಟಪಡಿಸಿದ್ದಾರೆ. ಅಂಥದೊಂದು ಗೀತೆಗಳ ಸಂಕಲನವೊಂದನ್ನು ಕಾಣಿಕೆಯಾಗಿ ನವೋದಯ ಕಾವ್ಯಕ್ಕೆ ನೀಡಿರುವ ಹೆಗ್ಗಳಿಕೆ ಅವರದ್ದು.

ಕೆ. ಎಸ್. ನರಸಿಂಹಸ್ವಾಮಿ ಅವರ ಕವಿತೆಗಳು ನವೋದಯ ಕಾವ್ಯದ ಜನಪದ ಭಾಷೆಯ ಎಲ್ಲ ಸಾಧ್ಯತೆಗಳನ್ನು ತೆರೆದು ತೋರಿದವು. ಅವರು ಜನಪದ ಭಾಷೆಯ ವಿಶಿಷ್ಟ ಸಂವೇದನೆಗಳನ್ನು ಅತ್ಯಂತ ಮನೋಹರವಾಗಿ ಅಭಿವ್ಯಕ್ತಗೊಳಿಸಿದರು. ಅವರ ಜನಪ್ರಿಯತೆಗೆ 'ಮೈಸೂರು ಮಲ್ಲಿಗೆ' ಕವನ ಸಂಕಲನ ಸಾಕ್ಷಿಯಾಗಿದೆ. ಅಲ್ಲಿಯ ಕವನಗಳ




ಸೊಗಸು ಇರುವುದೇ ಅವರು ಬಳಸಿದ ಜಾನಪದ ಭಾಷೆಯಲ್ಲಿ ಎಂಬುದನ್ನು ಮನಗಾಣಬಹುದು. ಹಳ್ಳಿಯ ಹೆಣ್ಣುಮಗಳ ಸೌಂದರ್ಯ ಮತ್ತು ಗ್ರಾಮೀಣ ಪರಿಸರವನ್ನು ಕಣ್ಣಿಗೆ ಕಟ್ಟುವ ಹಾಗೆ ಆಡುನುಡಿ ಯಲ್ಲಿಯೇ ಅಭಿವ್ಯಕ್ತಗೊಳಿಸಿದ್ದು ಅವರ ಹೆಗ್ಗಳಿಕೆ. 'ಒಬ್ಬಳೇ ಮಗಳು', 'ಶಾನುಭೋಗರ ಮಗಳು', 'ಮಾವನ ಮನೆಯಲ್ಲಿ', ಮೊದಲಾದ ಕವಿತೆಗಳಲ್ಲಿಯ ನಯ–ನಾಜೂಕು, ಗೇಯತೆ, ನವುರಾದ ಹಾಸ್ಯ ಜನಸಾಮಾನ್ಯರ ಗಮನ ಸೆಳೆಯುತ್ತವೆ. ಇಂದಿಗೂ ಗ್ರಾಮೀಣರು ಆ ಗೀತೆಗಳನ್ನು ಗುನುಗುನಿಸುತ್ತಾರೆ. ಹಳ್ಳಿಯ ಹೆಣ್ಣುಮಕ್ಕಳ ಮುಡಿಯ ಹೂ, ಹಣೆಯ ಕುಂಕುಮ, ತೊಟ್ಟ ಹಸಿರು ಕುಪ್ಪಸ, ಬಳೆಗಳ ವರ್ಣನೆ, ಒಂದೇ ಎರಡೇ ? ಅಂಥವು ಸಾಲು ಸಾಲಾಗಿ ಬಂದು ಗ್ರಾಮೀಣ ಲೋಕವನ್ನೇ ತೆರೆದಿಡುತ್ತವೆ.

ನವೋದಯ ಕಾವ್ಯಕ್ಕೆ ಅಪ್ಪಟ ಜಾನಪದ ಭಾಷೆಯನ್ನು ಬಳಕೆ ಮಾಡಿದ ಪ್ರತಿಭೆ ಎಂದರೆ ಜಿ. ಪಿ. ರಾಜರತ್ನಂ. ಅವರು 'ಯೆಂಡ್ಕುಡ್ಕರತ್ನ' ಕವನ ಸಂಕಲನದ ಮೂಲಕ ಜಾನಪದ ಭಾಷೆಯಲ್ಲೊಂದು ಹೊಸ ಪ್ರಯೋಗ ಮಾಡಿ ಪ್ರಸಿದ್ಧರಾದುದು ಎಲ್ಲರಿಗೂ ಗೊತ್ತಿರುವ ಸಂಗತಿ. ಹೆಂಡ ಕುಡಿಯುವ ರತ್ನ ಮತ್ತು ಅವನ ಹೆಂಡತಿ ಪುಟ್ನಂಜಿ ಮೂಲಕ ಅವರ ಬಾಳಿನ ಸೊಗಸು, ತಾಪತ್ರಯಗಳನ್ನು ಜಾನಪದ ಭಾಷೆಯಲ್ಲಿ ಬಿಂಬಿಸಿದರು. ಅವರ 'ನನ್ನ ಪುಟ್ನಂಜಿ ನಕ್ರೆ' ಕವಿತೆಯಲ್ಲಿ :

*ಫಕ್ಕಂತ್ ಅಲ್ಲಿನ ಬೆಳಕ್ ಉಕ್ಕೈತೆ*
*ನನ್ನ ಪುಟ್ನಂಜಿ ನಕ್ರೆ*
*ರೆಕ್ಕೆ ಬಿಳುಪ್ ತೆಗೆದ್ ಎರಚ್ದಂಗೆ*
*ಸಾನ ಮಾಡಿದ ಕೊಕ್ರೆ*
*ನನ್ನ ಪುಟ್ನಂಜಿ ನಕ್ರೆ*

ಪುಟ್ನಂಜಿ ಗುಡಿಸಲ ನಕ್ಷತ್ರವಾಗಿ, ಬಡತನವನ್ನು ಪ್ರತಿಬಿಂಬಿಸುವ ಜೀವಂತ ರೂಪವಾಗಿ ಕುಡುಕನ ಭಾಷೆಯಲ್ಲಿ ಎದ್ದು ಕಾಣುತ್ತಾಳೆ. ಜಾನಪದ ಭಾಷೆಯ ವಿಶಿಷ್ಟವಾದ ಇಂಥದ್ದೊಂದು ಪ್ರಯೋಗ ಮಾಡಿ ಆ ಭಾಷೆಯ ಶಕ್ತಿಯನ್ನು ಪ್ರದರ್ಶಿಸಿದ್ದಾರೆ.

ಚಂದ್ರಶೇಖರ ಕಂಬಾರ, ಚೆನ್ನಣ್ಣ ವಾಲೀಕಾರ, ಸೋಮಶೇಖರ ಇಮ್ರಾಪುರ ಮೊದಲಾದ ನವ್ಯ ಕವಿಗಳೂ ಕೂಡ ಜಾನಪದ ಭಾಷೆಯ ಬಳಕೆಯಿಂದ ಹೊಸ ಸಂವೇದನೆಗಳನ್ನು ಕಂಡುಕೊಂಡರು. ಚಂದ್ರಶೇಖರ ಕಂಬಾರರ ಕೃತಿಗಳು ವಸ್ತು ಮತ್ತು ಭಾಷೆ ಜಾನಪದ ಮೂಲದಿಂದ ಆಯ್ದುಕೊಂಡಂಥವುಗಳು. ಅವರು ಮಣ್ಣಿನ ವಾಸನೆಯನ್ನು ತೀವ್ರವಾಗಿ ಅಭಿವ್ಯಕ್ತಗೊಳಿಸುವ ಸಾಮರ್ಥ್ಯವನ್ನು ಹೊಂದಿದ ಕವಿ ಎಂದು ಹೇಳಬಹುದು. 'ಜಾನಪದ ಲೋಕವೇ ಕಂಬಾರರ ಕಾವ್ಯದ ಸ್ವಂತಮನೆ' ಎನ್ನುತ್ತಾರೆ ಕುರ್ತಕೋಟಿಯವರು. ಅವರೊಬ್ಬ ಜಾನಪದದ ಅಪ್ಪಟ ಪ್ರತಿಭೆ. ಮನುಷ್ಯನ ಕಾಮವನ್ನು ಕೇಂದ್ರ ವಾಗಿಟ್ಟುಕೊಂಡು ರಚಿಸಿದ ಕವಿತೆಗಳಲ್ಲಿ ಹೋರಿ ಮತ್ತು ಕಾಡುಕುದುರೆ ಪ್ರಮುಖವಾಗಿವೆ. ಅವರ ಜಾನಪದ ಭಾಷೆಯ ಬಳಕೆಗೆ ಇವು ಅತ್ಯುತ್ತಮ ಉದಾಹರಣೆಗಳೂ ಆಗಿವೆ. ಅವರ ಕಾವ್ಯ ಜಾನಪದ ಭಾಷೆಯೊಂದಿಗೆ ಅಂತರ್ ಸಂಬಂಧವನ್ನು ಹೊಂದಿದೆ. ಅವರ 'ಹೇಳತೇನ ಕೇಳ' ಸಂಕಲನದ ಕವನಗಳು ಜಾನಪದ, ಲಾವಣಿರೂಪದ ಕಥನಗೀತೆಗಳಾಗಿವೆ. ಅವರ 'ಡೊಳ್ಳಿನ ಹಾಡು' ಜಾನಪದ ಭಾಷೆಯ ಬಳಕೆಗೆ ಮತ್ತೊಂದು ನಿದರ್ಶನ.

ಸೋಮಶೇಖರ ಇಮ್ರಾಪೂರ ಜಾನಪದ ಶೈಲಿಯಲ್ಲಿ ಕಾವ್ಯ ರಚಿಸಿ ಪ್ರಸಿದ್ಧಿ ಪಡೆದವರು. ಅವರ 'ಗಂಡಹೆಂಡಿರ ಜಗಳ ಗಂಧ ತೀಡಿದ್ಹಾಂಗ' ಕವಿತೆ ಗ್ರಾಮೀಣ ಬದುಕಿನ ವಿವಿಧ ನೆಲೆಗಳನ್ನು ಅತ್ಯಂತ ಸೊಗಸಾಗಿ ಕಟ್ಟಿಕೊಟ್ಟಿದೆ.

ದಲಿತ–ಬಂಡಾಯ ಕಾವ್ಯವಂತೂ ಜನಪದರ ಮೂಲಶಕ್ತಿಯಿಂದಲೇ ಹುಟ್ಟಿಕೊಂಡಿದೆ. ಕೆಳ ಸಮುದಾಯಗಳ ಆಡುಮಾತಿನ ಎಲ್ಲ ಸಾಧ್ಯತೆಗಳನ್ನು ದಲಿತ–ಬಂಡಾಯ ಕವಿಗಳು ಅತ್ಯಂತ ಅರ್ಥಪೂರ್ಣ ವಾಗಿ ಬಳಸಿಕೊಂಡಿದ್ದಾರೆ. ಜಾನಪದ ಭಾಷೆಯಲ್ಲಿ ಬದುಕಿನ ವಿವಿಧ ಸಂವೇದನೆಗಳನ್ನು ತಂದಿದ್ದಾರೆ. ಸಿದ್ಧಲಿಂಗಯ್ಯನವರ 'ಹೊಲೆಮಾದಿಗರ ಹಾಡು' ಸಂಕಲನದ ಅನೇಕ ಹಾಡುಗಳು ದಲಿತರ ಆಡುಮಾತು ಗಳಲ್ಲಿ ಅವರ ಸಿಟ್ಟು ಮತ್ತು ವಿಷಾದವನ್ನು ಹೊರಹಾಕಿವೆ.

*ಎಷ್ಟು ದಿನ ಈ ಪುಟ್ಕೋಸಿಗಳಾಟ*
*ಸಿಡಿತಿನಿ ಬಾಂಬ ಸಿದ್ದಂಗೆ*
*ಇವು ಸಿಂಗಾರ, ಸೋಪ, ಗಾಜು, ಲೈಟು ಎಲ್ಲಾ*
*ಪುಡಿ ಪುಡಿ ಆಗಂಗೆ*
*ನನ್ ಮ್ಯಾಲ್ ನಿತ್ಕಂಡ್ ತುಳಿತಿರೋ ಈ ಬಂಗ್ಲೆ*
*ಕಳೀಕ ಬೀಳಂಗೆ*

– ಎಂಬ 'ಒಂದು ಮೂಲೆಯ ಹಾಡು' ಕವಿತೆಯಲ್ಲಿ ಬಳಸಿದ ಭಾಷೆ ಕೆಳವರ್ಗಗಳ ಆಡುಮಾತಿಗೆ ನಿದರ್ಶನವಾಗಿದೆ. ದಲಿತರ ಭಾಷೆಗೆ ಶೀಲ–ಅಶ್ಲೀಲದ ಪ್ರಶ್ನೆಯೇ ಇಲ್ಲ, ಅವರದು ನೋವಿನ ಸಂಕಟದ ಅಭಿವ್ಯಕ್ತಿಯಾಗಿದ್ದರಿಂದ ಸಹಜವಾಗಿ ಅವರ ಭಾಷೆ ಯಲ್ಲಿ ಆಡುಮಾತಿನ ಸೊಗಡನ್ನು ನೋಡಬಹುದು.

*ಹೊಲೇರು, ಮಾದುಗ್ರು ಅನ್ನೋ ಬದ್ಲು ಹರಿಜನಾ*
*ಅಂತ ಕರ್ದ್ರು ನಗ್ತಾರಲ್ಲಪ್ಪೋ (ಒಂದು ಪದ)*

– ಎಂಬ ಸಾಲುಗಳು ಜನಪದ ಭಾಷೆಯ ಬಳಕೆಗೆ ಸಾಕ್ಷಿಯಾಗಿವೆ. ಈ ಇಡೀ ಕವಿತೆಯಲ್ಲಿ ಬಳಕೆಯಾದ ನುಡಿಗಳು, ನುಡಿಗಟ್ಟುಗಳು, ಕ್ರಿಯಾಪದಗಳು ಜನಪದ

ಭಾಷೆಯ ಸತ್ವವನ್ನು ಸಾರುತ್ತವೆ "ಈ ಹಿನ್ನೆಲೆಯಲ್ಲಿ ಸಿದ್ಧಲಿಂಗಯ್ಯ ಮೊದಲ ಬಾರಿಗೆ ಕನ್ನಡ ಭಾಷೆಗೆ ನೋವಿನ ಸ್ಪರ್ಶ ನೀಡುತ್ತಿದ್ದಾರೆ. ಆದರೆ ಅದರ ಅನುಭವವಿಲ್ಲದ ಭಾಷಾಪರಂಪರೆಯೇ ಇಲ್ಲಿ ತಲ್ಲಣಿಸುತ್ತದೆ" (ಸಂ. ಎಚ್. ದುಂಡಪ್ಪ, ಬಡವರ ನಗುವಿನ ಶಕ್ತಿ, ಪುಟ ೧೬೫) ಇದು ದಲಿತ ಸಾಹಿತ್ಯ ತನ್ನ ಜನಪದ ಭಾಷಾಬಳಕೆಯಲ್ಲಿ ತೋರಿದ ಧಾರ್ಷ್ಟ್ಯ ಎನ್ನಬಹುದು.

ಹೊಸಗನ್ನಡ ಸಾಹಿತ್ಯದ ಬಹಳ ಜನಪ್ರಿಯ ಪ್ರಕಾರವೆಂದರೆ ಸಣ್ಣಕತೆ. ಈ ಸಣ್ಣಕತೆಗೆ ಒಂದು ಸ್ಪಷ್ಟ ಸ್ವರೂಪವಿರುವಂತೆ, ಮಾಡಿದವರು ಮಾಸ್ತಿಯವರು. ಮಾನವ ಜೀವನದ ವೈವಿಧ್ಯತೆಯನ್ನು ವಿಶಿಷ್ಟವಾಗಿ ಕಟ್ಟಿಕೊಡಲು ನಮ್ಮ ನಾಡಿನ ಹಳ್ಳಿಗಳನ್ನು ಅಲ್ಲಿಯ, ಜನರಿಂದ ಮಾಹಿತಿಗಳನ್ನು ಕಲೆ ಹಾಕಿ ಅವರ ಭಾಷೆಯನ್ನು ಬಳಸಿ ಸಣ್ಣಕತೆಗೆ ಜೀವಂತಿಕೆಯನ್ನು ತಂದುಕೊಟ್ಟರು. ಮನುಷ್ಯ ಪ್ರಯತ್ನದಿಂದಾಗಿ ಪರಿಶುದ್ಧ ಬಾಳನ್ನು ಬದುಕಬಹುದೆಂಬುದನ್ನು ತೋರಿಸಿಕೊಟ್ಟರು. ಅವರ ಕತೆಗಳ ಬಹುತೇಕ ಪಾತ್ರಗಳು ಗ್ರಾಮೀಣ ಸಂವೇದನೆಯ ಪ್ರತೀಕಗಳೇ ಆಗಿವೆ. ಮಾಸ್ತಿಯವರ ಮೊಸರಿನ ಮಂಗಮ್ಮ, ಕಲ್ಮಾಡಿ ಕೋಣ, ಜೋಗ್ಯೋರ ಅಂಜಪ್ಪನ ಕೋಳಿಯ ಕತೆ, ಮುಂತಾದ ಕತೆಗಳ ಒಡಲಿನಲ್ಲಿ ಜಾನಪದ ಭಾಷೆಯ ಸೊಗಸು ಹಾಸುಹೊಕ್ಕಾಗಿರುವುದನ್ನು ಕಾಣಬಹುದು. ಜೋಗ್ಯೋರ ಅಂಜನಪ್ಪನ ಕೋಳಿ ಕತೆಯಲ್ಲಿ ಮ್ಯಾಜಿಸ್ಟ್ರೇಟರಾದ ರಂಗಪ್ಪನ ಎದುರು ತನ್ನ ಜೀವನದಲ್ಲಿ ನಡೆದ ಘಟನೆಯೊಂದನ್ನು ಕತೆಯಾಗಿ ವಿವರಿಸುತ್ತಾನೆ. ರಂಗಪ್ಪ ಭಿಕ್ಷಾಟನೆಯನ್ನು ವೃತ್ತಿಯನ್ನಾಗಿ ಮಾಡಿಕೊಂಡ ಅಂಜಪ್ಪನಿಗೆ ಕೇಳುವ ಪ್ರಶ್ನೆಗಳು, ಅವನು ಕೊಡುವ ಉತ್ತರಗಳು ಸೊಗಸಾದ ಜಾನಪದ ಶೈಲಿಯ ಸಂಭಾಷಣೆ ರೂಪದಲ್ಲಿ ಮೂಡಿಬಂದಿವೆ. 'ನಿಮ್ಮಪ್ಪ ಮಗುವಾಗಿದ್ದಾಗ ನನ್ನ ಗಡ್ಡ ನೆರೆತಿತ್ತು', 'ಏನಯ್ಯ ಬಹಳ ಸಂಪನ್ನ ಹಾಂಗೆ ಮಾತಾಡ್ತಿಯಾ', 'ಈಗ ಲಾಕಪ್ಪಿಗೆ ಕಳುಸ್ತೇನಿ, ಆಗ ಹೇಳು ಪದಾನ', 'ನನಗ್ಯಾರು ಸಾಕ್ಷಿ, ದೇವರು ಸಾಕ್ಷಿ', ಇಂಥ ಮಾತುಗಳು ಜಾನಪದ ಭಾಷೆಗೆ ಉತ್ತಮ ನಿದರ್ಶನಗಳಾಗಿವೆ. ಜಾನಪದ ಭಾಷೆಯಲ್ಲಿ ಕತೆಗಳನ್ನು ರಚಿಸಿ, ಕುತೂಹಲ ಹುಟ್ಟಿಸಿ, ಸಣ್ಣಕತೆಗೆ ಸ್ಪಷ್ಟ ಸ್ವರೂಪವೊಂದನ್ನು ಒದಗಿಸಿದವರು.

ಮಾಸ್ತಿ, ಪೂರ್ಣಚಂದ್ರ ತೇಜಸ್ವಿ ಬಹಳ ಅಪರೂಪದ ಕತೆಗಾರ; ಒಂದು ಸಾಮಾನ್ಯ ಸಂಗತಿಯಲ್ಲೂ ಅಭಿವ್ಯಕ್ತಿಯ ಪರಿಕರಗಳನ್ನು ಹುಡುಕುವ ಅವರ ಕತೆಗಳ ಭಾಷೆ ನೇರ ಮತ್ತು ಸರಳವಾಗಿರುತ್ತದೆ. ಮನುಷ್ಯ ಸ್ವಭಾವವನ್ನು ವಿಡಂಬಿಸುವ 'ಡೇರ್ ಡೇವಿಲ್ ಮುಸ್ತಾಫಾ' ಕತೆಯಲ್ಲಿ ಬರುವ ಮಾತು ನುಡಿಗಟ್ಟು, ಬೈಗುಳಗಳು ಮನುಷ್ಯ ಸಹಜವಾದ ಕುತೂಹಲ ಹುಟ್ಟಿಸುತ್ತವೆ. ಜಾನಪದ ಭಾಷೆಗೆ ಅಂಥ ಕುತೂಹಲ ಕೆರಳಿಸುವ ಶಕ್ತಿ ಇರುವುದು. 'ಏನೋ', 'ನಿನ್ನದೇನೋ', 'ನೀನು ಯಾವನೋ', 'ಯಾಕೋ ಮೈ ಮುಟ್ಟುತ್ತೀಯಾ, ನಿಮ್ಮಪ್ಪ ನನಗೆ ಅನ್ನ ಹಾಕಿದ್ದನಾ', 'ಅಪ್ಪನ ಸುದ್ದಿ ಎತ್ತಿದರೆ ಚಪ್ಲಿ ಏಟು' ಇಂಥ ಮಾತುಗಳ ವೈಖರಿ ದಟ್ಟವಾಗಿ ಕಾಣುತ್ತದೆ. ವರ್ತಮಾನದ ಮೇಲೆ ನಿಂತು ಬದುಕನ್ನು ಗ್ರಹಿಸುವ ತೇಜಸ್ವಿಯವರು ಮನುಷ್ಯನ ಸ್ನೇಹ, ಅಂತಃಕರಣದಂತಹ ಗುಣಗಳು ಜಾತಿ ಧರ್ಮಗಳನ್ನು ಮೀರಿದವುಗಳು ಎಂಬ ಸತ್ಯವನ್ನು ಈ ಕತೆಯಲ್ಲಿ ಸಾರಿದ್ದಾರೆ.

ಬಂಡಾಯ ಸಾಹಿತ್ಯದ ಪ್ರಾತಿನಿಧಿಕ ಕತೆಗಾರರಾದ ಬೆಸಗರಹಳ್ಳಿ ರಾಮಣ್ಣ, ಕುಂ. ವೀರಭದ್ರಪ್ಪ ಅವರ ಕತೆಗಳಲ್ಲಿ ಗ್ರಾಮಭಾರತ ತನ್ನ ಸ್ವರೂಪವನ್ನು ತೆರೆದು ತೋರುತ್ತದೆ. ಜಮೀನ್ದಾರಿಗಳ ಕ್ರೌರ್ಯ, ದಲಿತರ ಬಡತನ, ಶೋಷಣೆ, ಅಸಹಾಯಕತೆ ದಟ್ಟವಾಸ್ತವ ನೆಲೆಯಲ್ಲಿ ಸಹಜ ಧಾಟಿಯಲ್ಲಿ ನಿರೂಪಿತಗೊಂಡಿವೆ. ಅವರ ಕತೆಗಳ ಸರಳ ಸಂಭಾಷಣೆ, ಮಾನವೀಯ ಅಂತಃಕರಣವನ್ನು ಕೆಣಕುತ್ತವೆ. ಇನ್ನು ಬೆಸಗರಹಳ್ಳಿ ರಾಮಣ್ಣನವರ ಕಕರನ ಯುಗಾದಿ, ಗಾಂಧಿ, ಸುಗ್ಗಿ ಮುಂತಾದ ಕತೆಗಳು. ಇಲ್ಲಿಯ ಜನಪದ ಭಾಷೆಗೆ ಹೃದಯವನ್ನು ಮಿಡಿಯುವ ಶಕ್ತಿ ಇರುವುದು ಗೋಚರಿಸುತ್ತದೆ. ಅವರ 'ಗಾಂಧಿ' ಕತೆಯ ಹರಿತವಾದ ವ್ಯಂಗ್ಯದ ಮಾತುಗಳು, ಸ್ವಾತಂತ್ರ್ಯೋತ್ತರ ಭಾರತ ಗಾಂಧೀಜಿಯವರ ಗ್ರಾಮ ಸ್ವರಾಜ್ಯ ತತ್ವಗಳನ್ನು ಗಾಳಿಗೆ ತೂರಿ, ಅನಾರೋಗ್ಯಕರವಾದ ಸ್ಥಿತಿ ಕಣ್ಣಿಗೆ ಕಟ್ಟುವಂತೆ ಚಿತ್ರಿಸಿವೆ. ಈ ಕತೆಯ ಮುಖ್ಯ ಪಾತ್ರ ಕರಿಸಿದ್ದೇಗೌಡನ ಮಗಳ ಮಗ 'ಮಹಾತ್ಮ ಗಾಂಧಿ' ಹೆಸರಿನ ಹುಡುಗನ ಮಾತುಗಳು ಹೀಗಿವೆ : "ಅಯ್ಯಾ ನನ್ನ ಊರಿಗೇ ಕರ್ಕೊಂಡು ನಡಿ, ನನ್ನ ಹಣೆಬರಹ ಇದ್ದಂಗಾಗ್ತದೆ".

"ಅಂಗಲ್ಲ ಮಾತಾಡ್ಬ್ಯಾಡ... ನಾನು ಇನ್ನೂ ಬದುಕಿವ್ನಿ ಕಣ ಮಗ... ...ನಿನ್ನ ಉಳಿಸ್ಕೋತೇನಿ."

– ಈ ತರಹದ ಮಾತುಗಳು ಅಪ್ಪಟ ಗ್ರಾಮೀಣ ಸಂವೇದನೆಯ ಅಭಿವ್ಯಕ್ತಿಗಳು. ಅವುಗಳಿಗಿರುವ ಅಂತಃಕರಣದ ಶಕ್ತಿ ಎಂಥದ್ದು ಎಂಬುದನ್ನು ಮಂಡನೆ ಪ್ರದೇಶದ ಈ ಜನಪದ ಭಾಷೆ ತಿಳಿಸುತ್ತದೆ.

ಇಪ್ಪತ್ತನೆಯ ಶತಮಾನದ ಶ್ರೇಷ್ಠ ಕತೆಗಳಲ್ಲಿ ಒಂದಾದ ಕುಂ. ವೀರಭದ್ರಪ್ಪನವರ 'ದೇವರ ಹೆಣ' ಕತೆಯ ಜನಪದ ಭಾಷೆಯ ಶಕ್ತಿಯನ್ನು ಓದಿಯೇ ಅನುಭವಿಸಬೇಕು. ಠೊಣ್ಣಿ ಕಟುಕರ ದಯಾನಂದಪ್ಪನ ಮುಂದೆ ನಿಂತು, "ಎಪ್ಪೊ ತೊಗಲಿನ ರೇಟು ಎಂಗೈತಿ" ಎಂದು ಕೇಳಿದನು. "ಎತ್ತಿಂದೋ, ಎಮ್ಮಿಂದೋ" ಅಂತ ಕೇಳಿದ ದಯಾನಂದ. 'ಎತ್ತಿಂದಪ್ಪೋ' ಎಂದನು ಠೊಣ್ಣಿ. "ಎಂಗೋ ತೊಗಲು ಬರೋದು ಗ್ಯಾರಂಟಿ. ಮುಂಗಡ ಯಾಕೆ ಒಂದೈದು ಇಸಗಬಾರ್ದು" ಎಂದು ಪಿಲಾನು ಹಾಕಿದವನು ಠೊಣ್ಣಿ. "ಒಂದೈದು ಅಡವಾನ್ಸು ಕೊಡಪ್ಪೋ... ಜ್ವಾಳ ತಕ್ಕಬೇಕಿತ್ತು. ಮನಿ ಮಂದಿ ಉಪಾಸ ಕುಂತಾವ" ಅಂತ ಕೇಳಿಯೇಬಿಟ್ಟನು. ಆಗ ಅವನು, "ಓಗ ಓಗಲೇ... ಎಡಗೈಯಾಗ ತೊಗಲಿಡು, ಬಲಗೈಯಾಗ ರೊಕ್ಕ ಎಣಿಸಿಗ" ಅಂದುಬಿಟ್ಟನು. –

## ಸಾದರ ಸ್ವೀಕಾರ

**ವಿಷಯ ವಚನಸಂಪುಟಗಳು – ಸಂಪುಟ–೬**
**ಜಂಗಮ, ಜೀವ, ದಾಸೋಹ, ದೀಕ್ಷೆ, ದ್ವೈತ–ಅದ್ವೈತ**
*ಸಂ. : ಡಾ॥ ಸಂಗಮೇಶ ಸವದತ್ತಿಮಠ*
***ಪುಟ : xxxii + ೨೭೮*** ***ಬೆಲೆ : ರೂ. ೩೦೦***
**ಶ್ರೀ ಚೆನ್ನಬಸವೇಶ್ವರ ಸಂಸ್ಥಾನ ಹಿರೇಮಠ,** ಸುಕ್ಷೇತ್ರ ಹಾರಕೂಡ – ೫೮೫ ೪೩೭, ಬಸವಕಲ್ಯಾಣ ತಾಲೂಕು, ಬೀದರ ಜಿಲ್ಲೆ

**ಜಗವೆಲ್ಲ ನಗುತಿರಲಿ** (ಕವನ ಸಂಕಲನ)
*ಸುಭಾಷ ಹೇಮಣ್ಣ ಚವ್ಹಾಣ*
***ಪುಟ : ೬೮*** ***ಬೆಲೆ : ರೂ. ೮೦***
**ಸೀತಾಮಾತಾ ಪ್ರಕಾಶನ,**
ಪರಮವಾಡಿ–೫೮೧ ೧೧೮, ಪೋ. ಯಲವಿಗಿ, ಸವಣೂರು ತಾಲೂಕು, ಹಾವೇರಿ ಜಿಲ್ಲೆ

**ಪ್ರತಿಸ್ಪಂದನ** (ಬಂಗಾರಿ ಕಾವ್ಯ ಮಾಲೆ – 1) *ಶಿಲ್ಪಾ ಎಸ್.*
***ಪುಟ : xvi + ೬೮*** ***ಬೆಲೆ : ರೂ. ೨೫***

**ಪಾರಂಪರಿಕ ಸಂವಹನ ಮತ್ತು ಸರ್ಕಾರ** (ಬಂಗಾರಿ ಜಾನಪದ ಪುಸ್ತಕ ಮಾಲೆ – 1) *ಡಾ॥ ಬಸಪ್ಪ ಬಂಗಾರಿ*
***ಪುಟ : xiv + ೬೮*** ***ಬೆಲೆ : ರೂ. ೯೯***

**ಪಾರಂಪರಿಕ ಸಂವಹನ ಮತ್ತು ಶಿಕ್ಷಣ** (ಬಂಗಾರಿ ಜಾನಪದ ಪುಸ್ತಕ ಮಾಲೆ – 2) *ಡಾ॥ ಬಸಪ್ಪ ಬಂಗಾರಿ*
***ಪುಟ : xvi + ೮೨*** ***ಬೆಲೆ : ರೂ. ೯೯***

**ಪಾರಂಪರಿಕ ಸಂವಹನ** (ಬಂಗಾರಿ ಜಾನಪದ ಪುಸ್ತಕ ಮಾಲೆ – 3) *ಡಾ॥ ಬಸಪ್ಪ ಬಂಗಾರಿ*
***ಪುಟ : xiv + ೩೮*** ***ಬೆಲೆ : ರೂ. ೫೫***
*ಮೇಲಿನ ನಾಲ್ಕು ಪುಸ್ತಕಗಳ ಪ್ರಕಾಶಕರು*
**ಬಂಗಾರಿ ಪಬ್ಲಿಕೇಷನ್ಸ್,** ಗೊಟಗೋಡಿ–೫೮೧ ೧೯೭, ಶಿಗ್ಗಾವಿ ತಾಲೂಕು, ಹಾವೇರಿ ಜಿಲ್ಲೆ

**ನಾಕು ಏಕಾಂಕ ನಾಟಕಗಳು** *ಡಾ॥ ಬಸವರಾಜ ಸಬರದ*
***ಪುಟ : ೯೬*** ***ಬೆಲೆ : ರೂ. ೫೫***
**ಶ್ರೀ ಸಿದ್ಧಲಿಂಗೇಶ್ವರ ಪ್ರಕಾಶನ,** ಸರಸ್ವತಿ ಗೋದಾಮು, ಕಲಬುರಗಿ – ೧

**ವಿಶ್ವವಿಖ್ಯಾತ ಗಣಿತ – ಖಗೋಲ ವಿಜ್ಞಾನಿ ಆರ್ಯಭಟ ವಿರಚಿತ ಆರ್ಯಭಟೀಯಮ್**
*ಡಾ॥ ಎಸ್. ಬಾಲಚಂದ್ರ ರಾವ್*
***ಪುಟ : ೧೬೮*** ***ಬೆಲೆ : ರೂ. ೧೪೦***

**ಸುಬ್ಬಣ್ಣ ರಂಗನಾಥ ಎಕ್ಕುಂಡಿ** *ಬಿ. ಎ. ಸನದಿ*
***ಪುಟ : ೧೨೪*** ***ಬೆಲೆ : ರೂ. ೭೦***

**ಎಚ್. ಎಸ್. ಶಿವಪ್ರಕಾಶ್**
*ಬಿದರಹಳ್ಳಿ ನರಸಿಂಹಮೂರ್ತಿ*
***ಪುಟ : ೧೩೨*** ***ಬೆಲೆ : ರೂ. ೭೦***

**ಕುಂ. ವೀರಭದ್ರಪ್ಪ** *ಡಾ॥ ಲೋಕೇಶ ಅಗಸನಕಟ್ಟೆ*
***ಪುಟ : ೧೧೬*** ***ಬೆಲೆ : ರೂ. ೭೦***

**ಸಂರಚನವಾದಿ ವಿಮರ್ಶಾತ್ಮಕ ಶಿಕ್ಷಣ**
*ಡಾ॥ ಮಹಾಬಲೇಶ್ವರ ರಾವ್*
***ಪುಟ : ೭೨*** ***ಬೆಲೆ : ರೂ. ೫೦***
*ಮೇಲಿನ ಐದು ಪುಸ್ತಕಗಳ ಪ್ರಕಾಶಕರು*
**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೫೬೦ ೦೦೧

ಈ ಸಂಭಾಷಣೆ ಕೊಟ್ಟೂರು ಪ್ರದೇಶದ ಆಡುಮಾತಿನ ವೈಖರಿಗೆ ಒಂದು ಮಾದರಿ. ಇದನ್ನೇ ಜಾನಪದ ಭಾಷೆ ಎಂದು ಕರೆಯುವುದು.

ಕನ್ನಡ ದಲಿತ ಕತೆಗಾರರಲ್ಲಿ ದೇವನೂರು ಮಹಾದೇವ, ಸಿದ್ಧಲಿಂಗಯ್ಯ, ಮೊಗಳ್ಳಿ ಗಣೇಶ, ಅರವಿಂದ ಮಾಲಗತ್ತಿ, ಎಚ್. ಟಿ. ಪೋತೆ ಮುಂತಾದವರು ಪ್ರಮುಖರಾಗಿದ್ದಾರೆ. ಬುದ್ಧ, ಬಸವಾದಿ ಶರಣರು, ಜ್ಯೋತಿ ಬಾ ಫುಲೆ, ಪೆರಿಯಾರ, ಲೋಹಿಯಾ ಮೊದಲಾದ ಚಿಂತಕರ ಪ್ರಭಾವಕ್ಕೆ ಒಳಗಾಗಿ ಭೂತವನ್ನು ಶುಚಿಗೊಳಿಸುವ ನಿಟ್ಟಿನಲ್ಲಿ ತಮ್ಮ ಸೃಜನಶೀಲತೆಯನ್ನು ಹದವಾಗಿ ದುಡಿಸಿಕೊಂಡಿದ್ದಾರೆ. ಈ ಕತೆಗಾರರು ಬೆಳೆದುಬಂದ ಸಾಮಾಜಿಕ ಪರಿಸರ, ಹಸಿವು–ಬಡತನಗಳ ಕರಾಳತೆ, ಶೋಷಣೆ, ಜಾತಿಯ ಅವಮಾನ ಇಂತಹ ಏನೆಲ್ಲ, ನೋವು–ಸಂಕಟಗಳನ್ನು ಅನುಭವಿಸುವುದರಿಂದ ಜಾನಪದ ಭಾಷೆಯ ಬಳಕೆ ಇವರ ಕತೆಗಳಲ್ಲಿ ಸಹಜವಾಗಿ ಮೂಡಿಬಂದಿದೆ. ಪ್ರಾದೇಶಿಕವಾಗಿ ಈ ಭಾಷೆ ಭಿನ್ನವಾಗಿ ಕಂಡರೂ ಅವರ ದಲಿತ–ಗ್ರಾಮೀಣ ಸಂವೇದನೆ ಮಾತ್ರ ಒಂದೇ ಆಗಿದೆ. ಈ ಕತೆಗಾರರ ಕತೆಗಳ ಭಾಷಿಕ ಅಧ್ಯಯನ ಪ್ರತ್ಯೇಕವಾಗಿ ನಡೆಯಬೇಕಿದೆ ಎನಿಸುತ್ತದೆ. ಈ ಹಿನ್ನೆಲೆಯಲ್ಲಿ ಎಚ್. ಟಿ. ಪೋತೆ ಅವರ ಕತೆಗಳ ಮೂಲಕ ಗುಲ್ಬರ್ಗಾ ಪ್ರದೇಶದ ಜಾನಪದ ಭಾಷೆಯ ಸೊಗಡನ್ನು ಕಾಣಬಹುದು. ಎಚ್. ಟಿ. ಪೋತೆಯವರ 'ಚಮ್ಮಾವುಗೆ' ಕಥಾಸಂಕಲನದ ಅಪ್ಪ, ಅವ್ವ, ಚಮ್ಮಾವುಗೆ, ವತನ, ಚಲುವ, ಬರ, ದಳಿ ಮುಂತಾದ ಕತೆಗಳಲ್ಲಿ ಬಳಕೆಯಾದ ಜಾನಪದ ಭಾಷೆಯ ಸೊಗಡು ಕಣ್ಣಿಗೆ ರಾಚುತ್ತದೆ. ಈ ಕತೆಗಳಲ್ಲಿ ಬರುವ ಪಾತ್ರಗಳೆಲ್ಲ ದಲಿತ ಸಮುದಾಯದ ಪ್ರತಿನಿಧಿಗಳಾಗಿ, ನೋವಿನ, ಸಂಕಟದ ನೆಲೆಯಲ್ಲಿ ಮಾತಾಡುವಾಗ ಬಳಸುವ ಭಾಷೆ ಅಪ್ಪಟ ಜಾನಪದ ಎಂಬುದನ್ನು ಬೇರೆ ಹೇಳಬೇಕಾಗಿಲ್ಲ. 'ಚುಮು ಚುಮು ಬೆಳಕಾಗಿತ್ತು. ಒಲಿ ಧಗಧಗ ಉರ್ಯಾಕ್ಹತ್ತಿತ್ತು', 'ಗೌಡ್ರ ಇದ ತ್ವಾಟದಾಗ ನಮ್ಮಪ್ಪಗ ಜೀತಕ್ಕ ಇಟ್ಟಿದ್ನಂತ', 'ಸಿಟ್ಟು ತಾಳಲಾರದ ಗೌಡ ಇಟ್ಟ ತಡಾ ಮಾಡಾದೇನು ಎಂದು ಜಾಡಿಸಿ ಅಪ್ಪನ ಹೆಡಕಿನ ಮ್ಯಾಲ ಒದ್ದಿದ್ದನಂತೆ', 'ಯವ್ವಾ ನಾ ಕಾಳಗಿತ್ತಿ ಯಮ್ಮಿ ಮ್ಯಾಲಿನ ಹಂಬಲಕ ಅದು ಎಲ್ಲಿ ಹರಕೊಂಡು ಹ್ವಾದಿತ್ತು ಅಂತ ಹೊರಗ ಮಕ್ಕೊಂಡೀನ್ರಿ' ...ಇಂಥ ಮಾತುಗಳು ಸಾಕಷ್ಟಿವೆ. ಭಾಷಿಕ ದೃಷ್ಟಿಯಿಂದ ಇವು ಅಧ್ಯಯನಯೋಗ್ಯ. ಈ ಮಾತುಗಳ ಅಂತಃಶಕ್ತಿ ಅಗಾಧವಾದುದು. 'ಈಗ ನನಗ್ಯಾರ ದಿಕ್ಕು ಹೇಳ್ರಿ ಶಿವನ ಮನಿ ದೇಗಲಾಗಲಿ, ಅವನ ಅಂಸ ನಟೌಂಸಾಗಲಿ ! ಅಂವಾ ಸಟೆದ ಹೋಗಲಿ, ನನ ಹಾಂಟ್ಯಾಗೋಳ ರೊಕ್ಕ ತಗೊಂಡು ಮನಿ ಮಾಡಿ ಕೊಡ್ಲಿಲ್ಲ' ...ಇಂಥ ಮಾತುಗಳಲ್ಲಿ ಅವರ ನೋವು, ಸಂಕಟ ವ್ಯಕ್ತವಾಗುತ್ತವೆ. ಭಾಷೆಯ ಒಂದು ಗುಣ ಎಂದರೆ ಸಹಜಸ್ಥಿತಿಯಲ್ಲಿ ಹೊರಡುವ ಮಾತುಗಳಲ್ಲಿ ಅರ್ಥವಂತಿಕೆಯನ್ನು ತುಂಬುವುದು. ಭಾಷೆಯ ಬಳಕೆಗಾಗಿ ತಡಕಾಡುವ ಸ್ಥಿತಿ ಈ ಜನರಿಗೆ ಇರುವುದಿಲ್ಲ. ಅರಳು ಹುರಿದಂತೆ ಪಟಪಟನೆ ಮಾತಾಡುವ ಅವರ ಮಾತಿನ ಮೋಡಿಗೆ ಬೆರಗಾಗಬೇಕು. ಹಳ್ಳಿಗಾಡಿನ ಈ ಜನ ಅನಕ್ಷರಸ್ಥರಿರಬಹುದು, ಆದರೆ ಅಜ್ಞಾನಿಗಳಲ್ಲ. ಸಂದರ್ಭ, ಸನ್ನಿವೇಶಗಳಿಗೆ ತಕ್ಕ ಹಾಗೆ ಜಾನಪದ ಭಾಷೆಯನ್ನು ಅಭಿವ್ಯಕ್ತಿಸುವುದು ಅವರ ಸಹಜ ಗುಣ ಎಂಬುದನ್ನು ಇಲ್ಲಿಯ ಕತೆಗಳು ಸಾಬೀತುಪಡಿಸುತ್ತವೆ.

ಹೊಸಗನ್ನಡ ಸಾಹಿತ್ಯದ ಅನೇಕ ಕಾದಂಬರಿ ಕಾರರು ಪ್ರಾದೇಶಿಕ ನೆಲೆಯಲ್ಲಿ ಕಾದಂಬರಿಗಳನ್ನು ರಚಿಸಿದ್ದಾರೆ. ಮಿರ್ಜಿ ಅಣ್ಣಾರಾಯರ 'ನಿಸರ್ಗ', ರಾವಬಹಾದ್ದೂರರ 'ಗ್ರಾಮಾಯಣ', ಕುವೆಂಪು ಅವರ 'ಕಾನೂರು ಸುಬ್ಬಮ್ಮ ಹೆಗ್ಗಡತಿ', 'ಮಲೆಗಳಲ್ಲಿ ಮದುಮಗಳು', ಕಾರಂತರ 'ಚೋಮನ ದುಡಿ', ಬಸವರಾಜ ಕಟ್ಟೀಮನಿಯವರ 'ನೀ ನನ್ನ ಮುಟ್ಟಬೇಡ', ದೇವನೂರು ಮಹಾದೇವರ 'ಒಡಲಾಳ', ಮ. ನ. ಜವರಯ್ಯ ಅವರ 'ಮಾಗಿ', ಅರವಿಂದ ಮಾಲಗತ್ತಿಯವರ 'ಕಾರ್ಯ' ಮೊದಲಾದ ಕಾದಂಬರಿಗಳ ಜೀವಾಳ ಪ್ರಾದೇಶಿಕತೆ, ಅಲ್ಲಿ ಬಳಕೆಯಾದ ಭಾಷೆ ಜಾನಪದ ಭಾಷೆ ಎಂದು ಹೇಳಬಹುದು. ಅದರಲ್ಲೂ ದಲಿತರ ಬದುಕನ್ನು ಬಿಚ್ಚಿಡುವಾಗ, ಅವರ ಬದುಕಿನ ವಾಸ್ತವವನ್ನು ಕಟ್ಟಿಕೊಡುವಾಗ, ಬದುಕಿನ ಭಾಷೆಯೆಂದೇ ಭಾವಿಸಲಾದ ಜಾನಪದ ಭಾಷೆಯ ನುಡಿಮುತ್ತುಗಳು, ವಾಕ್ಯವೃಂದಗಳು, ಸಂಭಾಷಣೆಯ ರೀತಿ, ಬೈಗುಳಗಳು ಎಗ್ಗಿಲ್ಲದೆ ಸುರಿಯುತ್ತವೆ. ಈ ಜಾನಪದ ಭಾಷೆಯ ಸೊಗಡಿನ ಎಲ್ಲ ಆಯಾಮಗಳನ್ನು ಇಂಥ ಕಾದಂಬರಿಗಳಲ್ಲಿ ನೋಡಬಹುದು. ಹೀಗೆ ಹೊಸಗನ್ನಡ ಸಾಹಿತ್ಯದ ಹಲವು ಪ್ರಕಾರಗಳಲ್ಲಿ ಜಾನಪದ ಭಾಷೆ ಹಾಸುಹೊಕ್ಕಾಗಿದೆ. ಈ ಸಾಹಿತ್ಯ ಪ್ರಕಾರಗಳ ಭಾಷೆಯ ಸೊಗಡನ್ನು ವಿವರವಾದ ಅಧ್ಯಯನಕ್ಕೆ ಒಳಪಡಿಸುವ ಅಗತ್ಯತೆ ಹೆಚ್ಚಾಗಿ ಕಂಡುಬರುತ್ತದೆ. ಅದರಲ್ಲೂ ಜಾನಪದ ಭಾಷೆಯ ದೃಷ್ಟಿಯಿಂದ ಒಂದೊಂದು ಕೃತಿಗಳನ್ನು ಅಥವಾ ಇಡೀ ಒಂದು ಪ್ರಕಾರವನ್ನು ಅಧ್ಯಯನ ಮಾಡಬಹುದಾಗಿದೆ.

**ಪ್ರೊ॥ ಧನವಂತ ಹಾಜವಗೋಳ**
ಪ್ರಾಧ್ಯಾಪಕರು, ಕನ್ನಡ ಅಧ್ಯಯನ ಪೀಠ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ – ೫೮೦ ೦೦೩

# ಸಂಕ್ರಾಂತಿ

೧

ಹಲವು ತೊರೆಗಳ ಸಂಕರವೊಂದು ನದಿ,
ಹಲವು ಮೊರೆತಗಳ ಸಂಕರವು ಸಾಗರದುಡಿ,
ಹಲವು ನಡೆನುಡಿ ಸಂಕರವೇ ನಾಡ ಗುಡಿ,
ಗಿಡ, ಮರಬಳ್ಳಿ ಸಂಕರವೇ ಕಾಡು,
ಹಕ್ಕಿಪಕ್ಕಿಗಳ ಕಲರವವೇ ಬಾನಿನ ಹಾಡು,
ವಾದಗಳ ಸಂಕರವೇ ಪ್ರಜಾಪ್ರಭುತ್ವದ ಜಾಡು,
ಜ್ಞಾನಿಗಳ ಸಂಕರವೆಷ್ಟು ಅದ್ಭುತವು ನೋಡು !

೨

ಇಂದಿನ ಗಾಳಿಯಲ್ಲಿ ಯಾವುದು ಶುದ್ಧ ?
ಇಂದಿನ ಜನಮನವು ಯಾವುದಕ್ಕೆ ಬದ್ಧ ?
ಎಲ್ಲ ಕೂಡುವುದಿಲ್ಲ, ಕೂಡಿಸಲು ಬಾರದು.
ಸಮಾನ ಭಾವಕ್ಕೆ ಸಂಗಮದ ಸಿದ್ಧಿ ,
ಸಮದೃಷ್ಟಿ ಒಪ್ಪಿದರೆ ಹೃದಯ ಸಮೃದ್ಧಿ ,
ಏಕ ದೃಷ್ಟಿ, ಏಕ ವಾದದ ಹಠಕ್ಕೆ ಇರದು ಬುದ್ಧಿ.

೩

ಸಂಕ್ರಾಂತಿ, ನೀ ಬರಿ ಎಳ್ಳು ಬೆಲ್ಲದ ಮಿಶ್ರಣವೆ ?
ಹಳೆಯ ಬೆಲ್ಲಕ್ಕೆ ಹೊಸ ಎಳ್ಳಿನ ಮೈತ್ರಿಯೇ ?
ಹಳೆಯ ಗುಡಿಯಲ್ಲಿ ಹೊಸ ದೇವರ ಸ್ಥಾಪನ ?
ಭಿನ್ನತೆಯ ಸ್ವಾಗತಿಸುವುದು ಎಚ್ಚರದ ಮನ,
ಸತ್ಯಕ್ಕೆ ಹಲವಾರು ಮುಖ ಎನ್ನುವರು,
ತಿಳಿವಿನಾಚೆಗಿವೆ ಹಲವು ತಿಳಿವು ಎನ್ನುವರು,
ಒಂದರಿನ್ನೊಂದು ಅಧಿಕವೆನ್ನುವ ಮತವು,
ಲೋಕೋಭಿನ್ನ ರುಚಿ ಎಂಬುದಕ್ಕೆ ಸಹಮತವು
ಇಂದು ಸಾಧಕವಾವುದು ? ಬಾಧಕವಾವುದು ?
ನಿರ್ಣಯಿಸಲಾಗದು ಇದು ಸಂಕ್ರಾಂತಿ ಕಾಲವು ;

೪

ನನ್ನತನದ ನಿಷ್ಠೆಗೆ ನಿನ್ನತನದ ನಿಷ್ಠುರತೆ
ಒಗ್ಗಿಸಿಕೊಳ್ಳಬೇಕೆನ್ನುವಿಯಾ ಸಂಕ್ರಾಂತಿ ?
ಒಪ್ಪಿದೆ, ಪ್ರಕೃತಿ ಬರೆದಿದೆ ಪರಿವರ್ತನೆಯ ಸಂವಿಧಾನ
ಕಾಲಚಕ್ರದುರುಳುವಿಕೆಗೆ ನೀನು ಸಾರಥಿಯು,
ಆಯ್ತು ಬಿಡು ಸಂಕ್ರಾಂತಿ ಇಟ್ಟುಕೊ ಕಾಲದ ಕಡಿವಾಣ,
ಕಟ್ಟುವಿಯಾ ನನ್ನ ಮನ ? ಅದರ ಮಹಾರಥಿ ನಾನೇ ಸಖ !




**ಮಾಲತಿ ಪಟ್ಟಣಶೆಟ್ಟಿ**
ಅಧ್ಯಕ್ಷರು, ಕರ್ನಾಟಕ ಸಾಹಿತ್ಯ ಅಕಾಡೆಮಿ, ಕನ್ನಡ ಭವನ, ಜೆ. ಸಿ. ರಸ್ತೆ, ಬೆಂಗಳೂರು–೫೬೦ ೦೦೨



# ಮಕ್ಕಳಸ್ನೇಹಿ ಸಮಾಜ ನಿರ್ಮಾಣದಲ್ಲಿ ನಮ್ಮ ಪಾತ್ರ

ದೇಶದ ಅಭಿವೃದ್ಧಿಯನ್ನು ಗುಣಾತ್ಮಕ ನೆಲೆಯಲ್ಲಿ ಯೋಚಿಸುವ ಯಾವುದೇ ದೇಶ ತನ್ನ ಪರಿಕಲ್ಪನೆಗಳನ್ನು ಮತ್ತು ಯೋಜನೆಗಳನ್ನು ಮಗು ಕೇಂದ್ರಿತವಾಗಿ ಯೋಚಿಸಿರುತ್ತದೆ ಮತ್ತು ಯೋಜಿಸಿರುತ್ತದೆ. ನಾವು ಭಾರತದಲ್ಲಿ ರಾಜಕೀಯ ಕೇಂದ್ರಿತವಾಗಿ, ಆರ್ಥಿಕತೆಯ ಕೇಂದ್ರಿತವಾಗಿ, ಸಾಮಾಜಿಕ, ಜಾತಿ, ಲಿಂಗ, ವರ್ಗ ...ಹೀಗೆ ಬೇರೆ ಬೇರೆ ಕೇಂದ್ರಗಳನ್ನಿಟ್ಟುಕೊಂಡು ನಮ್ಮ ಅಭಿವೃದ್ಧಿಯನ್ನು ಅಳತೆ ಮಾಡುತ್ತಾ ಇರುತ್ತೇವೆ. ಆದರೆ ನಿಜವಾಗಿ ಆಗಬೇಕಿರುವುದು ಮಗು ಕೇಂದ್ರಿತವಾದ ಅಭಿವೃದ್ಧಿ. ಅಂದರೆ ಪ್ರತಿ ಮಗು ತನ್ನೆಲ್ಲಾ ಶಕ್ತಿಸಾಮರ್ಥ್ಯವನ್ನು ಬಳಸಿಕೊಂಡು ದೇಶದ ಉತ್ತಮ ನಾಗರಿಕನಾಗಲು ಬೇಕಾದಂತಹ ಪೂರಕ ವಾತಾವರಣವನ್ನು ಮತ್ತು ಸೌಲಭ್ಯಗಳನ್ನು ಸರ್ಕಾರ ಒದಗಿಸಿ ಕೊಡಬೇಕಿರುವುದು ಅದರ ಕರ್ತವ್ಯವಾಗಿರುತ್ತದೆ. ಅದೇ ರೀತಿ ಪ್ರತಿ ಸಮಾಜ ಮತ್ತು ಕುಟುಂಬವೂ ಕೂಡ ಮಗು ಕೇಂದ್ರಿತವಾಗಿ ಯೋಚಿಸಿ ಅದರ ಸರ್ವಾಂಗೀಣ ಬೆಳವಣಿಗೆಗೆ ಬೇಕಾದಂತಹ ಪೂರಕ ವಾತಾವರಣವನ್ನು ಪ್ರತಿ ಹಂತದಲ್ಲೂ ರೂಪಿಸಬೇಕು. ಈ ಹಿನ್ನೆಲೆಯಲ್ಲಿ ಮ್ಯಾಮಿ ಜೆನಿಕೋಲ್ ಎನ್ನುವ ಕವಿ, ಮಗುವಿನ ಮನಸ್ಸನ್ನು ಹೊಕ್ಕು, ಮಕ್ಕಳ ಪರವಾಗಿ ಬರೆದ ಈ ಕವಿತೆ ನನಗೆ ಮುಖ್ಯವೆನಿಸುತ್ತದೆ :

ನಾನೊಂದು ಮಗು
ನಾನೊಂದು ಮಗು
ನನ್ನ ಬರವಿಗೆ ಇಡೀ ಜಗತ್ತು ಕಾಯುತ್ತದೆ
ನಾನು ಏನಾಗುತ್ತೇನೆ ಎಂದು
ಇಡೀ ಭೂಮಿ ಕುತೂಹಲದಿಂದ ನೋಡುತ್ತದೆ.
ನಾನು ಏನಾಗಿದ್ದೇನೆ ಏನಾಗುತ್ತೇನೆ
ಎಂಬುದರ ಮೇಲೆ ನಾಗರಿಕತೆಯ ತಕ್ಕಡಿ ನಿಂತಿದೆ

ನಾನೊಂದು ಮಗು
ನನ್ನ ಭವಿಷ್ಯ ನಿಮ್ಮ ಕೈಯಲ್ಲಿದೆ.
ನನ್ನ ಸೋಲು–ಗೆಲುವು
ನಿಮ್ಮಿಂದಲೇ ನಿರ್ಧಾರವಾಗುತ್ತದೆ.

ಎಂದೇ
ನೆಮ್ಮದಿ ನೀಡುವಂಥದನ್ನು ಕೊಡಿ
ಇದು ನನ್ನ ಪ್ರಾರ್ಥನೆ.
ದಯವಿಟ್ಟು ಕಲಿಸಿಕೊಡಿ
ಈ ಜಗತ್ತಿಗೆ ನಾನೊಂದು ವರವಾಗುವಂತೆ.

– ಒಂದು ಮಗು ಹೀಗೆ ಆರ್ದ್ರವಾಗಿ ನಮ್ಮನ್ನ ಬೇಡಿಕೊಳ್ಳುತ್ತಾ ಇರುವಂತೆ ಭಾಸವಾಗುವ ಈ ಕವಿತೆ, ಹಿರಿಯರೆಂದುಕೊಂಡ ನಮ್ಮೆಲ್ಲರ ಕಣ್ಣು ತೆರೆಸುವಂತಿದೆ.

ಹಾಗೇ ಪ್ರಸಿದ್ಧ ರಷ್ಯನ್ ಬರಹಗಾರ, ಚಿಂತಕ ಮತ್ತು ಶಿಕ್ಷಣತಜ್ಞ ಆ್ಯಂಟೆನ್ ಮಕರೆಂಕೋ ಪ್ರಜಾಪ್ರಭುತ್ವವಾದಿ ತತ್ವಗಳನ್ನು, ಶಿಕ್ಷಣದ ಪಠ್ಯಗಳಲ್ಲಿ ಸಾಹಿತ್ಯದ ಮೂಲಕ ಅಂದರೆ ಸಾಹಿತ್ಯದ ಭಾಷೆ ಮತ್ತು ನಿರೂಪಣೆಯ ಮೂಲಕ ಪರಿಚಯಿಸಿದ ಮೊದಲಿಗ. ಮಗುವಿನ ಮಾನಸಿಕ ಬೆಳವಣಿಗೆಗೆ ಪೂರಕವಾಗುವ 'ರೋಡ್ ಟು ಲೈಫ್' ಎನ್ನುವುದು ಅವನ ಪ್ರಸಿದ್ಧ ಕೃತಿ. ಈ ಮೂಲಕ ಅವನು ರಷ್ಯದಲ್ಲಿ ಅಷ್ಟೇ ಅಲ್ಲ, ಅಮೆರಿಕ ಖಂಡದ ದೇಶಗಳಲ್ಲಿ ಕೂಡ ಸಂಚಲನ ಉಂಟುಮಾಡುತ್ತಾನೆ. ಮೊದಲ ಬಾರಿಗೆ ಆ ದೇಶದವರು ಮಕ್ಕಳ ಕೇಂದ್ರಿತವಾಗಿ ಯೋಚಿಸುವಂತೆ ಮಾಡಲು ಯಶಸ್ವಿಯಾದ. ಹಾಗೆಯೇ ಮಕ್ಕಳು ತಮ್ಮ ಒಳಿತಿನ ಕುರಿತು ತಾವೇ ಯೋಚಿಸುವಂತೆ ಮಾಡುವ ಹಲವು ಕೃತಿಗಳು ಇವನಿಂದ ರಚಿತವಾದವು. ಬೀದಿ ಮಕ್ಕಳಿಗೆ ತಾವೇ ನಡೆಸುವಂತಹ ಅನಾಥಾಶ್ರಮದ ಪರಿಕಲ್ಪನೆ, ಆದರ್ಶ ಶಾಲೆ, ಕುಟುಂಬ, ಸಮುದಾಯ ಹೇಗಿರಬೇಕೆಂಬ ಯೋಚನೆಗಳು ಆಗ ಪ್ರಾರಂಭವಾಯ್ತು.

ಎರಡನೇ ಮಹಾಯುದ್ಧದ ನಂತರ ಜಪಾನಿನ ಶಾಲೆಗಳಲ್ಲಿ ಜಾನ್ ಬ್ಯಾಕ್ ಬರೆದಿರುವ 'ಹಾರಾಡುವ ಶಾಲೆ' ಕುರಿತೇ ಹಲವು ಪ್ರಯೋಗಗಳನ್ನು ಮಾಡಲಾಯಿತು. ಇಲ್ಲೆಲ್ಲಾ ಪ್ರತಿಯೊಂದು ಮಗುವನ್ನು ಒಬ್ಬ ವ್ಯಕ್ತಿ ಎಂದು ಭಾವಿಸುವ ಮೂಲಕ ಅದರ ಬೇಕು ಬೇಡಗಳನ್ನು ಗೌರವಿಸುವಂತಹ ಅದರ ಹಕ್ಕುಗಳನ್ನು ರಕ್ಷಿಸುವಂತಹ ಕೆಲಸಗಳು ಮೊದಲ ಬಾರಿಗೆ ಆದವು. ಇದರ ಆಧಾರದಲ್ಲಿ ಯೂನಿಸೆಫ್ ಮಗುವನ್ನು ಕುರಿತು ತನ್ನ ನಿಲುವನ್ನು ಹೀಗೆ ರೂಪಿಸಿಕೊಂಡು ಸ್ಪಷ್ಟಪಡಿಸಿದೆ.

"ಯಾವುದೇ ಒಂದು ರಾಷ್ಟ್ರದ ಘನತೆ, ಸ್ಥಾನಮಾನವನ್ನು, ಅದು ತನ್ನ ಮಕ್ಕಳನ್ನು, ಅವುಗಳ ಆರೋಗ್ಯ ಮತ್ತು ಭದ್ರತೆಯನ್ನು, ಭೌತಿಕ ಸುರಕ್ಷತೆಯನ್ನು, ಅವುಗಳ ಶೈಕ್ಷಣಿಕ ಅಗತ್ಯತೆಗಳನ್ನು, ಅವು ಸಾಮಾಜಿಕ ಸಾಮ್ಯಕ್ಕೆ ಹೊಂದಿಕೊಳ್ಳುವುದನ್ನು ಮತ್ತು ಅವು ಜನ್ಮತಾಳುವ ಕುಟುಂಬಗಳು ಮತ್ತು ಸಮುದಾಯಗಳು ಅವನ್ನು ಎಷ್ಟರಮಟ್ಟಿಗೆ ಪ್ರೀತಿವಾತ್ಸಲ್ಯಗಳಿಂದ ನೋಡಿಕೊಳ್ಳಲು ಅನುವು ಮಾಡಿಕೊಡುತ್ತವೆ ಎಂಬೆಲ್ಲ ಅಂಶಗಳ ಆಧಾರದ ಮೇಲೆ ಮೌಲ್ಯಮಾಪನ ಮಾಡಬಹುದಾಗಿದೆ."

ಈ ಎಲ್ಲದರ ಹಿನ್ನೆಲೆಯಲ್ಲಿ ವಿಶ್ವಸಂಸ್ಥೆಯ ಮಕ್ಕಳ ಹಕ್ಕುಗಳ ಒಡಂಬಡಿಕೆ ೧೯೮೯ರಲ್ಲಿ ಅಂಗೀಕಾರವಾಯ್ತು. ಅದಕ್ಕೀಗ ೨೫ ವರ್ಷದ ಬೆಳ್ಳಿ ಹಬ್ಬ. ಅದರಂತೆ ಪ್ರತಿ ಮಗುವಿಗೆ ಅತ್ಯುತ್ತಮ ಗುಣಮಟ್ಟದ ಪೌಷ್ಟಿಕತೆ, ಆರೋಗ್ಯ, ಉತ್ತಮ ಜೀವನಶೈಲಿಯ ಶಿಕ್ಷಣ, ಆರೈಕೆ ಒದಗಿಸುವುದು, ಎಲ್ಲ ರೀತಿಯ ಶೋಷಣೆ, ದುರ್ಬಳಕೆ, ಅಪಮಾನಕಾರಿಯಾಗಿ ನಡೆಸಿಕೊಳ್ಳುವುದರಿಂದ ಮತ್ತು ಲೈಂಗಿಕ ದೌರ್ಜನ್ಯದಿಂದ ರಕ್ಷಣೆ ನೀಡುವುದು ಪ್ರತಿ ಸರ್ಕಾರದ ಆದ್ಯ ಕರ್ತವ್ಯ. ಈ ಹಿನ್ನೆಲೆಯಲ್ಲಿ

ರೂಪ ಹಾಸನ

ನೋಡಿದಾಗ ನಮ್ಮ ದೇಶದಲ್ಲಿ ಮಕ್ಕಳ ಸ್ಥಿತಿ ಹೇಗಿದೆ ? ಆ ಕುರಿತು ನಮ್ಮ ಗಮನ ಹೋಗಿದೆಯೇ ? ಮಕ್ಕಳಸ್ನೇಹಿ ಸಮಾಜ ನಿರ್ಮಾಣದಲ್ಲಿ ಸರ್ಕಾರಗಳು, ಸಮಾಜ, ಕುಟುಂಬಗಳು ಹೇಗೆಲ್ಲ ಗಮನ ಕೊಡುತ್ತಿವೆ ? ಅದಕ್ಕೆ ಬೇಕಾದಂತಹ ಪೂರಕ ವಾತಾವರಣ ನಿರ್ಮಿಸಲು ಸಾಹಿತ್ಯ, ಬರಹಗಳು ನಮ್ಮಲ್ಲಿ ಬಂದಿವೆಯೆ ? ಎಂಬುದರ ಬಗ್ಗೆ ಯೋಚಿಸುತ್ತಾ ಹೋದರೆ ನಮಗೆ ನಮ್ಮ ಬಗ್ಗೆಯೇ ವ್ಯಥೆಯಾಗುತ್ತದೆ.

ನಮ್ಮ ದೇಶ ಮತ್ತು ಸಮಾಜದಲ್ಲಿ ನಿರ್ಲಕ್ಷಿತರಲ್ಲಿ ನಿರ್ಲಕ್ಷಿತರೆಂದರೆ ಮಕ್ಕಳು, ಅವರಿಗೆ ತಮ್ಮ ಹಕ್ಕುಗಳ ಬಗ್ಗೆ ತಿಳಿವಳಿಕೆಯೇ ಇಲ್ಲ. ಮಕ್ಕಳು ಮುಗ್ಧರು, ಅಸಹಾಯಕರು ಮತ್ತು ದನಿಯಿಲ್ಲದವರು ಆಗಿರುವುದರಿಂದಲೇ ಅವರು ನಮ್ಮ ಸಮಾಜದಲ್ಲಿ ನಿರ್ಲಕ್ಷಿತರಾಗೇ ಉಳಿದಿದ್ದಾರೆ. ಮಕ್ಕಳು ನಿರ್ಲಕ್ಷಿತರಾಗಿರುವುದರಿಂದಲೇ ಮಾಧ್ಯಮಗಳಲ್ಲಿ ಮಕ್ಕಳ ಸಮಸ್ಯೆ ನಿರ್ಲಕ್ಷಿತವಾಗಿದೆ. ಮಕ್ಕಳ ಸಾಹಿತ್ಯ ನಿರ್ಲಕ್ಷಿತವಾಗಿದೆ. ಮಕ್ಕಳ ಪತ್ರಿಕೋದ್ಯಮವಂತೂ ಅಸ್ತಿತ್ವಕ್ಕೇ ಬಂದಿಲ್ಲ ಎನ್ನಬಹುದು. ಮಕ್ಕಳನ್ನು ಕೇಂದ್ರೀಕರಿಸಿ ಪಾತ್ರಗಳನ್ನು ಸೃಷ್ಟಿಸಿದಂತಹ ಕೃತಿಗಳು ನಮ್ಮಲ್ಲಿ ಕಡಿಮೆ. ಟಾಲ್‌ಸ್ಟಾಯ್, ರವೀಂದ್ರನಾಥ ಠಾಗೂರ್, ಕುವೆಂಪು, ವೈದೇಹಿ ಅವರಂಥ ಮೇರು ಸದೃಶ ಸಾಹಿತಿಗಳು ತಾವೇ ಮಗುವಾಗಿ ಮಗುವಿನ ಮನಸ್ಸನ್ನು ಹೊಕ್ಕು ಮಗುವೊಂದು ಹೇಗೆ ಯೋಚಿಸುತ್ತದೆ ಎನ್ನುವುದನ್ನು ಮಕ್ಕಳಿಗಾಗಿ ಮಾತ್ರವಲ್ಲ ದೊಡ್ಡವರಿಗಾಗಿಯೂ ಕಟ್ಟಿಕೊಟ್ಟರು. ಆದರೆ ಮಗುವಿನೊಳಗೆ ಪರಕಾಯ ಪ್ರವೇಶ ಮಾಡಿ ಈ ರೀತಿಯ ಪರಿಣಾಮಕಾರಿಯಾದ ಸಾಹಿತ್ಯ ಸೃಷ್ಟಿಯಾದದ್ದು ನಮ್ಮಲ್ಲಿ ಕಡಿಮೆ. ಮತ್ತು ಅಂತಹುದನ್ನು ಮಕ್ಕಳಿಗೆ ತಲುಪಿಸುವಂತಹ ಪ್ರಯತ್ನವಾದುದು ಇನ್ನೂ ಕಡಿಮೆ.

ಇವತ್ತಿಗೂ ಮಕ್ಕಳ ಸ್ವತಂತ್ರ ಲೋಕದ ಬಗ್ಗೆ ನಮಗೆ ಅನುಮಾನವಿದೆ. ಆದರೆ ಪ್ರತೀ ಮಗುವಿಗೆ ಅದರದ್ದೇ ಆದ ಹುಟ್ಟು ಗುಣಗಳಿವೆ. ಆದರೆ ನಮ್ಮಲ್ಲಿ ಬಾಲ್ಯವೆಂದರೆ ಒಟ್ಟು ಬದುಕಿನ ತಯಾರಿಯೆಂದೇ ನೋಡುವುದರಿಂದ ಅದರ ವಿಶ್ವಮಾನವತ್ವವನ್ನ ಮುಚ್ಚಿ ಒಳತಳ್ಳಿ, ಧಾರ್ಮಿಕ ಚೌಕಟ್ಟಿನಿಂದ, ನೈತಿಕತೆಯ ಹಿನ್ನೆಲೆಯಲ್ಲಿ, ನೀತಿಕಥೆ, ಪುರಾಣದ ಕಥೆ, ಸಾಧಕರ ಕಥೆಗಳು, ಧಾರ್ಮಿಕ ನಡವಳಿಕೆ, ವಿಧೇಯತೆಯನ್ನು ಕುರಿತು ಪೂರ್ವಯೋಜಿತ ಪರಿಕಲ್ಪನೆಗಳಿಂದಲೇ ಸಾಹಿತ್ಯ ಮತ್ತು ಪಠ್ಯಗಳು ರಚನೆಯಾಗಿವೆ. ಅವೆಲ್ಲಾ ಉಪದೇಶಾತ್ಮಕವಾಗಿಯೇ ಇವೆಯೇ ಹೊರತು, ಮಗುವಿನಲ್ಲಿರುವ ಆಂತರಿಕ ಶಕ್ತಿಯನ್ನು, ಭಾವಕೋಶವನ್ನು ಜಾಗೃತಗೊಳಿಸುವಂತಹ, ಅನುಭವಾತ್ಮಕ ನೆಲೆಯಲ್ಲಿ ಅದು ತನ್ನನ್ನು ವಿಸ್ತರಿಸಿಕೊಳ್ಳುವಂತಹ ಕೆಲಸವಾಗಿದ್ದು ಕಡಿಮೆ.

ಮಗು ಹುಟ್ಟುತ್ತಾ ವಿಶ್ವಮಾನವನಾಗಿರುತ್ತದೆ. ಬೆಳೆಯುತ್ತಾ ಅದನ್ನು ನಾವು ಅಲ್ಪಮಾನವನನ್ನಾಗಿಸುತ್ತಾ ಹೋಗುತ್ತೇವೆ. ಮಗುವನ್ನು ಜಾತಿ, ವರ್ಗ, ಲಿಂಗ, ಪ್ರದೇಶ... ಹೀಗೆ ಛಿದ್ರಗೊಳಿಸುತ್ತಾ ಹೋಗುತ್ತೇವೆ. ಇದರಿಂದ ನಮ್ಮನ್ನು ಮೊದಲು ಎಚ್ಚರಿಸಿಕೊಳ್ಳುವುದು ಹೇಗೆ ? ಎಂಬುದನ್ನು ಕಲಿಸಿಕೊಡುವ ಕೆಲಸ ಸಾಹಿತಿ ಮತ್ತು ಅವನ ಸಾಹಿತ್ಯದಿಂದಾಗಬೇಕು. ಒಟ್ಟು ದೇಶದ ನೆಲೆಯಲ್ಲಿ ಮಕ್ಕಳಿಗೆ ನೀಡುತ್ತಿರುವ ಆದ್ಯತೆಯನ್ನು ಗುರುತಿಸಿ ಹೇಳುವುದಾದರೆ, ನಮ್ಮ ಭಾರತ ವಿಶ್ವದ ಇತರ ದೇಶಗಳ ಪಟ್ಟಿಯಲ್ಲಿ ೧೧೨ನೇ ಸ್ಥಾನದಲ್ಲಿದೆ. ಅದರ ಹಿಂದಿನ ಸ್ಥಾನ ಚೈನಾದ್ದು. ಎಲ್ಲಿ ಜನಸಂಖ್ಯೆ ಹೆಚ್ಚಿದೆಯೋ, ಬಡತನ ಹೆಚ್ಚಿದೆಯೋ, ಆರ್ಥಿಕ ಏರುಪೇರುಗಳಿವೆಯೋ, ಅಲ್ಲಿ ಮಕ್ಕಳೂ ನಿರ್ಲಕ್ಷ್ಯಕ್ಕೆ ಒಳಗಾಗುತ್ತಾರೆ, ಶೋಷಣೆಗೊಳಗಾಗುತ್ತಾರೆ. ಮೊದಲನೇ ಸ್ಥಾನದಲ್ಲಿ ಜಪಾನ್, ಅನಂತರ ಸ್ಪೇನ್, ಜರ್ಮನಿ, ಇಟಲಿ, ಫ್ರಾನ್ಸ್, ಕೆನಡಾ, ಸ್ವಿಟ್ಜರ್‌ಲೆಂಡ್, ಬ್ರಿಟನ್, ನಾರ್ವೆ ಮತ್ತು ನೆದರ್‌ಲ್ಯಾಂಡ್ಸ್ ದೇಶಗಳಿವೆ. ಭಾರತದಲ್ಲಿ ೧೯೭೪ರಲ್ಲಿ ಅಂಗೀಕರಿಸಿದ ಮಕ್ಕಳ ರಾಷ್ಟ್ರೀಯ ನೀತಿ ಮೊದಲ ಬಾರಿಗೆ ಮಕ್ಕಳನ್ನು ವ್ಯಕ್ತಿಗಳೆಂದು ಪರಿಗಣಿಸಿದೆ. ಆದರೆ ಅಂದಿನಿಂದ ಇಂದಿನವರೆಗೂ ಮಕ್ಕಳ ಸ್ಥಿತಿಯಲ್ಲಿ ಹೆಚ್ಚಿನ ಯಾವ ಬದಲಾವಣೆಯೂ ಆಗಿಲ್ಲ. ಬದಲಿಗೆ ದಿನದಿಂದ ದಿನಕ್ಕೆ ದೇಶದಲ್ಲಿ ಮಕ್ಕಳ ಮೇಲಿನ ದೌರ್ಜನ್ಯ ಹಿಂಸೆಗಳು ಹೆಚ್ಚುತ್ತಲಿವೆ.

ನವಜಾತ ಶಿಶು ಹಾಗೂ ತಾಯಿ ಇಬ್ಬರಿಗೂ ಭಾರತ ಜಗತ್ತಿನಲ್ಲೇ ಅತ್ಯಂತ ಅಪಾಯಕಾರಿ ರಾಷ್ಟ್ರ. ಭಾರತದಲ್ಲಿ ಹುಟ್ಟುವ ಪ್ರತಿ ೩ ಮಕ್ಕಳಲ್ಲಿ ಒಂದು ಮಗು ಹುಟ್ಟಿದ ದಿನವೇ ಸಾವನ್ನಪ್ಪುತ್ತದೆ. ಹೀಗೆ ಪ್ರತಿವರ್ಷ ೩,೦೯,೦೦೦ ಮಕ್ಕಳು ಹುಟ್ಟಿದ ದಿನವೇ ಬೇರೆ ಬೇರೆ ಕಾರಣಗಳಿಗಾಗಿ ಸಾವನ್ನಪ್ಪುತ್ತವೆ. ಈ ರೀತಿಯ ಸಾವಿನಲ್ಲಿ ಭಾರತ ಮೊದಲ ಸ್ಥಾನದಲ್ಲಿದೆ. ಇದು ಅತ್ಯಂತ ನೋವಿನ ಸಂಗತಿ. ಹಾಗೆಯೇ ೦–೬ ವರ್ಷದ ವರೆಗಿನ ಮಕ್ಕಳ ಪ್ರಮಾಣ ೨೦೦೧ರಲ್ಲಿ ಒಟ್ಟು ಜನಸಂಖ್ಯೆಯ ೧೫.೯% ದಷ್ಟಿತ್ತು. ೨೦೧೧ರಲ್ಲಿ ಅದು ೧೩.೧%ರಷ್ಟು ಕುಸಿದಿದೆ. ಕುಟುಂಬ ಯೋಜನೆಯ ಫಲವಿದು ಒಳ್ಳೆಯದೇ ಆಯ್ತು ಎಂದುಕೊಳ್ಳುವಂತೆಯೂ ಇಲ್ಲ. ಯಾಕೆಂದರೆ ಇದರ ಹಿಂದೆ ಬಹು ದೊಡ್ಡ ಸಾಂಸ್ಕೃತಿಕ ಹುನ್ನಾರವಿದೆ. ಹೆಣ್ಣುಮಗುವನ್ನು ಭ್ರೂಣದಲ್ಲೇ ಹತ್ಯೆಮಾಡಿ ಗಂಡು ಸಂತತಿಯನ್ನು ಮಾತ್ರ ಹೆಚ್ಚಿಸುವ ಸಾಮಾಜಿಕ ವ್ಯವಸ್ಥೆಯನ್ನು ನಾವು ರೂಪಿಸಿಕೊಂಡಿದ್ದೇವೆ. ಆ ಮೂಲಕ ಅಸಮಾನ ಸಮಾಜ ನಿರ್ಮಾಣವಾಗುವುದರ ಜೊತೆಗೆ ಹೆಣ್ಣುಮಕ್ಕಳ ಮೇಲಿನ ನಾನಾ ರೀತಿಯ ದೌರ್ಜನ್ಯ, ಶೋಷಣೆಗಳಿಗೆ ಹೆಣ್ಣುಮಕ್ಕಳ ಕೊರತೆಯೇ ಮುಖ್ಯ. ಹೀಗಾಗಿ ಈಗ ಪ್ರತಿ ೧೦೦೦೦ ಗಂಡುಮಕ್ಕಳಿಗೆ ೯೧೪ ಹೆಣ್ಣುಮಕ್ಕಳು ಮಾತ್ರ ಉಳಿದಿದ್ದಾರೆ. ಪ್ರತಿವರ್ಷ ೬ ಲಕ್ಷದಷ್ಟು ಭ್ರೂಣದಲ್ಲೇ ನಾಶವಾಗುತ್ತಿರುವ ಹೆಣ್ಣು ಜೀವಿಗಳ ಕುರಿತು ಹೋರಾಟ ಮಾಡುವವರಾರು ?

ಶಿಕ್ಷಣದಿಂದ ವಂಚಿತರಾದ ಕೋಟ್ಯಾಂತರ ಮಕ್ಕಳು ಇಂದಿಗೂ ನಮ್ಮ ದೇಶದಲ್ಲಿದ್ದಾರೆ. ಎರಡೂವರೆ ದಶಕಗಳ ಹಿಂದೆ ದೇಶವನ್ನು ಪ್ರವೇಶಿಸಿದ ಜಾಗತೀಕರಣವೆಂಬ ಬಿರುಗಾಳಿ ಯೋಚಿಸಲೂ ಸಾಧ್ಯವಿಲ್ಲದಂತಹ ರೀತಿಯಲ್ಲಿ ಬಡಮಕ್ಕಳ ಬದುಕನ್ನು ಇನ್ನಷ್ಟು ಛಿದ್ರಗೊಳಿಸುತ್ತಿದೆ. ಮಿತಿಮೀರಿದ ಖಾಸಗೀಕರಣದಿಂದಾಗಿ ಎಲ್ಲೆಲ್ಲೂ ಲಂಗು ಲಗಾಮಿಲ್ಲದೆ ಖಾಸಗೀ ಶಾಲೆಗಳು ಹುಟ್ಟಿಕೊಂಡು ಶಿಕ್ಷಣವನ್ನು ವ್ಯಾಪಾರವನ್ನಾಗಿ ಮಾಡಿಕೊಂಡಿವೆ. ಹೀಗಾಗಿ ಕ್ರಮೇಣ ಸರ್ಕಾರಿ ಶಾಲೆಗಳು ಮುಚ್ಚಲ್ಪಡುತ್ತಿವೆ. ಈಗ ೬೦% ಖಾಸಗಿ ಶಾಲೆಗಳಿದ್ದರೆ, ೪೦% ಮಾತ್ರ ಸರ್ಕಾರಿ ಶಾಲೆಗಳು ಉಳಿದು ಕೊಂಡಿವೆ. ಶಾಲೆಗೆ ಕಳಿಸಲೇ ಒಲ್ಲದ ಪೋಷಕರೂ ಶಿಕ್ಷಣ ಹಕ್ಕು ಕಾಯ್ದೆಯ ಅನ್ವಯ ಉಚಿತ ಶಿಕ್ಷಣದ ಆಸೆಯಿಂದ ಮಕ್ಕಳನ್ನು ಶಾಲೆಗೆ ಕಳಿಸುತ್ತಿದ್ದರು. ಆದರೆ ಈಗ ಸರ್ಕಾರಿ ಶಾಲೆಗಳೂ ಮುಚ್ಚುತ್ತಿರುವುದರಿಂದ ದುಬಾರಿ ಡೊನೇಶನ್ ಮತ್ತು ಫೀಸಿನ ಹಣವನ್ನು ಕಟ್ಟಲಾಗದ ಪೋಷಕರು ಶಾಲೆಗೆ ಕಳಿಸದೆ ಮಕ್ಕಳನ್ನು ದುಡಿಮೆಗೆ ಕಳಿಸುವುದು ಹೆಚ್ಚುತ್ತಿದೆ. ಖಾಸಗಿ ಶಾಲೆಗಳನ್ನು ಮುಚ್ಚುವ, ಸರ್ಕಾರಿ ಶಾಲೆಗಳನ್ನು ಉಳಿಸಿಕೊಳ್ಳುವ ನೈತಿಕ ಸ್ಥೈರ್ಯ ನಮ್ಮ ಸರ್ಕಾರಗಳಿಗೆ ಇಲ್ಲದಿರುವುದು ದೊಡ್ಡ ದುರಂತ. ಸರ್ಕಾರ ಶಿಕ್ಷಣಕ್ಕಾಗಿ ಒಟ್ಟು ರಾಷ್ಟ್ರೀಯ ಉತ್ಪನ್ನ ಜಿಡಿಪಿಯಲ್ಲಿ ನೂರು ರೂಪಾಯಿಯಲ್ಲಿ ೩.೯೦ ಪೈಸೆಗಳನ್ನು ಮಾತ್ರ ಈಗ ಖರ್ಚು ಮಾಡುತ್ತಿದೆ. ಸ್ವಾತಂತ್ರ್ಯಾನಂತರ ರಚಿತವಾದ ಕೊಠಾರಿ ಆಯೋಗ ಅನಕ್ಷರಸ್ಥರ ಸಂಖ್ಯೆ ಅಧಿಕ ಪ್ರಮಾಣದಲ್ಲಿರುವ ನಮ್ಮ ದೇಶದಲ್ಲಿ ಅಕ್ಷರಸ್ಥರ ಸಂಖ್ಯೆ ಹೆಚ್ಚಾಗುವವರೆಗೆ, ಒಂದು ಹಂತದವರೆಗಾದರೂ ಶಿಕ್ಷಣಕ್ಕಾಗಿ ನೂರರಲ್ಲಿ ೧೫ ರೂಪಾಯಿಗಳನ್ನಾದರೂ ಮೀಸಲಿಡಬೇಕು ಎಂದು ಪ್ರತಿಪಾದಿಸಿತ್ತು. ಆದರೆ ಈ ಪ್ರಮಾಣದ ಹಣವನ್ನ ಯಾವತ್ತಿಗೂ ಶಿಕ್ಷಣಕ್ಕಾಗಿ ಮೀಸಲಿಡಲಿಲ್ಲ. ಬದಲಿಗೆ ವರ್ಷದಿಂದ ವರ್ಷಕ್ಕೆ ಮೀಸಲಿನ ಪ್ರಮಾಣ ಕುಸಿಯುತ್ತಾ ಬಂದು ಇಂದಿನ ಹಂತವನ್ನು ತಲುಪಿದೆ. ಮಕ್ಕಳ ಶಿಕ್ಷಣದ ಬಗ್ಗೆಯೇ ಪರಿಣಾಮಕಾರಿಯಾಗಿ ಯೋಚಿಸದ ಸರ್ಕಾರಗಳು ಮಕ್ಕಳ ಕೇಂದ್ರಿತವಾಗಿ ನಡೆದುಕೊಳ್ಳಲು ಹೇಗೆತಾನೆ ಯೋಚಿಸುತ್ತವೆ ?

ಜೊತೆಗೆ, ಹೆಣ್ಣುಮಕ್ಕಳ ಬಾಲ್ಯವಿವಾಹ ಇಂದಿಗೂ ಆಘಾತ ಹುಟ್ಟಿಸುವಷ್ಟು ಪ್ರಮಾಣದಲ್ಲಿ ನಡೆಯುತ್ತಿದೆ. ನಾವಿನ್ನೂ ಯಾವ ಕಾಲದಲ್ಲಿದ್ದೇವೆ ಎಂದು ಆತಂಕವಾಗುತ್ತಿದೆ. ೪೭% ಭಾರತೀಯ ಹೆಣ್ಣುಮಕ್ಕಳ ಮದುವೆ ಕಾನೂನಿಗೆ ವಿರುದ್ಧವಾಗಿ ೧೮ವರ್ಷದ ಒಳಗೆ ನಡೆಯುತ್ತಿವೆ. ಇದರಲ್ಲಿ ೫೬%ನಷ್ಟು ಗ್ರಾಮೀಣ ಪ್ರದೇಶದ ಹೆಣ್ಣುಮಕ್ಕಳು ಮತ್ತು ವಿಶ್ವದಲ್ಲಿ ನಡೆಯುವ ಬಾಲ್ಯವಿವಾಹದಲ್ಲಿ ೪೦% ಭಾರತದಲ್ಲಿಯೇ ನಡೆಯುತ್ತಿವೆಯೆಂದರೆ ಬಾಲ್ಯವಿವಾಹಕ್ಕೆ ಒಳಗಾಗುವ ಹೆಣ್ಣುಮಗು ಹೇಗೆ ಎಲ್ಲ ರೀತಿಯಲ್ಲೂ ತನ್ನ ಹಕ್ಕಿನಿಂದ ವಂಚಿತಳಾಗಿ ದೌರ್ಜನ್ಯಕ್ಕೆ ಈಡಾಗುತ್ತಾಳೆ ಎಂದು ಗೊತ್ತಿರುವ ನಾವು ತಳಮಳಿಸುತ್ತಲೇ ಇಲ್ಲ. ಆ ಕುರಿತು ಯೋಚಿಸುತ್ತಲೂ ಇಲ್ಲ.

ಇದರ ಜೊತೆಗೆ ನಮ್ಮ ನ್ಯಾಯಸ್ಥಾನಗಳು ಮಕ್ಕಳ ಪರವಾಗಿಲ್ಲ ಎನ್ನುವುದಕ್ಕೆ ಉದಾಹರಣೆಯಾಗಿ ಹೋದ ವರ್ಷ ಪ್ರಾಥಮಿಕ ಶಿಕ್ಷಣದ ಕಲಿಕಾ ಮಾಧ್ಯಮವನ್ನು ನಿರ್ಧರಿಸುವ ಹಕ್ಕನ್ನು ಸರ್ವೋಚ್ಚ ನ್ಯಾಯಾಲಯ ಘೋಷಣೆ ಮಾಡಿದ್ದು, ಅದರ ಆಯ್ಕೆ ಪೋಷಕರದ್ದು ಎಂದು ತೀರ್ಪು ನೀಡಿದೆ. ಇದು ದೇಶದ ಎಲ್ಲ ಮಾತೃಭಾಷೆಗಳಿಗೆ ಮರಣ ಶಾಸನವಾಗುವುದರ ಜೊತೆಗೆ ಮಗುವಿನ ಸರ್ವಾಂಗೀಣ ಅಭಿವೃದ್ಧಿಗೆ ಮಾರಕವಾಗಿದೆ. ತನ್ನ ಮಾತೃಭಾಷೆಯಲ್ಲಿ ಕಲಿಯುವುದು ಮಗುವಿನ ಹಕ್ಕು ಮಾತ್ರವಲ್ಲ, ಅದರಿಂದ ಮಗುವಿನ ಸಂವಹನ ಶಕ್ತಿ, ಭಾವಕೋಶ, ಅರ್ಥೈಸುವಿಕೆ ಹೆಚ್ಚುತ್ತದೆ ಎಂದು ಜಗತ್ತಿನಾದ್ಯಂತ ಒಪ್ಪಿ ಹೆಚ್ಚಿನ ದೇಶಗಳು ತಮ್ಮ ತಮ್ಮ ಮಾತೃಭಾಷೆಯಲ್ಲಿ ಶಿಕ್ಷಣ ಕೊಡುತ್ತಿರುವಾಗ, ಮಾರುಕಟ್ಟೆ ಭಾಷೆಯಾದ ಇಂಗ್ಲಿಷ್‌ಅನ್ನು ಬೆನ್ನು ಹತ್ತಿರುವ ನಮ್ಮ ಪೋಷಕರ ಜೊತೆಗೆ ಮಗುವನ್ನು ಮಾತೃಭಾಷೆಯಿಂದ ವಂಚಿಸಲು ನ್ಯಾಯಸ್ಥಾನಗಳೇ ಕೆಂಪು ಹಾಸನ್ನು ಹಾಸಿಕೊಟ್ಟಿವೆ ಎಂದರೆ ತಪ್ಪಾಗಲಾರದು. ನ್ಯಾಯಸ್ಥಾನಗಳನ್ನು ಕೂಡ ಜಾಗತೀಕರಣ, ಉದಾರೀಕರಣದ ನೀತಿಗಳು ಮನಃಪರಿವರ್ತನೆ ಮಾಡಿವೆ ಎಂದರೆ ನಾವು ಇನ್ನಾರನ್ನ ದೂರುವುದು ?

ಇನ್ನೊಂದು ಆತಂಕಕಾರಿಯಾದ ಅಂಶವೆಂದರೆ ವಿಶ್ವಸಂಸ್ಥೆಯ ಮಾನವ ಹಕ್ಕುಗಳ 'ವಾಚ್'ನ ವರದಿಯಂತೆ ಇದುವರೆಗೆ ಭಾರತದ ಸುಮಾರು ೧೫೦ ಲಕ್ಷಕ್ಕೂ ಹೆಚ್ಚು ಹೆಣ್ಣುಮಕ್ಕಳು ದೇಶವಿದೇಶಗಳಲ್ಲಿ ವೇಶ್ಯಾವಾಟಿಕೆಗೆ ದೂಡಲ್ಪಟ್ಟಿದ್ದಾರೆ. ಇದರಲ್ಲಿ ೪೦%ಕ್ಕಿಂತ ಹೆಚ್ಚಿನವರು ಅಪ್ರಾಪ್ತ ವಯಸ್ಸಿನ ಹೆಣ್ಣುಮಕ್ಕಳು. ಊರಿನ ಗಲ್ಲಿಗಲ್ಲಿಗಳಲ್ಲಿ ಬಿಕರಿಯಾಗುತ್ತಿರುವ ಈ ಮಕ್ಕಳನ್ನು ರಕ್ಷಿಸುವವರಾರು ? ಯಾವ ಕಾನೂನೂ, ನಿಯಮಗಳೂ ಮಕ್ಕಳ ಕನಿಷ್ಠ ಹಕ್ಕುಗಳನ್ನೂ ರಕ್ಷಿಸುತ್ತಿಲ್ಲವೆಂಬುದು ವಿಪರ್ಯಾಸ. ಹಾಗೆಯೇ ಲೈಂಗಿಕ ವೃತ್ತಿಗೆ ಅನಿವಾರ್ಯವಾಗಿ ಬಿದ್ದವರ ಮಕ್ಕಳಿಗೆ ಪುನರ್ವಸತಿ ಕಲ್ಪಿಸುವ ಕೆಲಸವೂ ನಮ್ಮಲ್ಲಿ ಪರಿಣಾಮಕಾರಿಯಾಗದೇ ಇರುವುದರಿಂದ ಆ ಮಕ್ಕಳು ದಾರಿತಪ್ಪುವ ಸಾಧ್ಯತೆಯೇ ಹೆಚ್ಚು. ಈ ಪ್ರಮಾಣದ ನಿರ್ಲಕ್ಷ್ಯವನ್ನು ನಮ್ಮ ದೇಶ ಮಕ್ಕಳ ಬಗ್ಗೆ ಹೊಂದಿದೆ ಎಂದರೆ ಅವರ ಬದುಕಿನ ಬಗ್ಗೆ ಆಶಾವಾದವನ್ನು ಇನ್ನೆಲ್ಲಿತಾನೆ ಇಟ್ಟುಕೊಳ್ಳಲು ಸಾಧ್ಯ ?

ವಿಶ್ವಸಂಸ್ಥೆಯ ಮಕ್ಕಳ ಹಕ್ಕುಗಳ ಸಮಿತಿ ೨೦೧೪ರಲ್ಲಿ, ಮೊನ್ನೆಯಷ್ಟೇ "ಭಾರತದ ಕಾನೂನು ಅನುಷ್ಠಾನ ಸಂಸ್ಥೆಗಳು ಹಾಗೂ ನ್ಯಾಯಾಂಗ ಇಲಾಖೆಗಳು ಭಾರತ ದೇಶದಲ್ಲಿ ಹೆಣ್ಣುಮಕ್ಕಳ ಮೇಲೆ ನಡೆಯುತ್ತಿರುವ ಲೈಂಗಿಕ ದೌರ್ಜನ್ಯಗಳನ್ನು ತಡೆಗಟ್ಟುವಲ್ಲಿ ತಮ್ಮ ಜವಾಬ್ದಾರಿಯಿಂದ ವಿಫಲವಾಗಿವೆ. ದೇಶಾದ್ಯಂತ ಮಕ್ಕಳ ಮೇಲೆ ನಡೆಯುತ್ತಿರುವ ವ್ಯಾಪಕವಾದ ಹಿಂಸೆ, ದೌರ್ಜನ್ಯ, ಲೈಂಗಿಕ ಕಿರುಕುಳ ಮತ್ತು ಮಕ್ಕಳ ನಿರ್ಲಕ್ಷ್ಯ ಆಘಾತ ಹುಟ್ಟಿಸುವಂತಿವೆ" ಎಂದು ತನ್ನ ವರದಿಯಲ್ಲಿ ಭಾರತ ಸರ್ಕಾರಕ್ಕೆ ಎಚ್ಚರಿಕೆ ನೀಡಿದೆ. ಆದರೆ ನಾವಿನ್ನೂ ಎಚ್ಚೆತ್ತುಕೊಂಡಿಲ್ಲ. ನಮ್ಮ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಈ ಕುರಿತು ಯಾವುದೇ ಪರಿಣಾಮಕಾರಿಯಾದ ಯೋಜನೆಯನ್ನೂ ಜಾರಿಗೊಳಿಸಿಲ್ಲ. ಅತ್ಯಾಚಾರಕ್ಕೆ ಒಳಗಾದ ಅಪ್ರಾಪ್ತ ಹೆಣ್ಣು ಮಕ್ಕಳಿಗೆ ವರ್ಷಗಟ್ಟಲೆಯಾದರೂ ಇಲ್ಲಿ ಪರಿಹಾರಧನ ವಿತರಣೆಯಾಗುವುದಿಲ್ಲ. ಅವರು ತಮ್ಮ ಬದುಕನ್ನು, ವ್ಯಕ್ತಿತ್ವವನ್ನು ಪುನರ್ ರೂಪಿಸಿಕೊಳ್ಳಲು ಸರ್ಕಾರ ಮೂಲಮಟ್ಟದಲ್ಲಿ ಯಾವ ಸಹಾಯಹಸ್ತವನ್ನೂ ಚಾಚುತ್ತಿಲ್ಲ. ಎಷ್ಟು ಅಮಾನವೀಯವಾಗಿ ನಾವು ನಮ್ಮ ಮಕ್ಕಳನ್ನು ಕಾಣುತ್ತಿದ್ದೇವೆ !

ಮಕ್ಕಳ ಮೇಲೆ ಇನ್ನಷ್ಟು ದೌರ್ಜನ್ಯಕ್ಕೆ ರಹದಾರಿ ರೂಪಿಸಲು ಸದ್ಯ ನಮ್ಮ ಕೇಂದ್ರ ಸರ್ಕಾರ ಮಕ್ಕಳಿಗೆ ವಿರುದ್ಧವಾಗಿರುವ ಎರಡು ಮಸೂದೆಗಳನ್ನು ಅಂಗೀಕರಿಸಲು ಪ್ರಯತ್ನಿಸುತ್ತಿದೆ. ದೇಶದಲ್ಲಿ ಬಾಲಾಪರಾಧಗಳ ಸಂಖ್ಯೆ ಹೆಚ್ಚುತ್ತಿದೆ ಎಂದು ಬಾಲಾರೋಪಿಯ ವಯಸ್ಸನ್ನು ೧೮ರಿಂದ ೧೬ಕ್ಕೆ ಇಳಿಸಲು ಯೋಚಿಸುತ್ತಿದೆ. ಆದರೆ ನಮ್ಮ ಬಾಲಾಪರಾಧಿಗಳು ಯಾವ ಹಿನ್ನೆಲೆಯಿಂದ ಬಂದಿದ್ದಾರೆ ? ಯಾವ ರೀತಿಯ ಅಪರಾಧಗಳಲ್ಲಿ ಹೆಚ್ಚು ತೊಡಗಿಸಿಕೊಳ್ಳುತ್ತಿದ್ದಾರೆ ? ಇದಕ್ಕೆ ಪರಿಸರ, ದೃಶ್ಯ ಮಾಧ್ಯಮದ ಪ್ರಭಾವ, ಅನಕ್ಷರತೆ, ಸಾಮಾಜಿಕ-ಆರ್ಥಿಕ ಸ್ಥಿತಿಗತಿ, ಪೋಷಕರ ನಿರ್ಲಕ್ಷ್ಯ ಎಷ್ಟರಮಟ್ಟಿಗೆ ಕಾರಣ ಎನ್ನುವ ವಿಸ್ತೃತ ಅಧ್ಯಯನ ಆಗಿಯೇ ಇಲ್ಲ. ಅಧ್ಯಯನ ಆದರೆ ಮಾತ್ರ ಅದಕ್ಕೆ ನಮ್ಮ ಸರ್ಕಾರಗಳ ವೈಫಲ್ಯ, ಸಾಮಾಜಿಕ-ಆರ್ಥಿಕ ತಾರತಮ್ಯದಿಂದ ಆಗುತ್ತಿರುವ ಮನೋವಿಕಾರ, ವಿಕೃತ ಸಂದೇಶ ನೀಡುತ್ತಿರುವ ದೃಶ್ಯಮಾಧ್ಯಮದ ಪ್ರಭಾವವೆಷ್ಟು ? ಏನು ? ಎಂದು ತಿಳಿಯುತ್ತದೆ. ಇಡೀ ವಿಶ್ವದಲ್ಲೇ ವಿಶ್ವಸಂಸ್ಥೆಯೊಂದಿಗೆ ಮಕ್ಕಳ ಹಕ್ಕುಗಳ ಕುರಿತು ಒಪ್ಪಂದ ಮಾಡಿಕೊಂಡ ಯಾವ ದೇಶವೂ ಬಾಲಾರೋಪಿಗಳ ವಯಸ್ಸನ್ನು ೧೮ರಿಂದ ೧೬ಕ್ಕೆ ಇಳಿಸಿಲ್ಲ. ಬದಲಿಗೆ ಮಕ್ಕಳು ಬಾಲ್ಯದಲ್ಲಿ ಅಪರಾಧಗಳಲ್ಲಿ ತೊಡಗಿಕೊಳ್ಳುವುದಕ್ಕೆ ಕಾರಣವೇನು ಎಂದು ಅಧ್ಯಯನ ಮಾಡಿ ತಮ್ಮನ್ನು ತಾವು ಸರಿ ಮಾಡಿಕೊಳ್ಳುವಂತಹ ಪ್ರಯತ್ನವನ್ನು ಮಾಡುತ್ತಿವೆ. ನಮ್ಮ ಸರ್ಕಾರ ಮತ್ತು ಸಮಾಜ ಮಾತ್ರ ಮಗುವಿನ ಸರ್ವತೋಮುಖ ಅಭಿವೃದ್ಧಿಗೆ ಬೇಕಾದ ಪೂರಕ ವಾತಾವರಣವನ್ನು ನಿರ್ಮಿಸಲು ಸೋತು ಈಗ ಮಕ್ಕಳನ್ನೇ ಅದರ ಹೊಣೆಗಾರರನ್ನಾಗಿಯೂ ಮಾಡುತ್ತಿರುವುದು ಎಷ್ಟು ಸರಿ, ಎಂಬುದನ್ನು ನಾವೆಲ್ಲರೂ ಯೋಚಿಸಬೇಕಿದೆ.

ಹಾಗೆಯೇ ಇತ್ತೀಚೆಗೆ ಕೇಂದ್ರ ಸಚಿವ ಸಂಪುಟ ಅನುಮೋದಿಸಿರುವ ಬಾಲ ಕಾರ್ಮಿಕ ನಿಷೇಧ ಹಾಗೂ ನಿಯಂತ್ರಣ ತಿದ್ದುಪಡಿ ಮಸೂದೆ ೨೦೧೨ಕ್ಕೆ ಮತ್ತಷ್ಟು ತಿದ್ದುಪಡಿ ತರುವ ಮೂಲಕ ಬಡ ಚಿಕ್ಕಮಕ್ಕಳನ್ನು ಶಾಶ್ವತ ದುಡಿಮೆಗೆ ದೂಡಲು ತಯಾರಿ ನಡೆಸಿದೆ. ಈಗಾಗಲೇ ಭಾರತ ವಿಶ್ವದಲ್ಲಿಯೇ ಅತಿ ಹೆಚ್ಚು ಬಾಲಕಾರ್ಮಿಕರನ್ನು ಹೊಂದಿರುವ ದೇಶಗಳಲ್ಲಿ ಪ್ರಮುಖ ದೇಶವೆಂಬ ಕುಖ್ಯಾತಿಗೊಳಗಾಗಿದೆ. ರಾಷ್ಟ್ರೀಯ ಮಕ್ಕಳ ಹಕ್ಕುಗಳ ಆಯೋಗದ ಪ್ರಕಾರ ದೇಶದಲ್ಲಿ ಸದ್ಯ ಒಟ್ಟು ೮.೨೨ ದಶಲಕ್ಷ ಬಾಲಕಾರ್ಮಿಕರಿದ್ದಾರೆ. ಈ ಸಮೀಕ್ಷೆಯಲ್ಲಿ ದಾಖಲಾಗದ ಲಕ್ಷಾಂತರ ಮಕ್ಕಳು ಇನ್ನೂ ಬೀದಿಯಲ್ಲಿರಬಹುದು. ಈ ಪ್ರಮಾಣದ ಬಾಲಕಾರ್ಮಿಕತೆಯಿಂದ ಮಕ್ಕಳನ್ನು ತಪ್ಪಿಸಲಿಕ್ಕೆ ಸರ್ಕಾರಕ್ಕೆ ಇನ್ನೂ ಆಗಿಲ್ಲ ! ಅದರ ಜೊತೆಗೆ ಈಗ ೧೪ ವರ್ಷದೊಳಗಿನ ಮಕ್ಕಳು ಶಾಲೆ ಬಿಟ್ಟನಂತರ ಮತ್ತು ರಜೆಯಲ್ಲಿ ಶ್ರಮದಾಯಕವಲ್ಲದ, ಕಠಿಣವಲ್ಲದ ಮತ್ತು ಕೆಲವು ವಂಶಪಾರಂಪರ್ಯ ವೃತ್ತಿಗಳಲ್ಲಿ ತೊಡಗಿಕೊಳ್ಳಬಹುದು ಎಂಬ ತಿದ್ದುಪಡಿ ತರಲು ಹೊರಟಿದೆ. ಇದು ಮತ್ತಷ್ಟು ಬಾಲ ದುಡಿಮೆಗೆ ಪ್ರೋತ್ಸಾಹಿಸುವಂತಿದೆ. ಜೊತೆಗೆ ವಂಶಪಾರಂಪರ್ಯದ ವೃತ್ತಿಯಲ್ಲಿ ಬಾಲ್ಯದಲ್ಲೇ ತೊಡಗಿಕೊಳ್ಳುವ ಮೂಲಕ ಭಾರತದ ದರಿದ್ರ ಜಾತಿ ವ್ಯವಸ್ಥೆಯನ್ನೂ ಮತ್ತು ವರ್ಗ ತಾರತಮ್ಯವನ್ನು ಮುಂದುವರಿಸುವ ಹುನ್ನಾರಗಳು ಇದರ ಹಿಂದಿರುವುದು ಗೋಚರಿಸುತ್ತಿದೆ.

ಮಾರುಕಟ್ಟೆ ಕೇಂದ್ರಿತ ಜಾಗತೀಕರಣ ಇಂದು ಹೆಚ್ಚು ಕೆಲಸಗಳನ್ನು ಸೃಷ್ಟಿಸುತ್ತಿದೆ. ಅದಕ್ಕೆ ಕಡಿಮೆ ವೇತನಕ್ಕೆ ಹೆಚ್ಚು ಕೆಲಸ ಮಾಡುವ, ಸಂಘಟಿತರಾಗದ, ಹಕ್ಕುಗಳ ಬಗ್ಗೆ ಪ್ರಸ್ತಾಪಿಸದ ಮಕ್ಕಳನ್ನು ಬಲಿಪಶುಗಳಾಗಿಸುತ್ತಿದೆ. ನಾವಿಲ್ಲಿ ನೆನಪಿಟ್ಟುಕೊಳ್ಳಬೇಕಿರುವ ಅಂಶವೆಂದರೆ ಕಡಿಮೆ ಆದಾಯದ ಬಡಕುಟುಂಬಗಳು ಮಾತ್ರ ಮಕ್ಕಳನ್ನು ದುಡಿಯಲು ಕಳುಹಿಸುತ್ತವೆ. ಆ ಮೂಲಕ ಬಡ ಮಕ್ಕಳು ವಿದ್ಯಾಭ್ಯಾಸದಿಂದಲೂ ಕ್ರಮೇಣ ದೂರ ಆಗುವ ಪ್ರಮಾಣ ಹೆಚ್ಚಿದೆ ಎಂಬುದು ಮಕ್ಕಳ ಕೆಲಸಕ್ಕೂ ಶಾಲೆಯಿಂದ ಹೊರಗುಳಿಯುವ ಮಕ್ಕಳ ಪ್ರಮಾಣದ ಹೆಚ್ಚಳಕ್ಕೂ ಅವಿನಾಭಾವ ಸಂಬಂಧವಿದೆಯೆಂಬುದು ಸಮೀಕ್ಷೆಗಳಿಂದ ತಿಳಿಯುತ್ತಿದೆ.

ಹೀಗೇ... ಮಕ್ಕಳ ಸ್ನೇಹಿ ಸಮಾಜ ನಿರ್ಮಾಣದ ಯಾವ ಶುಭಸೂಚನೆಯೂ ನಮ್ಮ ದೇಶದಲ್ಲಿ ಇಲ್ಲವೆಂದು ದೃಢೀಕರಿಸುವ ಹಲವು ಉದಾಹರಣೆಗಳನ್ನು ಕೊಡುತ್ತಾ ಹೋಗಬಹುದು. ಇಡೀ ದೇಶ ಇಂದು ಮಕ್ಕಳ ಐಕ್ಯೂ ಎಂದರೆ ಬುದ್ಧಿಕೋಶ ಹೆಚ್ಚಿಸಲು ಹಲವು ದಾರಿಗಳನ್ನು ಹುಡುಕಿಕೊಂಡಿದೆ. ಐಕ್ಯೂಅನ್ನು ಹಣವಾಗಿ ಬದಲಾಯಿಸಲು ಸಾಧ್ಯವಿದೆ. ಆದರೆ ಇಂದು ನಮಗೆ ಬೇಕಿರುವುದು ಈಕ್ಯೂ. ಎಮೋಷನಲ್ ಕ್ವೋಷಂಟ್, ಎಂದರೆ ಭಾವಕೋಶದ ವಿಸ್ತರಣೆ. ಈ ವಿಸ್ತರಣೆಗೆ ಪೂರಕವಾಗಿರುವಂಥದ್ದು ಸಾಹಿತ್ಯ... ನಮ್ಮ ಭಾವಕೋಶದ ವಿಸ್ತರಣೆಯಿಂದ ಮಾತ್ರ ಮನುಷ್ಯ ಸಂಬಂಧಗಳು ಅರ್ಥವಾಗುತ್ತವೆ, ಮಾನವೀಯತೆ, ಅಂತಃಕರಣಗಳು ನಮ್ಮೊಳಗೆ ಕುಡಿಯೊಡೆಯಲು ಸಾಧ್ಯವಾಗುತ್ತದೆ. ಮನುಷ್ಯನಲ್ಲಿ ಬೌದ್ಧಿಕತೆ, ವಿಚಾರಶೀಲತೆ ಹೆಚ್ಚಿದಷ್ಟೂ ಈ ಗುಣಗಳೂ ಹೆಚ್ಚಾದರೆ ಮಾತ್ರ ನಾವೊಂದು ಸಭ್ಯ, ನಾಗರಿಕ ಸಮಾಜವನ್ನು ಮಕ್ಕಳ ಹಂತದಿಂದಲೇ ರೂಪಿಸಿ ಕಟ್ಟುವುದಕ್ಕೆ ಸಾಧ್ಯವಾಗುತ್ತದೆ. ಇಲ್ಲದಿದ್ದರೆ ಈಗಾಗಲೇ ಹಿಂಸೆ, ಕ್ರೌರ್ಯ, ದೌರ್ಜನ್ಯ, ದ್ವೇಷ, ಸ್ವಾರ್ಥಗಳಿಂದ ಕೊಳೆತು ನಾರುತ್ತಿರುವ ನಮ್ಮ ಸಮಾಜ ಇನ್ನಷ್ಟು ಹೊಲಸಾಗುತ್ತಾ ಹೋಗುತ್ತದೆ. ಮನುಷ್ಯನೊಳಗಿನ ಮನುಷ್ಯತ್ವದ ಕಣ್ಣು ಅರಳಿಸುವಂತಹ ಕೆಲಸ ಸಾಹಿತಿಯಾದವನಿಂದ ಆಗಬೇಕು. ಅದಿಲ್ಲದೇ ಅದು ಕೇವಲ ತುಟಿ ಮರುಕವಾದರೆ ಅಥವಾ ಅಂತಹ ಘೋರಗಳೆಡೆಯಿಂದ ಸಭ್ಯ ಸಮಾಜದೆಡೆಗೆ ಮನುಕುಲವನ್ನು ಕರೆದುಕೊಂಡು ಹೋಗುವ ಪ್ರಯತ್ನವನ್ನು ಸಾಹಿತ್ಯ ಮಾಡದೇ ಹೋದರೆ, ಸಾಹಿತ್ಯದಿಂದ ಪ್ರಯೋಜನವಾದರೂ ಏನು ?

ಸಾಹಿತ್ಯದ ಮೂಲಕ ಇಂತಹ ವಿಷಯಗಳನ್ನು ಕುರಿತು ಮಾತನಾಡುವಾಗ ಮತ್ತು ಬರೆಯುವಾಗಲೆಲ್ಲಾ ಬುದ್ಧ ಮತ್ತೆ ಮತ್ತೆ ನೆನಪಾಗುತ್ತಾನೆ. ಈ ಪ್ರಪಂಚದಲ್ಲಿ ಬುದ್ಧನಿಗಿಂತ ಮೊದಲು ಜನರಿಗೆ ಕರುಣಾರಸದ ಅರಿವಿತ್ತು. ಕರುಣಾರಸವೆಂದರೆ ಇತರರ ನೋವನ್ನು ಹೊರಗಿನ ವ್ಯಕ್ತಿಯಾಗಿ ನೋಡಿ ತಿಳಿಯುವ ಮನಃಸ್ಥಿತಿ. ಆದರೆ ಬುದ್ಧ ಅದೇ ಮೊದಲ ಬಾರಿಗೆ ಜಗತ್ತಿಗೆ ಕಾರುಣ್ಯವನ್ನು ಬೋಧಿಸಿದ. ಕಾರುಣ್ಯವೆಂದರೆ ತಾನೇ ಅದಾಗಿ ಆ ಸಂಕಟದ ನೋವಿನ ಜಾಗದಲ್ಲಿ ನಿಂತು, ಪರಕಾಯ ಪ್ರವೇಶ ಮಾಡಿ ತಾನೇ ಅದನ್ನು ಅನುಭವಿಸುವುದು. ಅದು ಸಾಧ್ಯ ಮಾಡಿಕೊಳ್ಳಲು ಇರುವ ಒಂದು ಪ್ರಬಲ ಅಸ್ತ್ರ ಸಾಹಿತ್ಯ. ಆದ್ದರಿಂದ ಬುದ್ಧ, ಸಾಹಿತ್ಯಕ್ಕೂ ಮೊದಲ ಗುರು ! ನಿಜವಾದ ಬರಹಗಾರನಿಗೆ ಕಾರುಣ್ಯದ ಕಣ್ಣು ಇರುತ್ತದೆ. ಅವನು ಅದರ ಮೂಲಕ ಜಗತ್ತಿನ ನೋವನ್ನು ತನ್ನ ನೋವು ಎಂದುಕೊಂಡು ಕಾಣುತ್ತಾ ಜನರಿಗೆ ಅದರ ಅರಿವನ್ನು ಮೂಡಿಸುತ್ತ, ಆರ್ದ್ರಗೊಳಿಸುತ್ತಾ ಹೋಗುತ್ತಾನೆ.

ಹೀಗೆ ನಿರ್ಲಕ್ಷ್ಯಕ್ಕೆ, ದೌರ್ಜನ್ಯಕ್ಕೆ ಈಡಾಗುತ್ತಿರುವ ಮಕ್ಕಳ ಕುರಿತು ಸಮಾಜದ ಕಣ್ಣು ತೆರೆಸುವಂತಹ ಕೆಲಸ ಬರಹಗಳಿಂದಲೂ ನಿರಂತರವಾಗಿ ಆದರೆ ಮಾತ್ರ ಮಕ್ಕಳ ಸ್ನೇಹಿ ಸಮಾಜ ನಿರ್ಮಾಣದ ಕಡೆಗೆ ನಾವು ಒಂದಿಷ್ಟಾದರೂ ಪ್ರಯತ್ನವನ್ನು ಮಾಡಿದಂತಾಗುತ್ತದೆ.

**ರೂಪ ಹಾಸನ**
'ಪ್ರೇರಣ', ಸೇಂಟ್ ಜೋಸೆಫ್ ಶಾಲೆ ರಸ್ತೆ, ಉತ್ತರ ಬಡಾವಣೆ, ಹಾಸನ – ೫೭೩ ೨೦೧



# ಮುಂಜಾವಿನ ವಿಶೇಷಗಳು

**ಈ** ತಿಂಗಳಲ್ಲಿ ಬೆಳಿಗ್ಗೆ ಬೇಗ ಏಳುವವರಿಗೆ ಅನೇಕ ವಿಶೇಷ ನೋಟಗಳಿವೆ. ಗುರು, ಮಂಗಳ, ಶುಕ್ರ, ಬುಧ ಇವೆಲ್ಲವೂ ಕಳೆದ ತಿಂಗಳು ಒಟ್ಟುಗೂಡಿ ಬೇರೆಯಾದ ಸಮಾಗಮಗಳಿದ್ದವು. ಈ ತಿಂಗಳಲ್ಲಿ ಬುಧದ ಹೊರತಾಗಿ ಉಳಿದ ಮೂರೂ ಇವೆ. ೩ರಂದು ಶುಕ್ರ ಮತ್ತು ಮಂಗಳ ಸೇರುತ್ತವೆ. ಅವೆರಡರ ನಡುವಿನ ಕೋನ ಕೇವಲ ಅರ್ಧ ಡಿಗ್ರಿ ಅಂದರೆ ಚಂದ್ರನನ್ನು ಇರಿಸಬಹುದಾದಷ್ಟು ಎಂದರ್ಥ. ಮೊದಲ ವಾರದ ಉದ್ದಕ್ಕೂ ಗಮನಿಸುತ್ತಾ ಬಂದರೆ ಅವುಗಳ ಚಲನೆ ಸ್ಪಷ್ಟವಾಗಿ ತಿಳಿಯುತ್ತದೆ. ಮಂಗಳ ದಿನೇ ದಿನೇ ಮೇಲೇರಿದ ಹಾಗೆ, ಶುಕ್ರ ದಿಗಂತದ ಕಡೆಗೆ ಸರಿಯುವಂತೆ ಕಾಣುತ್ತದೆ. ೭ರಂದು ಗುರು, ಮಂಗಳ ಮತ್ತು ಶುಕ್ರ ಗುಂಪಿಗೆ ಸೇರುತ್ತದೆ. ೮ರಂದು ಚಂದ್ರ, ಶುಕ್ರ, ಮಂಗಳ ಮತ್ತು ಗುರು ಇವು ಸಾಲುದೀಪದ ಬತ್ತಿಗಳ ಗಾಳೀಪಟದ ಹಾಗೆ ಕಾಣುವುವು.

ಮುಂಜಾವಿನ ವಿಶೇಷ ಇನ್ನೊಂದಿದೆ. ಅದೇ ಲಿಯೋನಿಡ್ ಉಲ್ಕಾವೃಷ್ಟಿ. ೧೭–೧೮ರಂದು ಗರಿಷ್ಠ ಮುಟ್ಟಲಿರುವ ಈ ವೃಷ್ಟಿಯಲ್ಲಿ ಗಂಟೆಗೆ ೧೫–೨೦ ಉಲ್ಕೆಗಳು ಕಾಣುತ್ತವೆ. ಎಲ್ಲವೂ ಸಿಂಹ ರಾಶಿಯಿಂದ ಹೊರಟಂತೆ ಕಾಣುವುದರಿಂದ ಈ ಹೆಸರಿದೆ. ಟೆಂಪಲ್–ಟಟಲ್ ಎಂಬ ಧೂಮಕೇತು ತನ್ನ ಕಕ್ಷೆಯಲ್ಲಿ ಬಿಟ್ಟುಹೋದ ಧೂಳಿನ ತುಣುಕುಗಳು ಇವು. ಈ ತಾರೀಖುಗಳ ಮುಂಜಾವಿನಲ್ಲಿ ಚಂದ್ರನ ಬೆಳಕು ಇರುವುದಿಲ್ಲ. ಆದ್ದರಿಂದ ಉಲ್ಕೆಗಳನ್ನು ನೋಡುವ ಸಾಧ್ಯತೆ ಹೆಚ್ಚು.

ಸಂಜೆಯ ಆಕಾಶದಲ್ಲಿ ಕಾಣುತ್ತಿದ್ದ ಏಕೈಕ ಗ್ರಹ ಶನಿ ತಿಂಗಳ ಮೊದಲೆರಡು ಮೂರು ದಿನಗಳಂದು ದಿಗಂತದ ಅಂಚಿನಲ್ಲಿ ಕಾಣುತ್ತದೆ. ಆ ಮುಂದೆ ಅದು ಕಾಣುವುದಿಲ್ಲ. ಅಮಾವಾಸ್ಯೆಯ ಮರುದಿನ ಸಂಜೆ ಚಂದ್ರನ ಪಕ್ಕದಲ್ಲೇ ಇರುವುದಾದರೂ ಸಂಜೆಗೆಂಪಿನಲ್ಲಿ ಗುರುತಿಸಲು ಸಾಧ್ಯವಾಗುವುದಿಲ್ಲ. ೩೦ರಂದು ಸೂರ್ಯನೊಡನೆಯೇ ಉದಯಿಸಿ, ಅಸ್ತಮಿಸುವ ಸಂದರ್ಭ – ಯುತಿ.

ಹೀಗೆ ಹಾದುಹೋಗುವ ಚಂದ್ರ ೭ರಂದು ಶುಕ್ರಗ್ರಹವನ್ನು ಮರೆಮಾಡುವ ಆಚ್ಛಾದನೆ ಇದೆ; ಆದರೆ ಅದು ನಮಗೆ, ಭಾರತಕ್ಕೆ ಕಾಣುವುದಿಲ್ಲ. ಚಂದ್ರ ಈ ತಿಂಗಳಲ್ಲಿ ಶುಕ್ರಗ್ರಹವನ್ನು ಮಾತ್ರವಲ್ಲದೆ ರೋಹಿಣಿ ನಕ್ಷತ್ರವನ್ನೂ ಆಚ್ಛಾದಿಸುತ್ತದೆ. ಈ ಅವಕಾಶವೂ ನಮಗೆ ತಪ್ಪಿಹೋಗಲಿದೆ. ಆ ದಿನಗಳಲ್ಲಿ ಚಂದ್ರ ಆಯಾ ಕಾಯಗಳ ಪಕ್ಕದಲ್ಲಿರುವುದು ಮಾತ್ರ ಕಾಣುತ್ತದೆ.



೩ರ ಮುಂಜಾವು
ಶುಕ್ರ, ಮಂಗಳ, ಗುರು

ಡಿಸೆಂಬರ್ ೫ರಂದು ಮಂಗಳಗ್ರಹವನ್ನು ಮರೆಮಾಡುವ ನೋಟ ಸಿಗುವ ಸಾಧ್ಯತೆ ಇದೆ.

ಸಂಜೆಯ ಆಕಾಶದಲ್ಲಿ ಕಾಣುವ ನಕ್ಷತ್ರಪುಂಜಗಳಲ್ಲಿ ಪಶ್ಚಿಮದಂಚಿನ ವೃಶ್ಚಿಕ, ಧನು ಇವುಗಳನ್ನು ಮತ್ತು (ಆಕಾಶ ಶುಭ್ರವಾಗಿದ್ದರೆ) ಅವುಗಳ ಮೂಲಕ ಹಾದುಹೋಗುವ ಆಕಾಶಗಂಗೆಯ ಮೋಡದಂತಹ ರಚನೆಯನ್ನೂ ಕಾಣಬಹುದು. ಮಕರ, ಕುಂಭ – ಇವು ಕ್ಷೀಣವಾದ ಪುಂಜಗಳು. ಮೀನ ಸಹ ಕ್ಷೀಣವಾದರೂ ನಕುಲ (ಪೆಗಸಸ್) ಚೌಕವನ್ನು ಮೊದಲು ಗುರುತಿಸಿ ಅದರ ಆಚೀಚೆ ಎರಡು ಮೀನುಗಳನ್ನು ಗುರುತಿಸಬಹುದು. ಪೂರ್ವದಂಚಿನಲ್ಲಿ ಮೇಷ, ವೃಷಭ ಕಾಣುವುದು. ತಿಂಗಳ ಮಧ್ಯಭಾಗದಲ್ಲಿ ವೃಷಭದ ಪೂರ್ಣ ರೂಪ ಕಾಣುವುದು; ಪಶ್ಚಿಮದ ಅಂಚಿನಲ್ಲಿ ವೃಶ್ಚಿಕ ಮಾಯ ವಾಗುತ್ತದೆ. ಉತ್ತರದಲ್ಲಿ ರಾಜಹಂಸ, ವೀಣಾ ಹಾಗೂ ಗರುಡ ಪುಂಜಗಳು ದಕ್ಷಿಣದಲ್ಲಿ ಬಕ ಪುಂಜದ ಎರಡು ಪ್ರಕಾಶಮಾನ ನಕ್ಷತ್ರಗಳು ಕಾಣುತ್ತವೆ. ಹುಣ್ಣಿಮೆಯಂದು ಚಂದ್ರನ ಪಕ್ಕ ಕಾಣುವ ಗುಚ್ಛವೇ ಕೃತ್ತಿಕಾ.




### ಖಗೋಳ ದಿನಚರಿ

ನವೆಂಬರ್ ೩ ಮುಂಜಾವು
ಮಂಗಳ–ಶುಕ್ರ ನಡುವೆ ೧/೨ ಡಿಗ್ರಿಗಿಂತ ಕಡಿಮೆ ಕೋನ*
ಚಾಂದ್ರಮಾಸದ ಕೊನೆಯ ಪಾದ
೫ ಗುರು–ಚಂದ್ರ ನಡುವೆ ೨ ಡಿಗ್ರಿ ಅಂತರ
೭ ಗುರು–ಮಂಗಳ–ಚಂದ್ರ–ಶುಕ್ರ ಪುಟ್ಟ ಗುಂಪು*

| | |
|---|---|
| | ಶುಕ್ರದ ಆಚ್ಛಾದನೆ ಭಾರತಕ್ಕೆ ಕಾಣುವುದಿಲ್ಲ. |
| | ಚಂದ್ರ–ಭೂಮಿ ನಡುವೆ ಗರಿಷ್ಠ ಅಂತರ |
| ೧೧ | ಅಮಾವಾಸ್ಯೆ ೨೨:೩೦ಕ್ಕೆ |
| ೧೩ | ಶನಿ–ಚಂದ್ರ ಜೋಡಿ |
| ೧೭ | ಬುಧ ಗ್ರಹದ ಉಚ್ಚ ಯುತಿ |
| ೧೭ – ೧೮ | ಲಿಯೋನಿಡ್ಸ್ ಉಲ್ಕಾವೃಷ್ಟಿ* |
| ೧೯ | ಚಾಂದ್ರಮಾಸದ ಮೊದಲ ಪಾದ |
| ೨೩ | ಯುರೇನಸ್–ಚಂದ್ರ ಆಚ್ಛಾದನೆ ಭಾರತಕ್ಕೆ ಕಾಣುವುದಿಲ್ಲ. |
| | ಚಂದ್ರ–ಭೂಮಿ ನಡುವೆ ಗರಿಷ್ಠ ದೂರ |
| ೨೫ | ಶನಿ–ಬುಧ ಜೋಡಿ |
| ೨೬ | ಹುಣ್ಣಿಮೆ ೦೩:೩೦ಕ್ಕೆ |
| ೩೦ | ಶನಿಗ್ರಹದ ಯುತಿ. |
| | ಶುಕ್ರ – ಚಿತ್ರಾ ನಡುವೆ ೪ ಡಿಗ್ರಿ ಅಂತರ* |

(* ಛಾಯಾಗ್ರಹಣಕ್ಕೆ ಸದವಕಾಶ)

**ಡಾ|| ಬಿ. ಎಸ್. ಶೈಲಜಾ**
ಜವಹರಲಾಲ್ ನೆಹರು ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು – ೫೬೦ ೦೦೧

# ಪವಿತ್ರ ಗೋವು ಮತ್ತು ಹಿಂಸಾಚಾರ

ಮುದಿಯಾದ ಬರಡಾದ ಹಸುಗಳಿಂದ ಯಾವ ಪ್ರಯೋಜನವಿಲ್ಲವೆಂದಾದ ಮೇಲೆ ಅವುಗಳಿಗೆ ಹುಲ್ಲು ನೀರನ್ನು ಒದಗಿಸಿ ಸಾಕುವವರು ಯಾರು ? ಬರಗಾಲದಲ್ಲಿ ಮನುಷ್ಯರಿಗೇ ಕುಡಿಯುವ ನೀರಿಗೆ ಕಷ್ಟವಾಗಿರುವಾಗ ದನಕರುಗಳಿಗೆ ನೀರೆಲ್ಲಿಂದ ತರುವುದು ? ಗೋವಿನ ಹಾಡಿನ ಕಾಳಿಂಗ ಗೊಲ್ಲನ ಕಥೆಯಲ್ಲಿ ಬರುವ ಅರುಣಾಚಲ (?) ಬೆಟ್ಟದ ತಪ್ಪಲಿನಲ್ಲಿ ಬೆಳೆಯುವ ಹಸಿರು ಹುಲ್ಲುಗಾವಲುಗಳಾಗಲಿ, ತಿಳಿನೀರಾಗಲಿ, ಹೊಂಗೆಯ ಮರದ ನೆರಳಾಗಲಿ ಈಗ ಲಭ್ಯವಿಲ್ಲ. ಬೇಸಾಯಕ್ಕೆ, ಬಂಡಿ ಎಳೆಯುವುದಕ್ಕೆ ಬಗೆ ಬಗೆಯ ಯಂತ್ರಗಳು ಬಂದಿರುವುದರಿಂದ ಎತ್ತುಗಳಿಂದಲೂ ಪ್ರಯೋಜನವಿಲ್ಲ. ಇವುಗಳನ್ನೂ ಕೊಟ್ಟಿಗೆಗಳಲ್ಲಿ ಕಟ್ಟಿ ಸಾಕಲು ಯಾರೂ ಸಿದ್ಧರಿಲ್ಲ. ಹೀಗಾಗಿ 'ಹಾದಿಬೀದಿಗಳಲ್ಲಿರುವ ಕಸದ ಹುಲ್ಲನ್ನು ಹುಡುಕಿ ಮೇಯುವುದು' – ನಗರದ ಬೀದಿಗಳಲ್ಲಿ ಅದಕ್ಕೂ ಅವಕಾಶವಿಲ್ಲ – ಪ್ಲಾಸ್ಟಿಕ್ ಹಾಳೆಗಳನ್ನು ನುಂಗುವುದು, ಕಡೆಗೊಮ್ಮೆ ಎಲ್ಲೋ ಬಿದ್ದು ಸಾಯುವುದು ಇಷ್ಟು ಹೊರತಾಗಿ ಗೋವುಗಳಿಗೆ ಬೇರೆ ಪರ್ಯಾಯವಿಲ್ಲ.

**ಡಾ|| ಕೆ. ಎಲ್. ಗೋಪಾಲಕೃಷ್ಣಯ್ಯ**

ಮತಧರ್ಮಾತೀತ ರಾಷ್ಟ್ರ ಪ್ರಭುತ್ವವು ಗೋವನ್ನು ಹಿಂದೂ ಮತಧಾರ್ಮಿಕ ಪರಂಪರೆಯ ಸಂಕೇತವಾಗಿಸಿ, ಅನ್ಯಧರ್ಮೀಯರ ಮೇಲೆ ದಾಳಿಮಾಡುವ ಸಾಧನವಾಗಿ ಬಳಸಿಕೊಳ್ಳುತ್ತಿರುವುದು ಅತ್ಯಂತ ವಿಷಾದದ ಸಂಗತಿ.

ಗೋವುಗಳ ರಕ್ಷಣೆಯಲ್ಲಿ ನಿಜವಾಗಿಯೂ ಆಸಕ್ತರಾದವರಿಗೆ ಮೂರು ಪರ್ಯಾಯ ಮಾರ್ಗಗಳು ಲಭ್ಯವಿವೆ.

೧) ಅಗತ್ಯವಿದ್ದ ಕಡೆಗಳಲ್ಲಿ ಗೋಶಾಲೆಗಳನ್ನು ಕಟ್ಟಿ ಅಲ್ಲಿ ಗೋವುಗಳನ್ನು ಸಾಕಿ ಪೋಷಿಸುವುದು, ಅವುಗಳ ನಿಗಾವಹಿಸುವುದು ಒಂದು ಮಾರ್ಗ. ಆದರೆ ಇದಕ್ಕೆ ಹೆಚ್ಚು ದುಡ್ಡು ಖರ್ಚಾಗುತ್ತದೆ. ವಿಶಾಲವಾದ ಗೋಶಾಲೆಗಳನ್ನು ನಿರ್ಮಿಸಲು, ನಿರ್ವಹಿಸಲು ದೊಡ್ಡ ಪ್ರಮಾಣದ ಬಂಡವಾಳ ಹೂಡಬೇಕಾಗುತ್ತದೆ. ಗೋಮಯ (ಸಗಣಿ), ಗೋಮೂತ್ರಗಳಿಗೆ ಔಷಧೀಯ ಗುಣಗಳಿವೆ ಎನ್ನಲಾಗಿದೆ; ಸಗಣಿ, ಗಂಜಲಗಳು ಉತ್ತಮ ಸಾವಯವ ಗೊಬ್ಬರವಾಗುತ್ತದೆ (ಇಟ್ಟರೆ ಸಗಣಿಯಾದೆ, ತಟ್ಟಿದರೆ ಕುರುಳಾದೆ (ಬೆರಣಿ), ತಟ್ಟದೆ ಹಾಕಿದರೆ ಮೇಲುಗೊಬ್ಬರವಾದೆ...) – ಎಂಬುದೆಲ್ಲ ನಿಜವಾದರೂ, ಈ 'ಉದ್ಯಮ'ದಿಂದ ಹೂಡಿದ ಬಂಡವಾಳಕ್ಕೆ ತಕ್ಕಷ್ಟು ಲಾಭ ಬರುವುದಿಲ್ಲ.

೨) ಗೋಹತ್ಯೆಯನ್ನು, ಗೋವಿನ ಮಾಂಸ ತಿನ್ನುವುದನ್ನು ಕಾನೂನಿನ ಮೂಲಕ ನಿಷೇಧಿಸುವುದು. ಹಾಲು ಕರೆಯದ ಮುದಿಹಸುಗಳನ್ನು ಮತ್ತು ಎತ್ತುಗಳನ್ನು ಕಟುಕರಿಗೆ ಮಾರುವುದನ್ನು, ಕಸಾಯಿಖಾನೆಗಳಿಗೆ ಸಾಗಿಸುವುದನ್ನು ತಡೆಗಟ್ಟುವಂಥ ಕಠಿಣ ಕಾನೂನುಗಳನ್ನು ರಚಿಸಿ ಜಾರಿಗೆ ತರುವುದು. ಅಂತಹ ಕಾನೂನು ಜಾರಿಗೆ ಬರುವವರೆಗೆ, ಗೋರಕ್ಷಾ ಸಂಘಟನೆಯ ಸೈನಿಕರು ಕಾನೂನನ್ನು ಕೈಗೆ ತೆಗೆದುಕೊಂಡು, ಗೋವಧೆ ಮಾಡುವವರನ್ನು, ಕಸಾಯಿಖಾನೆಗಳಿಗೆ ದನಗಳನ್ನು ಸಾಗಿಸುವವರನ್ನು, ಗೋಮಾಂಸ ತಿನ್ನುವವರನ್ನು ಹಿಡಿದು, ಹೊಡೆದು ಮಾಡುವುದು, ಉದ್ವೇಗ ಹೆಚ್ಚಿದರೆ ಕೊಲೆ ಮಾಡುವುದು.

೩) ಉಪಯುಕ್ತವಲ್ಲದ ದನಗಳಿಗೆ ಸಹಿಸಲಾರದ ಹಿಂಸೆಕೊಟ್ಟು ದೂರದ ಕಸಾಯಿ ಕಾರ್ಖಾನೆಗಳಿಗೆ ಸಾಗಿಸುವುದಕ್ಕೆ ಬದಲಾಗಿ, ರೈತರ ಜಮೀನು ಮತ್ತು ಹೈನುಗಾರಿಕೆ ನಡೆಯುವ ಸ್ಥಳಗಳಿಗೆ ಸಮೀಪವಾಗಿ ಕಸಾಯಿ ಕಾರ್ಖಾನೆಗಳನ್ನು ಸ್ಥಾಪಿಸಿ, ಅಲ್ಲಿ ಹೆಚ್ಚುಕಾಲ ನೋವನ್ನು ಕೊಡದ ರೀತಿಯಲ್ಲಿ, ವೈಜ್ಞಾನಿಕ ಮತ್ತು ಆರೋಗ್ಯಕರ ವಿಧಾನಗಳಿಂದ ದನಗಳ ವಧೆ ಮಾಡುವುದು.

ಇವುಗಳ ಜೊತೆಗೆ, ವಾಜಶ್ರವಸ್ ಎಂಬ ರಾಜರ್ಷಿಯು ಯಜ್ಞ ಕಾಲದಲ್ಲಿ ಹುಲ್ಲು



ತಿನ್ನಲಾರದ, ನೀರು ಕುಡಿಯಲಾರದ, ಕರುಗಳನ್ನು ಈಯಲಾರದ, ಹಾಲು ಕೊಡಲಾರದ ಗೋವುಗಳನ್ನು ಬ್ರಾಹ್ಮಣರಿಗೆ ದಾನಕೊಡಲು ತಂದಿದ್ದ ಪ್ರಸಂಗವೊಂದು ಕಠೋಪನಿಷತ್ತಿನಲ್ಲಿ ಬರುತ್ತದೆ. (ನಚಿಕೇತ ಪ್ರಸಂಗ) (ದಾನ ಪಡೆದ ಹಸುಗಳನ್ನು ಆ ಪುರೋಹಿತ ಬ್ರಾಹ್ಮಣರು ಏನು ಮಾಡುತ್ತಿದ್ದರೋ ! ಗೊತ್ತಿಲ್ಲ.) ಇರಲಿ. ಈಗ ಇಂಥ ಯಜ್ಞಯಾಗಾದಿಗಳು ಆಚರಣೆಯಲ್ಲಿ ಇಲ್ಲವಾಗಿ ಈ ಪ್ರಸಂಗವನ್ನು ವಿವರಿಸಬೇಕಾಗಿಲ್ಲ.



ಗೋರಕ್ಷಣೆಗಾಗಿ ಮೇಲೆ ಸೂಚಿಸಿದ ಮೂರು ಪರ್ಯಾಯಗಳ ಪೈಕಿ ಗೋರಕ್ಷಣಾ ಪಡೆಯ ತೀವ್ರವಾದಿಗಳು (೧)ನೆಯ ಅಥವಾ (೩)ನೆಯ ವ್ಯವಸ್ಥೆಯನ್ನು ಅನುಮೋದಿಸುವುದಿಲ್ಲ; ಏಕೆಂದರೆ (೧) ಗೋಶಾಲೆಗಳನ್ನು ಅರ್ಥಾತ್ ದನದ ಕೊಟ್ಟಿಗೆಗಳನ್ನು ನಿರ್ವಹಿಸಲು ಕಷ್ಟಪಡಬೇಕಾಗುತ್ತದೆ. 'ಗೋಪೂಜೆ' ಮಾಡುವ ನಗರದ ಮಹಿಳೆಯರು (ಪುರುಷರೂ ಇರಬಹುದು; ಆದರೆ ಗೋವನ್ನು ಅರಿಶಿನ-ಕುಂಕುಮಗಳಿಂದ ಪೂಜೆಮಾಡಿ, ಆರತಿ ಎತ್ತುವುದು ಮಹಿಳೆಯರ ಪಾಲಿನ ಕೆಲಸವೆಂಬ ಸಂಪ್ರದಾಯವಿದೆ.), ಕೊಟ್ಟಿಗೆಯ ಸಗಣಿ ಗಂಜಲಗಳಿಂದ ಕೈಕಾಲು ಕೊಳೆ ಮಾಡಿಕೊಳ್ಳಲು ಸಿದ್ಧರಿಲ್ಲ. (ಕೆಲವು ದಿನಗಳ ಹಿಂದೆ ಅರಮನೆ ಮೈದಾನದಲ್ಲಿ ನಡೆದ ಗೋಪೂಜೆಗಾಗಿ ಸೇರಿದ್ದ ಮಹಿಳೆಯರು ಪಟ್ಟೆ ಸೀರೆಯುಟ್ಟು, ತಲೆತುಂಬ ಹೂಮುಡಿದು ಒಡವೆ, ವಸ್ತುಗಳಿಂದ ಸಾಲಂಕೃತರಾಗಿ ಮೈದಾನದಲ್ಲಿ ಗುಂಪುಗೂಡಿ ಗೋವಿನ ಹಣೆಗೆ - ವೇದಿಕೆಯ ಮೇಲೆ ಗೋವಿನ ವಿಗ್ರಹವನ್ನು ನಿಲ್ಲಿಸಲಾಗಿದ್ದಿತಂತೆ ! - ತಿಲಕವಿಟ್ಟು, ಆರತಿ ಎತ್ತಿಹೋದುದನ್ನು ಹಲವರು ಗಮನಿಸಿರಬಹುದು). ಆದ್ದರಿಂದ (೧)ನೆಯ ವಿಧಾನಕ್ಕೆ ಬಹುಜನ ಗೋಪೂಜಕರ ಒಪ್ಪಿಗೆಯಿಲ್ಲ.

ಇನ್ನು (೩)ನೆಯ ಪರ್ಯಾಯ : ಸರ್ಕಾರವೇ ಸೂಕ್ತವಾದ ಸ್ಥಳಗಳಲ್ಲಿ ಕಸಾಯಿ ಕಾರ್ಖಾನೆಗಳನ್ನು ಸ್ಥಾಪಿಸುವುದು : ಮುದಿಯಾದ ಮತ್ತು ದುರ್ಬಲವಾದ ಗೋವುಗಳನ್ನು ಇಟ್ಟುಕೊಂಡು ಹುಲ್ಲು ನೀರಿಲ್ಲದೆ ಅವುಗಳನ್ನು ಬಳಲಿಸುವುದಕ್ಕಿಂತ ಅಂಥವುಗಳನ್ನು ಕೊಲ್ಲುವುದೇ ಉತ್ತಮ ಪರ್ಯಾಯವೆಂಬ ಮಾತನ್ನು ಮೊದಲು ಹೇಳಿದವರು ವೀರ ಸಾವರ್ಕರ್ ಎಂಬುದು ಗೋರಕ್ಷಾ ಸಂಘಟನೆಯ ಸೇನಾನಿಗಳಿಗೆ ತಿಳಿದಿರಲಿಕ್ಕಿಲ್ಲ. ತಿಳಿದಿದ್ದರೂ ಅದನ್ನವರು ಪ್ರಕಟಿಸುವುದಿಲ್ಲ. ಮುದಿಯಾದ ಬರಡಾದ ಹಸುಗಳಿಂದ ಯಾವ ಪ್ರಯೋಜನವಿಲ್ಲವೆಂದಾದ ಮೇಲೆ ಅವುಗಳಿಗೆ ಹುಲ್ಲು ನೀರನ್ನು ಒದಗಿಸಿ ಸಾಕುವವರು ಯಾರು ? ಬರಗಾಲದಲ್ಲಿ ಮನುಷ್ಯರಿಗೇ ಕುಡಿಯುವ ನೀರಿಗೆ ಕಷ್ಟವಾಗಿರುವಾಗ ದನಕರುಗಳಿಗೆ ನೀರೆಲ್ಲಿಂದ ತರುವುದು ? ಗೋವಿನ ಹಾಡಿನ ಕಾಳಿಂಗ ಗೊಲ್ಲನ ಕಥೆಯಲ್ಲಿ ಬರುವ ಅರುಣಾಚಲ (?) ಬೆಟ್ಟದ ತಪ್ಪಲಿನಲ್ಲಿ ಬೆಳೆಯುವ ಹಸಿರು ಹುಲ್ಲುಗಾವಲುಗಳಾಗಲಿ, ತಿಳಿನೀರಾಗಲಿ, ಹೊಂಗೆಯ ಮರದ ನೆರಳಾಗಲಿ ಈಗ ಲಭ್ಯವಿಲ್ಲ. ಬೇಸಾಯಕ್ಕೆ, ಬಂಡಿ ಎಳೆಯುವುದಕ್ಕೆ ಬಗೆ ಬಗೆಯ ಯಂತ್ರಗಳು ಬಂದಿರುವುದರಿಂದ ಎತ್ತುಗಳಿಂದಲೂ ಪ್ರಯೋಜನವಿಲ್ಲ. ಇವುಗಳನ್ನೂ ಕೊಟ್ಟಿಗೆಗಳಲ್ಲಿ ಕಟ್ಟಿ ಸಾಕಲು ಯಾರೂ ಸಿದ್ಧರಿಲ್ಲ. ಹೀಗಾಗಿ 'ಹಾದಿಬೀದಿಗಳಲ್ಲಿರುವ ಕಸದ ಹುಲ್ಲನ್ನು ಹುಡುಕಿ ಮೇಯುವುದು' - ನಗರದ ಬೀದಿಗಳಲ್ಲಿ ಅದಕ್ಕೂ ಅವಕಾಶವಿಲ್ಲ - ಪ್ಲಾಸ್ಟಿಕ್ ಹಾಳೆಗಳನ್ನು ನುಂಗುವುದು, ಕಡೆಗೊಮ್ಮೆ ಎಲ್ಲೋ ಬಿದ್ದು ಸಾಯುವುದು ಇಷ್ಟು ಹೊರತಾಗಿ ಗೋವುಗಳಿಗೆ ಬೇರೆ ಪರ್ಯಾಯವಿಲ್ಲ.

ಪಶುಗಳಿಗೆ ಹೆಚ್ಚು ಹಿಂಸೆಕೊಡದೆ, ಆಧುನಿಕ, ವೈಜ್ಞಾನಿಕ ವಿಧಾನಗಳನ್ನು ಅನುಸರಿಸಿದ ವಧಾಗಾರಗಳನ್ನು ಸ್ಥಾಪಿಸಬೇಕೆಂಬ - ಕೆಲವರ ದೃಷ್ಟಿಯಲ್ಲಿ ವಿವಾದಾಸ್ಪದ - ಸಲಹೆಯನ್ನು ನೀಡಿದವರು, ಬೆಂಗಳೂರಿನಲ್ಲಿ ಭಾರತೀಯ ನಿರ್ವಹಣಾ ಸಂಸ್ಥೆಯ (ಐಐಎಂ-ಬಿ) ಸ್ಥಾಪಕರಾದ ಎಸ್. ರಾಮಸ್ವಾಮಿಯವರು. ಬಂಡಿಯೆಳೆಯುವ ಪ್ರಾಣಿಗಳ ಶ್ರಮವನ್ನು ತಗ್ಗಿಸುವ ಸಲುವಾಗಿ, ಪ್ರಾಣಿಗಳು ಎಳೆಯುವ ಬಂಡಿಗಳಲ್ಲಿ ಹಲವು ಸುಧಾರಣೆಗಳನ್ನು ಮಾಡಿದ ಇವರಿಗೆ ಪ್ರಾಣಿಗಳ ಬಗೆಗೆ ಅಪಾರ ದಯೆ, ಸಹಾನುಭೂತಿಗಳಿದ್ದವೆಂಬುದನ್ನು ಸಂದೇಹಿಸಬೇಕಾಗಿಲ್ಲ. ಆದರೆ ಆಗಲೇ ಹೇಳಿದಂತೆ (೧) ಮತ್ತು (೩)ನೆಯ ಪರ್ಯಾಯಗಳು ಗೋಪೂಜಕ ಸಂಘಟನೆಯ ಸೇನಾನಿಗಳಿಗೆ ಒಪ್ಪಿಗೆಯಾಗುವುದಿಲ್ಲ.

ಇವರಿಗೆ ಬೇಕಾಗಿರುವುದು (೨)ನೇ ಪರ್ಯಾಯ ಮಾತ್ರ. ಇದರಿಂದ ಗೋವನ್ನು ಒಂದು 'ರಾಜಕೀಯ ಪ್ರಾಣಿ'ಯಾಗಿಸುವುದು ಸಾಧ್ಯವಾಗುತ್ತದೆ. ಹೀಗೆ ಮಾಡುವುದರಿಂದ ಮುಸಲ್ಮಾನರನ್ನು, ಕ್ರಿಶ್ಚಿಯನ್ನರನ್ನು ಮತ್ತು ಉದಾರವಾದಿ ಹಿಂದೂಗಳನ್ನು ಹೆದರಿಸಿ ಹದ್ದುಬಸ್ತಿನಲ್ಲಿಟ್ಟುಕೊಳ್ಳುವುದು ಸಾಧ್ಯವಾಗುತ್ತದೆ. 'ಸುದ್ದಿದಾಹಿ'ಗಳಾದ ಮಾಧ್ಯಮಗಳು 'ಪ್ರಾದೇಶಿಕ ಘಟನೆ'ಗಳಿಗೆ ವಿಶೇಷ ಪ್ರಚಾರಕೊಡುವ ಮೂಲಕ, ತೀವ್ರವಾದಿಗಳ ಕೃತ್ಯಕ್ಕೆ ಕುಮ್ಮಕ್ಕು ಕೊಡುತ್ತವೆ. ಒಟ್ಟಿನಮೇಲೆ ಅಂತರರಾಷ್ಟ್ರೀಯ ನೆಲೆಯಲ್ಲಿ ಭಾರತದ ವಿವಾದಾಸ್ಪದ ಸಂಗತಿಗಳ ಮೇಲೆ ಗಮನವನ್ನು ಕೇಂದ್ರೀಕರಿಸುವಂತೆ ಮಾಡುವ ಕೆಲಸವಾಗುತ್ತದೆ. ಹೀಗಾಗಿ ಗೋರಕ್ಷಣಾ ಸಂಘಟನೆಯ ಸೇನಾನಿಗಳಿಗೆ ನಿಜವಾಗಿ, ಗೋವುಗಳನ್ನು ಕಾಪಾಡುವುದಕ್ಕಿಂತ ಹೆಚ್ಚು ಆಪ್ತವಾಗಿರುವುದು ರಾಜಕೀಯ ಲೆಕ್ಕಾಚಾರ.

ಗಾಂಧಿ ಶಾಂತಿ ಪ್ರತಿಷ್ಠಾನದ ಸಂಶೋಧಕ 'ಫೆಲೋ' ಆಗಿರುವ ಸಪನ್ ಜೋಷಿ ಅವರು ತಮ್ಮ ಒಂದು ಪ್ರಬಂಧದಲ್ಲಿ "ಗೋರಕ್ಷಕ ಸಂಘಟನೆಯ ದಳದವರು ಕೂಡ ಮುದಿಹಸುಗಳಿಂದಲೂ ಇರುವ ಪ್ರಯೋಜನಗಳನ್ನು ಒತ್ತಿಹೇಳುತ್ತಾರೆ. ದನಗಳ ಸಗಣಿ, ಗಂಜಲಗಳ ಔಷಧೀಯ ಗುಣಗಳು, ಸಾವಯವ ಗೊಬ್ಬರದ ಮಹತ್ವ ಇತ್ಯಾದಿಗಳನ್ನು ಉತ್ಪ್ರೇಕ್ಷಿಸಿ ಪ್ರತಿಪಾದಿಸುತ್ತಾರೆ. ಆದರೆ ಇವೆಲ್ಲ ವಿಚಾರವಾದಿಗಳು ಮತ್ತು ಉದಾರವಾದೀ ಹಿಂದೂಗಳನ್ನು ತಮ್ಮ ತಮ್ಮ ಗುಪ್ತಕಾರ್ಯಸೂಚಿಯ ಪರ ಒಲಿಸಿಕೊಳ್ಳಲು ಹೂಡುವ ತಂತ್ರಗಳು ಅಷ್ಟೆ. ನಿಜವಾಗಿ ಅವರಿಗೆ ಬೇಕಾಗಿರುವುದು, ಮುಸಲ್ಮಾನರು, ಕ್ರಿಶ್ಚಿಯನ್ನರು ಮತ್ತು ಮತಧರ್ಮಾತೀತ ಉದಾರವಾದಿಗಳ ವಿರುದ್ಧ ಹೋರಾಡಲು ಅಗತ್ಯವಾಗಿರುವ ಪೌರುಷವನ್ನು (ಜನಬೆಂಬಲದ ಶಕ್ತಿ) ಗಳಿಸಿ ಕೊಳ್ಳುವುದು ಅಷ್ಟೆ" - ಎಂಬುದು ಸಪನ್ ಜೋಷಿಯವರ ಪ್ರಬಂಧದ ಸಾರಾಂಶ.

**ನವ ಹಿಂದೂತ್ವ**

ನವ ಹಿಂದೂತ್ವವಾದಿಗಳ ದೃಷ್ಟಿಯಲ್ಲಿ ಇಂಗ್ಲಿಷ್ ಕಲಿತ ಹಿಂದೂಗಳು ಪೌರುಷಹೀನರಾಗಿದ್ದಾರೆ. ವಿಧೇಯಳೂ, ನಿರುಪದ್ರವಿಯೂ, ಬಂದದ್ದನ್ನೆಲ್ಲ ಸಹಿಸಿಕೊಳ್ಳುವ, ಅತಿಸಹನೆಯ (ಹೆಂಡತಿ) ಹೆಣ್ಣಿನ ಹಾಗಿದ್ದಾರೆ; ಅವರಲ್ಲಿ ಪುರುಷ ಪೌರುಷವನ್ನು ತುಂಬಬೇಕು. ಹಿಂದೂಗಳು ಆಕ್ರಮಣಕಾರಿಗಳಾಗಬೇಕು. ಅದಕ್ಕಾಗಿ ಸೌಮ್ಯಸ್ವರೂಪದ ಸರಸ್ವತಿ, ಗೌರಿಯರಂತಹ ದೇವತೆಗಳಿಗೆ ಬದಲಾಗಿ ಉಗ್ರಸ್ವರೂಪದ, ಹಿಂಸಾರಭಸಮತಿಗಳಾದ ಕಾಳಿ, ದುರ್ಗಿಯರನ್ನು ಆರಾಧಿಸಬೇಕು; ಮಂಗಳಕರನಾದ ಶಿವನಿಗೆ ಬದಲಾಗಿ ವೀರಭದ್ರ, ಪ್ರಳಯರುದ್ರರನ್ನು ಆರಾಧಿಸಬೇಕು ಎನ್ನುತ್ತಾರೆ. ಸೀತಾರಾಮರಲ್ಲಿ ಇವರು ಸೀತೆಯನ್ನು ಬದಿಗಿರಿಸಿ, ರಾಮನನ್ನು ಓಲೈಸುತ್ತಾರೆ. ನಂದಗೋಕುಲದ ಮುದ್ದುಕೃಷ್ಣನಿಗಿಂತ, ನಿಷ್ಕಾಮ ಕರ್ಮವನ್ನು ಬೋಧಿಸಿದ ಭಗವದ್ಗೀತೆಯ ಶ್ರೀಕೃಷ್ಣನಿಗಿಂತ "ತತೋ ಯುದ್ಧಾಯ ಯುಜ್ಯಸ್ವನೈನಂ ಪಾಪಮವಾಪ್ಸ್ಯಸಿ" ಎಂದು ಬೋಧಿಸಿ ಅರ್ಜುನನನ್ನು ಯುದ್ಧಕ್ಕೆ ಸನ್ನದ್ಧಗೊಳಿಸಿದ ಅಥವಾ "ಆಪತ್ತೆಸಗಿದಾಗಲೆ - ಅಲ್ಪಸಂಖ್ಯಾತರಾಗಿರುವಾಗಲೆ - ಹಗೆಯ ಕೊಲುವುದು ವಸುಮತೀಶರ ನೀತಿ" (ಕುಮಾರವ್ಯಾಸ) - ಎಂದು ಬೋಧಿಸಿದ ಮಹಾಭಾರತದ ರಾಜಕಾರಣಿ ಕೃಷ್ಣ ಇವರಿಗೆ ಹೆಚ್ಚು ಪ್ರಿಯನಾದವನು. ಹಿಂದೂಧರ್ಮದ ತಿರುಳಾದ ಅಹಂಕಾರ ತ್ಯಾಗ, ಸೇವಾಮನೋಭಾವಗಳು ಇವರಿಗೆ ರುಚಿಸುವುದಿಲ್ಲ. ಇವರ ಅಭಿರುಚಿ ಇರುವುದು ಹೊಡಿ, ಬಡಿ, ಕೊಲ್ಲು, ಬೆಂಕಿಹಚ್ಚು - ಎಂಬ ಉಗ್ರವಾದದಲ್ಲಿ. "ಹಿಂದೂಧರ್ಮವೆನ್ನುವುದು ಒಂದು ಜೀವನ ವಿಧಾನ"ವೆಂಬುದನ್ನು ತಿರುಚಿ ತಾವು ಹೇಳುತ್ತಿರುವುದೇ ನಿಜವಾದ ಹಿಂದೂಧರ್ಮ - ಎಂದು ಪ್ರತಿಪಾದಿಸುತ್ತಾರೆ. ಗೋಮಾಂಸ ತಿನ್ನುವ ವಿಚಾರಕ್ಕೆ ಬರೋಣ : ವೈದಿಕಯುಗದಲ್ಲಿ ನಮ್ಮ ಪೂರ್ವಿಕರು ಗೋವುಗಳನ್ನು ಗೌರವಿಸುತ್ತಿದ್ದರು; ಗೋಧನ, ಗೋದಾನ, ಮಗಳನ್ನು ಮದುವೆ ಮಾಡಿ ಗಂಡನ ಮನೆಗೆ ಕಳಿಸುವಾಗ ವಧುವಿನ ತಂದೆಯು ಹಾಲು ಕರೆಯುವ ಗೋವುಗಳನ್ನು ಕಾಣಿಕೆಯಾಗಿ ಕೊಡುವುದು ಅಥವಾ ಗೋಸಂಪತ್ತನ್ನು ಕೊಟ್ಟು ವಧುವನ್ನು ಸ್ವೀಕರಿಸುವುದು ಇವೆಲ್ಲ ಪ್ರಚಾರದಲ್ಲಿದ್ದವು. ಆ ಕಾಲದಲ್ಲಿ ಗೋವುಗಳನ್ನು ಪೂಜಿಸುತ್ತಿದ್ದರು, ಮತ್ತು ಚೆನ್ನಾಗಿ ಸಾಕುತ್ತಿದ್ದರು. ಆದರೆ ಬರಡು ಹಸುಗಳು, ಹೋರಿಗಳು, ಎತ್ತುಗಳ ಮಾಂಸವನ್ನು ಬೇಯಿಸಿ ತಿನ್ನುವುದಕ್ಕೆ ಅಡ್ಡಿಯಿರಲಿಲ್ಲ. – ಈ ಎಲ್ಲ ವಿಚಾರಗಳನ್ನು ಪ್ರೌಢಸಂಸ್ಕೃತ ವಿದ್ವಾಂಸರೇ ವಿವರಿಸಿ ಹೇಳಿದಾಗಲೂ ನವ ಹಿಂದೂತ್ವವಾದಿಗಳು ಒಪ್ಪುವುದಿಲ್ಲ.

ಇವೆಲ್ಲ ಇಂಗ್ಲಿಷ್ ಕಲಿತ, ಪಾಶ್ಚಾತ್ಯ ಪ್ರಭಾವಕ್ಕೆ ಒಳಗಾದ ಉದಾರವಾದಿ ಹಿಂದೂಗಳ ಅಭಿಪ್ರಾಯವೆಂದು ತಳ್ಳಿಹಾಕುತ್ತಾರೆ, ಖಂಡಿಸುತ್ತಾರೆ. ಪ್ರಾಚೀನ ಹಿಂದೂಧರ್ಮದ ವೈಭವವನ್ನು, ಮತಿಭ್ರಾಂತಿಯಿಂದ ಉತ್ಪ್ರೇಕ್ಷಿಸಿ ವರ್ಣಿಸುವ ಈ 'ನವ ಹಿಂದೂ'ಗಳ ಜೊತೆಗೆ ಸಂವಾದವು ಸಾಧ್ಯವಾಗುವುದಿಲ್ಲ. ಅವರಿಗೆ ಬಹುಶಃ ಚರಕ ಸಂಹಿತೆ ತಿಳಿಯದು.

ಇಂದಿನ ಯುವಪೀಳಿಗೆಯನ್ನು ಹಲವು ಬಗೆಯ ಅಭದ್ರತೆಗಳು ಕಾಡುತ್ತಿರುವಂತಿದೆ. ಭಾರತಕ್ಕೆ ಸ್ವಾತಂತ್ರ್ಯ ಬಂದು ಆರು ದಶಕಗಳ ಮೇಲಾಗಿದ್ದರೂ ಸಾರ್ವತ್ರಿಕ ಸಾಕ್ಷರತೆ ಲಭ್ಯವಾಗಿಲ್ಲ; ಅವಿದ್ಯಾವಂತರು, ಅಲ್ಪವಿದ್ಯಾವಂತರು, ಯಾವುದೇ ಯಂತ್ರತಂತ್ರ ತಂತ್ರಜ್ಞಾನವಿಲ್ಲದ ಯುವಜನರ ಸಂಖ್ಯೆ, ನಿರುದ್ಯೋಗ ಸಮಸ್ಯೆ ಹೆಚ್ಚುತ್ತಿದೆ. ಇವುಗಳ ಜೊತೆಗೆ, ಯಾವುದೇ ಜನಗಣತಿಯ ಆಧಾರವಿಲ್ಲದಿದ್ದರೂ ಭಾರತದಲ್ಲಿ ಮುಸಲ್ಮಾನರ ಸಂಖ್ಯೆ ಹೆಚ್ಚುತ್ತಿದೆ ಮತ್ತು ಹಿಂದೂಗಳ ಸಂಖ್ಯೆ ಕ್ಷೀಣಿಸುತ್ತಿದೆಯೆಂಬ ತಪ್ಪುತಿಳಿವಳಿಕೆಯೊಂದು ಯುವಜನರ ಮನಸ್ಸಿನಲ್ಲಿ ಬೇರೂರಿಬಿಟ್ಟಿದೆ. ಹಲವು ಸ್ವಯಂಘೋಷಿತ ಜನಸಂಖ್ಯಾ ತಜ್ಞರು, ಸಂಶೋಧಕರು, ವಿದ್ವಾಂಸರು ಕೂಡ ಈ ಅಭಿಪ್ರಾಯವನ್ನು ಬಳಸಿಕೊಂಡು ಯುವಜನರ ಮನಸ್ಸಿನಲ್ಲಿ ಅಭದ್ರತೆಯ ಭಾವನೆಯನ್ನು ಬೆಳೆಸುವುದರಲ್ಲಿ ನಿರತರಾಗಿರುವುದು ವಿಷಾದದ ಸಂಗತಿ. ತಮ್ಮ ಈ ಎಲ್ಲ ಸಂಕಷ್ಟಗಳಿಗೆ ಮುಸಲ್ಮಾನರೇ ಕಾರಣ ಎಂಬ ಪ್ರತೀತಿ ಹರಡಿದೆ. ('ನಾಜೀ' ಜರ್ಮನಿಯಲ್ಲಿ ಜರ್ಮನರ ಸಮಸ್ಯೆಗಳಿಗೆಲ್ಲ ಯಹೂದಿಗಳೇ ಕಾರಣವೆಂದು ಪ್ರಚಾರ ಮಾಡಿದಂಥವರು, ದುರದೃಷ್ಟವಶಾತ್ ಭಾರತದಲ್ಲಿಯೂ ಇದ್ದಾರೆ.) ಹೀಗಾಗಿ, ಗೋಹತ್ಯೆ ಮಾಡುವ, ಗೋಮಾಂಸ ತಿನ್ನುವ ಮುಸಲ್ಮಾನರನ್ನು ಸದೆಬಡಿಯಬೇಕು; ಹಿಂದೂಗಳಿಗೆ ವಿಧೇಯರಾಗಿ ನಡೆಯುವಂತೆ ಮಾಡಬೇಕು – ಎಂಬ ಕೆಚ್ಚು ಯುವಜನರ ಮನಸ್ಸಿನಲ್ಲಿ ಗಟ್ಟಿಗೊಳ್ಳಲು ಅವಕಾಶವೊದಗಿದೆ.

ಇನ್ನು ರಾಜಕೀಯ ಪಕ್ಷಗಳು : ಕೇಂದ್ರ ಸರ್ಕಾರದಲ್ಲಿ ಅಧಿಕಾರ ನಡೆಸಿದ, ನಡೆಸುತ್ತಿರುವ ಯಾವುದೇ ರಾಜಕೀಯ ಪಕ್ಷವು ಯಾವುದೇ ಧರ್ಮದ ಸಂಪ್ರದಾಯವಾದಿಗಳನ್ನು ಎದುರುಹಾಕಿಕೊಳ್ಳಲು, ಆ ಮೂಲಕ ತನ್ನ ಮತಗಳಿಕೆಯ ಸಾಮರ್ಥ್ಯವನ್ನು ಕಳೆದುಕೊಳ್ಳಲು ಸಿದ್ಧವಿಲ್ಲ. ಅಗತ್ಯಬಿದ್ದಂತೆ ಆಯಾ ಮತಧರ್ಮದ ಸಂಪ್ರದಾಯವಾದಿಗಳನ್ನೇ ಓಲೈಸುತ್ತವೆ. ೧೯೮೦ರಲ್ಲಿ ಆಗಿನ ಕಾಂಗ್ರೆಸ್ ಸರ್ಕಾರವು, 'ಮತಧರ್ಮಾತೀತ'ವೆಂದು ಹೇಳಿಕೊಳ್ಳುತ್ತಿದ್ದರೂ, ಇಸ್ಲಾಂ ಸಂಪ್ರದಾಯವಾದಿಗಳನ್ನು ಓಲೈಸುವ ಸಲುವಾಗಿ, ಷಾ ಬಾನೂ ಪ್ರಕರಣದಲ್ಲಿ, 'ವಿಚ್ಛೇದಿತ ಮಹಿಳೆಗೆ ತನ್ನ ಗಂಡನಿಂದ ಜೀವನಾಂಶ ಪಡೆಯುವ ಹಕ್ಕಿದೆ' – ಎಂಬ ಸರ್ವೋಚ್ಚ ನ್ಯಾಯಾಲಯದ ತೀರ್ಪನ್ನು ಕೂಡ ಜಾರಿಗೊಳಿಸಲಿಲ್ಲ. ಆದರೆ 'ಸತೀ ಸಹಗಮನ'ವನ್ನು ಆಚರಿಸಿದ ರೂಪಾ ಕನ್ವರ್ ಪ್ರಕರಣದಲ್ಲಿ, 'ಸತೀ ಸಹಗಮನ'ವು ಸತ್ ಸಂಪ್ರದಾಯವಲ್ಲವೆಂದೂ, ಅಪರಾಧವೆಂದೂ ಹೇಳಿತು. (ಏಕೆಂದರೆ, ಸತೀ ಪದ್ಧತಿಯನ್ನು ಬ್ರಿಟಿಷರ ಕಾಲದಲ್ಲಿಯೇ ನಿಷೇಧಿಸಲಾಗಿತ್ತು. ಅಲ್ಲದೆ ಈ ಕಾಲದಲ್ಲಿ ತಮ್ಮ ಬದುಕುವ ಹಕ್ಕುಗಳಿಗಾಗಿ ಒತ್ತಾಯಮಾಡುತ್ತಿದ್ದ ಆಧುನಿಕ, ಎಚ್ಚೆತ್ತ ಮಹಿಳೆಯರನ್ನು ಓಲೈಸುವುದು ಕೂಡ ಅಗತ್ಯವಾಗಿತ್ತು. ಈಗ ಕೇಂದ್ರದಲ್ಲಿ ಆಡಳಿತ ನಡೆಸುತ್ತಿರುವ ಪಕ್ಷವಂತೂ 'ತಾನೇ ನಿಜವಾದ ಮತಧರ್ಮಾತೀತ ಪಕ್ಷ 'ವೆಂದು ಹೇಳಿಕೊಳ್ಳುತ್ತಿದ್ದರೂ, ಸಂಪ್ರದಾಯವಾದಿ ಹಿಂದೂಗಳನ್ನು ಪ್ರತ್ಯಕ್ಷವಾಗಿ, ಪರೋಕ್ಷವಾಗಿ ಓಲೈಸುತ್ತಿರುವುದು ಎಲ್ಲರಿಗೂ ಗೊತ್ತೇ ಇದೆ. ಗೋಪೂಜೆ, ಗೋರಕ್ಷಣೆ ಇವುಗಳ ಪ್ರಶಂಸೆಯ ಮತ್ತು ಗೋವಧೆಯ ಮತ್ತು ಗೋಮಾಂಸ ಭಕ್ಷಣೆಯ ವಿರೋಧ – ಇವೆಲ್ಲ ಸದ್ಯದ ರಾಜಕೀಯ ಪ್ರಣಾಳಿಕೆಯ ಕಾರ್ಯಸೂಚಿಗಳು. ಹೀಗೆ, ಗೋವು ಒಂದು ರಾಜಕೀಯ ಪ್ರಣಾಳಿಕೆಯ ಸಂಕೇತ, "ಒಂದು ರಾಜಕೀಯ ಪ್ರಾಣಿ"ಯಾಗಿದೆ.

ಮೇಲಿನ ಮಾತಿಗೆ, ಇತ್ತೀಚೆಗೆ ಉತ್ತರಪ್ರದೇಶದ, ಬಿಸಾಡ (ದಾದ್ರಿ) ಎಂಬಲ್ಲಿ ನಡೆದ ಮೊಹಮ್ಮದ್ ಅಖ್ಲಾಕ್ ಎಂಬಾತನ ಕಗ್ಗೊಲೆ ಒಂದು ಜ್ವಲಂತ ನಿದರ್ಶನ. ಈತನ ಮನೆಯ 'ರೆಫ್ರಿಜರೇಟರ್'ನಲ್ಲಿ ಗೋಮಾಂಸವನ್ನು ಶೇಖರಿಸಿಟ್ಟಿದ್ದಾರೆಂಬ ವದಂತಿಯಿಂದ ಹುಚ್ಚೆದ್ದ ತೀವ್ರವಾದಿಗಳು ಮನೆಯ ಮೇಲೆ ದಾಳಿಮಾಡಿ, ಮನೆಯಲ್ಲಿದ್ದವರನ್ನು ಹೊಡೆದು, ಬಡಿದು ಹಿಂಸಿಸಿ ಕಡೆಗೆ ಮನೆಯ ಯಜಮಾನ ಅಖ್ಲಾಕ್‌ನನ್ನು ಭೀಕರವಾಗಿ ಕೊಂದುಹಾಕಿದರೆಂದು ಪತ್ರಿಕೆಗಳಲ್ಲಿ ವರದಿಯಾಗಿದೆ. ಘಟನೆಯು ನಡೆದ ಸುಮಾರು ಒಂದು ವಾರದಮೇಲೆ, ಗೋಮಾಂಸವನ್ನು ಸಂಗ್ರಹಿಸಿಟ್ಟಿದ್ದ ವದಂತಿಯನ್ನು ಪ್ರಚಾರಮಾಡಿ, ತೀವ್ರವಾದಿಗಳನ್ನು ಪ್ರಚೋದಿಸಿದ ಗುಮಾನಿಯ ಮೇಲೆ ಪೊಲೀಸರು ಮೂವರು ಯುವಕರನ್ನು ಬಂಧಿಸಿದ್ದಾರಂತೆ ! ಇದಿನ್ನೂ ಪ್ರಥಮಹಂತದ ಆಪಾದನೆ, ಅಷ್ಟೆ. ಇಂಥ ಆಪಾದನೆಯನ್ನು ನಿರಾಕರಿಸುವುದು, ಅಪರಾಧವನ್ನು ಅಲ್ಲಗಳೆಯುವುದು, ಶಿಕ್ಷೆಯಿಂದ ತಪ್ಪಿಸಿಕೊಳ್ಳುವುದು, ಸದ್ಯದ ರಾಜಕೀಯ ಪರಿಸ್ಥಿತಿಯಲ್ಲಿ, ಆಪಾದಿತರಿಗೆ ಅಷ್ಟೇನೂ ಕಷ್ಟವಲ್ಲ. ವಿಪರ್ಯಾಸವೆಂದರೆ, ಗೋಮಾಂಸ ಶೇಖರಿಸಿದ್ದ ಗೃಹಸ್ಥನ ವಿರುದ್ಧ, ಕೆಂಡಕಾರುತ್ತ, ಪ್ರತಿಭಟನೆಯನ್ನು ಪ್ರಚೋದಿಸುತ್ತಿದ್ದ, ಮೀರತ್ ಕ್ಷೇತ್ರದ ಶಾಸನಸಭೆಯ ಸದಸ್ಯ ಬಿಜೆಪಿ ಮುಖಂಡ ಸಂಗೀತ್ ಸಿಂಗ್ ಸೋಮ್ ಎಂಬಾತನು ಸ್ವತಃ ವಿದೇಶಗಳಿಗೆ ಎತ್ತು, ಎಮ್ಮೆಗಳ ಇತ್ಯಾದಿ ದನಗಳ (ಗೋಮಾಂಸವೂ ಸೇರಿರಬಹುದೆ ?) ಮಾಂಸವನ್ನು ರವಾನಿಸುತ್ತಿದ್ದ ಕಂಪನಿಯೊಂದರ (AL-DUA Food, Procesing Pvt. Ltd.,) ವ್ಯವಸ್ಥಾಪಕನಾಗಿದ್ದನೆಂಬ ಸಂಗತಿ ಹೊರಬಿದ್ದಿದೆ. ಕೇಂದ್ರ ಗೃಹಸಚಿವರು, ಘಟನೆಯನ್ನು ಉಗ್ರವಾಗಿ ಖಂಡಿಸಿ, ಉತ್ತರಪ್ರದೇಶದ ಸರ್ಕಾರಕ್ಕೆ ಎಚ್ಚರಿಕೆ ನೀಡಿದ್ದಾರಂತೆ. (ದೇಶದ ಶಾಂತಿ, ಕಾನೂನು, ಕೋಮುಸೌಹಾರ್ದಗಳ ರಕ್ಷಣೆ ಮಾಡುವುದು ರಾಜ್ಯಸರ್ಕಾರದ ಕರ್ತವ್ಯವಾದ್ದರಿಂದ, ಅದು ಕೇಂದ್ರ ಸರ್ಕಾರದ ವ್ಯಾಪ್ತಿಗೆ ಬರುವುದಿಲ್ಲವಂತೆ !) ಇರಲಿ.

ದೇಶದ ಕೋಮುಸೌಹಾರ್ದಕ್ಕೆ ಇಂಥ ಅಪಾಯವು ಬರದಂತೆ ತಡೆಯಬಹುದಾಗಿದ್ದವರು ಯಾರು ? ದೇಶದ ಪ್ರಧಾನ ಮಂತ್ರಿಗಳು ತಾನೆ. ಗಗನಗಾಮಿಗಳಾಗಿ, ದೇಶವಿದೇಶಗಳಿಗೆ ಹಾರಾಡುತ್ತ, ಭಾರತದ ಬಡತನವನ್ನು ನೀಗುವುದಕ್ಕಾಗಿ ಭಾರತೀಯರಿಗೆ 'ಒಳ್ಳೆಯ ದಿನಗಳನ್ನು ತರುವುದಕ್ಕಾಗಿ' ಶ್ರಮಪಟ್ಟ , ದುಡಿಯುತ್ತಿದ್ದ ಪ್ರಧಾನ ಮಂತ್ರಿ ನರೇಂದ್ರ ಮೋದಿಯವರಿಗೆ ಇಂಥ 'ಸಣ್ಣ ವಿಚಾರಗಳ' ಬಗೆಗೆ ತಲೆಕೆಡಿಸಿಕೊಳ್ಳಲು ಪುರಸೊತ್ತೆಲ್ಲಿ ?

ಅಂತೂ ಪ್ರತಿಪಕ್ಷಗಳಿಂದಲೂ, ಸ್ವಪಕ್ಷದ ಕೆಲವು ಪ್ರಮುಖರಿಂದಲೂ ಒತ್ತಾಯ ಹೆಚ್ಚಿದಮೇಲೆ, ಬಿಹಾರದ ಚುನಾವಣೆಯು ಹತ್ತಿರವಾದ ಮೇಲೆ ಅಂತೂ ನಮ್ಮ ದೇಶದ ಪ್ರಧಾನ ಮಂತ್ರಿಗಳು ತುಟಿಬಿಚ್ಚಿದ್ದಾರೆ. ಆದರೂ ಅವರು ದಾದ್ರಿ ಘಟನೆಯನ್ನು ನೇರವಾಗಿ ಪ್ರಸ್ತಾಪಿಸಿಲ್ಲ, ತೀವ್ರವಾಗಿ ಖಂಡಿಸಿಲ್ಲ. ಬದಲಾಗಿ ಎರಡು ದಿನಗಳ ಮುಂಚೆ (ಅಕ್ಟೋಬರ್, ೭, ಬುಧವಾರ) ರಾಷ್ಟ್ರಪತಿ ಪ್ರಣವ ಮುಖರ್ಜಿಯವರು. "ಭಾರತ ಮೂಲಭೂತ ಮೌಲ್ಯಗಳಾದ ವೈವಿಧ್ಯಮಯ ಜೀವನಪದ್ಧತಿ (ಮತಧರ್ಮಾಚರಣೆ, ಆಹಾರಪದ್ಧತಿ, ಉಡುಪು ಇತ್ಯಾದಿಗಳಲ್ಲಿ ಬಹುತ್ವ) ಮತ್ತು ಧಾರ್ಮಿಕ ಸೌಹಾರ್ದತೆ, ಸಹಿಷ್ಣುತೆಗಳನ್ನು ಕಾಪಾಡಿಕೊಂಡಿರುವುದರಿಂದಲೇ ಭಾರತವು ಏಕರಾಷ್ಟ್ರವಾಗಿ ಉಳಿದಿದೆ; ಯಾವುದೇ ಕಾರಣಕ್ಕೆ ಈ 'ಬಹುತ್ವ'ಕ್ಕೆ ಧಕ್ಕೆಯುಂಟುಮಾಡಬಾರದು" – ಎಂದು ಎಚ್ಚರಿಸಿದ ಮೇಲೆ, ಪ್ರಧಾನಿ ನರೇಂದ್ರ ಮೋದಿಯವರು ರಾಷ್ಟ್ರಪತಿಗಳು ಆಡಿದ ಮಾತುಗಳನ್ನು ಮನಸ್ಸಿಗೆ ತಂದುಕೊಂಡು "ಹಿಂದೂಗಳು ತಾವು ಮುಸಲ್ಮಾನರ ವಿರುದ್ಧ ಹೋರಾಡಬೇಕೋ ಅಥವಾ ಬಡತನದ ವಿರುದ್ಧ ಹೋರಾಡಬೇಕೋ ಎಂಬುದನ್ನು ಮತ್ತು ಮುಸಲ್ಮಾನರು ತಾವು ಹಿಂದೂಗಳ ವಿರುದ್ಧ ಹೋರಾಡಬೇಕೋ ಅಥವಾ ಬಡತನದ ವಿರುದ್ಧ ಹೋರಾಡಬೇಕೋ ಎಂಬುದನ್ನು ನಿರ್ಧರಿಸಬೇಕು..." ಇತ್ಯಾದಿಯಾಗಿ ಕರೆಕೊಟ್ಟಿದ್ದಾರೆ. ಹೇಳೀ ಕೇಳಿ ಇದು ಬಿಹಾರದ ಚುನಾವಣಾ ಪ್ರಚಾರ ಸಂದರ್ಭದಲ್ಲಿ ಮಾಡಿದ ಭಾಷಣ. ಇನ್ನುಮುಂದೆಯೂ ಪ್ರಧಾನಿಯವರ ಮಾತುಗಳು ಸದಾಕಾಲ ಅವರ ಮನಸ್ಸಿನಲ್ಲಿ ಉಳಿದಿದ್ದರೆ ಅದು ದೇಶದ ಸೌಭಾಗ್ಯ. ಕಾದುನೋಡೋಣ.

ಮುದಿಗೋವುಗಳ ಬಗೆಗೆ ಕಾರ್ಯಸಾಧ್ಯವಾದ ಕ್ರಮಗಳನ್ನು ಕೈಗೊಳ್ಳುವವರೆಗೆ "ಗೋರಕ್ಷಾ ಸಂಘಟನೆ"ಯ ಸೇನಾನಿಗಳು 'ರಕ್ಷಿಸಿದ', ಹಸಿದ ದನಗಳು ನಗರದ ಹಾದಿಬೀದಿಯಲ್ಲಿರುವ ಕಸದ ಹುಲ್ಲನ್ನು ಹುಡುಕಿ ಮೇಯುತ್ತಾ, ಅದೂ ಸಿಕ್ಕದಿದ್ದಾಗ ಪ್ಲಾಸ್ಟಿಕ್ ಹಾಳೆಗಳನ್ನು ನುಂಗಿ, ಎಲ್ಲೆಲ್ಲಿಯೊ ಬಿದ್ದು ರಭಸದಿಂದ ಚಲಿಸುವ ವಾಹನಗಳ ಅಡಿಯಲ್ಲಿ ಸಿಕ್ಕಿ ಸಾಯುತ್ತಿರುವಾಗ, ನಾವು 'ಪವಿತ್ರ ಗೋವಿನ ರಕ್ಷಣೆಯ ಹೆಸರಿನಲ್ಲಿ ನಡೆಯುತ್ತಿರುವ ಘೋರ ಹಿಂಸಾಚಾರ'ದ ಬಗೆಗೆ ವಿಚಾರ ಮಾಡುತ್ತಿರೋಣ.

[ಈ ಲೇಖನದ ಕೆಲವು ಮಾಹಿತಿಗಳನ್ನು ಕಳೆದವಾರದ 'ದಿ ಹಿಂದು' ಪತ್ರಿಕೆಗಳಿಂದ ಸ್ವೀಕರಿಸಲಾಗಿದೆ.]

**ಡಾ॥ ಕೆ. ಎಲ್. ಗೋಪಾಲಕೃಷ್ಣಯ್ಯ**
ನಂ. ೨೨೭೩, ೨೨ನೇ ಅಡ್ಡರಸ್ತೆ, ಬನಶಂಕರಿ ೨ನೇ ಹಂತ, ಬೆಂಗಳೂರು – ೫೬೦ ೦೭೦

# ಕತೆ

ಅಪ್ಪ "ಪುಟ್ಟಾ..." ಅಂತ ಕಿರುಚಿದ್ದೇ ತಡ, ಅಷ್ಟರಲ್ಲಿ ರಸ್ತೆ ಮಧ್ಯ ಲಾರಿಯ ಕೆಳಗೆ ಪುಟ್ಟನಿದ್ದ. ಹೊಟ್ಟೆಯ ಕೆಳಭಾಗ ಪೂರ್ತಿ ಜಜ್ಜಿಹೋಗಿತ್ತು. ಪುಟ್ಟನ ಕಣ್ಣು ತೆರೆದಿದ್ದವು. ಉಸಿರು ಜೋರಾಗೇ ಎಳೆದು ಬಿಡುತ್ತಿದ್ದ. ಅಸಾಧ್ಯವಾದ ಒದ್ದಾಟ. ಅಪ್ಪ ಪುಟ್ಟಾ ಪುಟ್ಟಾ ಅಂತ ಕಿರುಚುತ್ತಿದ್ದ. ಅಪ್ಪನ ಕೂಗಿಗೆ ಪ್ರತಿಕ್ರಿಯೆ ಇಲ್ಲ. ನೋಡುವಷ್ಟರಲ್ಲಿ ಪುಟ್ಟ ನಿಧಾನವಾಗಿ ಕಣ್ಣುಮುಚ್ಚಿದ್ದ.

ತಿಂಗಳ ಕಥೆ

**ಒ**ಂದು ಕತೆ ಬರೆಯಲು ಅವನು ಇಷ್ಟು ತಡಕಾಡಿದವನೇ ಅಲ್ಲ. ಒಂದು ಕಾಲದ ಕಾದಂಬರಿಕಾರರು ನಾಲ್ಕೈದು ಪತ್ರಿಕೆಗಳಿಗೆ ಏಕ ಕಾಲದಲ್ಲಿ ಧಾರಾವಾಹಿ ಬರೆಯುತ್ತಿದ್ದರಂತೆ. ಅದೂ ಅವರನ್ನೆಲ್ಲ ಎದುರು ಕೂರಿಸಿಕೊಂಡೇ ಬಿಸಿಬಿಸಿಯಾಗಿ ಬರೆದು ಕೊಡುತ್ತಿದ್ದರಂತೆ. ಅಂಥವನೇ ಈ ನಮ್ಮ ಕತೆಗಾರ. ಆದರೂ ಇವತ್ತು ತಿಣುಕುತ್ತಿದ್ದ. ಕೂತ ಎದ್ದ. ಮತ್ತೆ ಕೂತ. ಥೇ ಎಂದವನೇ ಹೋಗಿ ಕಾಫಿ ಕುಡಿದು ಬಂದ. ಊಹುಂ... ಯಾಕೋ ಕತೆ ಹೊರಡುತ್ತಿಲ್ಲ. ಕತೆಯನ್ನು ಅರ್ಜೆಂಟಾಗಿ ಕಳಿಸುತ್ತೇನೆಂದು ಒಪ್ಪಿಕೊಂಡಾಗಿದೆ.

ತನ್ನ ಡೈರಿ ತೆಗೆದ, ಅದರಲ್ಲೇನಾದರೂ ಕತೆಯಾಗುವ ಘಟನೆ ಸಿಕ್ಕೀತೆಂದು. ಜೂನ್, ಆಗಸ್ಟ್ ಸೋಮವಾರ, ಬುಧವಾರ ಊಹುಂ... ಬೇಸರ ಮಿತಿಮೀರಿತು. ಡೈರಿ ಮುಚ್ಚಿದವನೇ ಧೊಪ್ ಎಂದು ಟೇಬಲ್ ಮೇಲೆ ಒಗೆದ. ಕುಳಿತಲ್ಲೇ ಸಿಗರೇಟ್ ಹಚ್ಚಿದ. ಸಿಗರೇಟ್‌ನ ಕೊನೇ ಪಫ್ ಎಳೆದಾಗ ಅವನ ಕಣ್ಣು ತಾನೇ ಟೇಬಲ್ ಮೇಲೆ ಇದೀಗ ಒಗೆದ ಡೈರಿಯ ಕಡೆ ತಿರುಗಿತು. ಆ ಕಡೆ ನೋಡಿದವನೇ ದೃಷ್ಟಿ ಕೇಂದ್ರೀಕರಿಸಿದ. ನೋಟ ನೇರವಾಯಿತು. ಕಣ್ಣು ಸೂಕ್ಷ್ಮವಾಯಿತು. ಮುಖದಲ್ಲಿ ಯಾತನೆ, ನೋವು, ಸಂಕಟ ಏಕಕಾಲಕ್ಕೆ ಪ್ರವಹಿಸತೊಡಗಿದವು. ಆದದ್ದಿಷ್ಟೆ. ಅವನು ಡೈರಿ ಎತ್ತಿ ಟೇಬಲ್ ಮೇಲೆ ಒಗೆದಾಗ ಡೈರಿಯ ಕೆಳಗೆ ಒಂದು ಕಟ್ಟಿರುವೆ ಸಿಕ್ಕಿಹಾಕಿಕೊಂಡಿತ್ತು, ಗೋಣು, ಮುಂದಿನ ಎರಡು ಕಾಲುಗಳನ್ನು ಹೊರತುಪಡಿಸಿ ಉಳಿದ ಅದರ ದೇಹವೆಲ್ಲಾ ಡೈರಿಯ ಕೆಳಗೆ ಸಿಕ್ಕಿಹಾಕಿಕೊಂಡಿತ್ತು. ಡೈರಿಯ ಭಾರದಿಂದ ಹೊರಬರಲು ಒದ್ದಾಡುತ್ತಿತ್ತು. ತದೇಕ ಚಿತ್ತದಿಂದ ಅದನ್ನು ನೋಡಿದವನೇ ನಿಧಾನಕ್ಕೆ ಡೈರಿ ಎತ್ತಿದ. ಇರುವೆಯ ಹಿಂದಿನ ಹೊಟ್ಟೆಯ ಭಾಗ ಜಜ್ಜಿ ಹೋಗಿದೆ. ಕಾಲುಗಳು ಏನಾಗಿವೆಯೋ. ಡೈರಿ ತೆಗೆದರೂ ಇರುವೆ ಹಿಂದಕ್ಕೂ ಹೋಗದೆ ಮುಂದಕ್ಕೂ ಹೋಗದೆ ತನ್ನ ಸ್ಪರ್ಶ ಪರಿಕರಗಳನ್ನು ಮೇಲೆ ಕೆಳಗೆ ಮಾಡುತ್ತ ಅಲ್ಲಿಯೇ ಕುಳಿತಿತ್ತು. ತದೇಕ ಚಿತ್ತದಿಂದ ಅದನ್ನು ನೋಡುತ್ತಲೇ ಇದ್ದ ಅವನು ಅದರ ಸುತ್ತ ಹರಡಿಕೊಂಡಿದ್ದ ಪೆನ್ನು ಪುಸ್ತಕಗಳನ್ನೆಲ್ಲ ತೆಗೆದ. ಐದು, ಹತ್ತು, ಇಪ್ಪತ್ತು... ಊಹುಂ ಅರ್ಧ ಗಂಟೆಯವರೆಗೂ ಅದನ್ನು ನೋಡುತ್ತಲೇ ಕುಳಿತ. ಇರುವೆಯೂ ಅಲ್ಲಿಂದ ಕದಲದೇ ಸ್ವಲ್ಪ ಮುಂದೆ ಸರಿದು ಸುಧಾರಿಸಿಕೊಂಡಿತು. ತಾನಾಗಿ ಹೋಗಲಿ ಎಂದರೆ ಅದು ಹೋಗುತ್ತಿಲ್ಲ. ಹೋಗಲಿ ಹೊರಗೆಸೆದರಾಯಿತೆಂದು ಕೈ ಮುಂದಕ್ಕೊಯ್ದ. ಕೈ ಹತ್ತಿರ ಬಂದಾಗ ಮಲಗಿದಲ್ಲಿಯೇ ಇರುವೆ ಜಾಗೃತವಾಯಿತು. ಮುಖ ಮೇಲೆತ್ತಿ ಸ್ಪರ್ಶಾಂಗಗಳನ್ನು ಜೋರಾಗೇ ಬೀಸಾಡಿತು. ತಕ್ಷಣ ಅವನು ಕೈ ಹಿಂತೆಗೆದುಕೊಂಡ. ಅದೇನು ಇರುವೆಯ ಪ್ರತಿಭಟನೆಯೋ, ಸಹಾಯಕ್ಕಾಗಿ ಯಾಚನೆಯೋ ಒಂದೂ ತಿಳಿಯಲಿಲ್ಲ. ಸರಿ ತಾನಾಗಿ ಹೋಗಲೆಂದು ಕಣ್ಣು ಮುಚ್ಚಿದ. ಕಣ್ಣು ಮುಚ್ಚಿದರೂ ಆ ಇರುವೆಯ ಒದ್ದಾಟ ಅವನ ಸ್ಮೃತಿಪಟಲದ ಮೇಲೆ ಮೂಡಿ ಮೆದುಳಿನ ಮೇಲೆ ದಾಳಿ ನಡೆಸಿತು. ಪ್ರಶ್ನೆಗಳ ಮೇಲೆ ಪ್ರಶ್ನೆ. ನಾನೇಕೆ ಅದಕ್ಕೆ ಗಾಯ ಮಾಡಿದೆ? ಗಾಯ ಮಾಡುವ ಉದ್ದೇಶವಿಲ್ಲದಿದ್ದರೂ ಗಾಯ ಮಾಡಿದ್ದಂತೂ ನಾನೇ. ಅದರ ಬದುಕಿನ ಹಕ್ಕು ಕಸಿಯಲು ನಾನ್ಯಾರು? ಹೋಗಲಿ ಗಾಯ ಮಾಡಿದ ನಂತರವೂ ಹೊರಕ್ಕೆಸೆಯಲು ಹೋದೆನಲ್ಲಾ, ಅದೇನು ಸಭ್ಯತೆ? ಅದು ನನಗೇನನ್ಯಾಯ ಮಾಡಿತ್ತು? ಥೇ... ಕಣ್ಣು ಮುಚ್ಚಿದ್ದೇ ತಪ್ಪಾಯಿತೆಂದು ಕಣ್ಣು ತೆರೆದ. ಇರುವೆ ಅಲ್ಲೇ ಇದೆ. ಅದರ ಒದ್ದಾಟ ಹೆಚ್ಚಾಗಿದೆ. ಎದ್ದು ಓಡಬೇಕೆನ್ನಿಸಿತು. ಯಾಕೋ ಕಾಲು ಏಳುತ್ತಿಲ್ಲ. ಉಸಿರು ಜೋರಾಗುತ್ತಿದೆ. ಎದೆಬಡಿತ ಮಿತಿಮೀರುತ್ತಿದೆ. ಈಗಂತೂ ಅವನ ಕಣ್ಣುಗಳು ನೇರವಾಗಿ ಇರುವೆಯನ್ನೇ ನೋಡುತ್ತಿವೆ. ತಲೆಯಲ್ಲಿ ತೀವ್ರವಾದ ಚೀತ್ಕಾರ. ಕಿವಿಗಡಚಿಕ್ಕುವ ಸದ್ದು.

*  *  *

ಸ್ಕೂಲು ಬಿಟ್ಟಾಯಿತು. ಮಗು ಇನ್ನೇನು ಗೇಟ್ ಹತ್ತಿರ ನಿಂತಿರಬೇಕು. ಸ್ಕೂಟರ್ ಆ್ಯಕ್ಸಿಲರೇಟರ್ ಜೋರು ಮಾಡಿದ. ಓ ಮಕ್ಕಳೆಲ್ಲಾ ಹೋಗಿದ್ದಾರೆ. ಇವನ ಮಗು ಮಾತ್ರ ನಿಂತಿದೆ. ಮುಗುಳ್ನಕ್ಕ ಅವನು ರಸ್ತೆ ಈ ಬದಿಯಿಂದ ಆ ಬದಿಗೆ ಹೋಗಿ ಪುಟ್ಟನಿಗೆ ಸರ್‌ಪ್ರೈಸ್ ಮಾಡಬೇಕೆಂದು ನಿಧಾನವಾಗಿ ಬ್ರೇಕ್ ಹಾಕಿದ. ಥೇ ಪುಟ್ಟ ನೋಡಿಯೇ ಬಿಟ್ಟ. ಪಪ್ಪಾ ಎಂದವನೇ ರಸ್ತೆಯ ಆ ಕಡೆಯಿಂದ ಈ ಕಡೆಗೆ ಓಡತೊಡಗಿದ. ಅಪ್ಪ "ಪುಟ್ಟಾ ..." ಅಂತ ಕಿರುಚಿದ್ದೇ ತಡ, ಅಷ್ಟರಲ್ಲಿ ರಸ್ತೆ ಮಧ್ಯ ಲಾರಿಯ ಕೆಳಗೆ ಪುಟ್ಟನಿದ್ದ. ಹೊಟ್ಟೆಯ ಕೆಳಭಾಗ ಪೂರ್ತಿ ಜಜ್ಜಿಹೋಗಿತ್ತು. ಪುಟ್ಟನ ಕಣ್ಣು ತೆರೆದಿದ್ದವು. ಉಸಿರು ಜೋರಾಗೇ ಎಳೆದು ಬಿಡುತ್ತಿದ್ದ. ಅಸಾಧ್ಯವಾದ ಒದ್ದಾಟ. ಅಪ್ಪ "ಪುಟ್ಟಾ ಪುಟ್ಟಾ" ಅಂತ ಕಿರುಚುತ್ತಿದ್ದ. ಅಪ್ಪನ ಕೂಗಿಗೆ ಪ್ರತಿಕ್ರಿಯೆಯೇ ಇಲ್ಲ. ನೋಡುವಷ್ಟರಲ್ಲಿ ಪುಟ್ಟ ನಿಧಾನವಾಗಿ ಕಣ್ಣುಮುಚ್ಚಿದ್ದ. ಪುಟ್ಟ ಆಸ್ಪತ್ರೆಯ ಹಾಸಿಗೆ ಮೇಲೆ ನಿಶ್ಚಲವಾಗಿ ಮಲಗಿದ್ದಾನೆ. ಉಸಿರು ಮಾತ್ರ ಬದುಕಿರುವುದಕ್ಕೆ ಸಾಕ್ಷಿ. ಆಘಾತಗೊಂಡ ಅಪ್ಪ ಮಗ ಕಣ್ಣು ತೆರೆಯುವುದನ್ನೇ ಕಾಯುತ್ತಿದ್ದಾನೆ. ಮಗುವಿನ ಉಸಿರಾಟ ತೀವ್ರವಾಯ್ತು. ಜೊತೆಗೆ ಅಪ್ಪನದೂ. ಹಾಂ! ಎಚ್ಚರಗೊಳ್ಳುತ್ತಿದ್ದಾನೆ. ಅದೇನು ಎಚ್ಚರವೋ ಒದ್ದಾಟವೋ ತಿಳಿಯದು. "ಡಾಕ್ಟ್ರೇ" ಎಂದು ಅಪ್ಪ ಚೀರುವುದರೊಳಗಾಗಿ ಪುಟ್ಟ ಸ್ತಬ್ಧವಾಗಿದ್ದ.

*  *  *

ಕತೆಗಾರ ನಿಧಾನಕ್ಕೆ ಟೇಬಲ್ ಮೇಲಿನ ಇರುವೆಯ ಹತ್ತಿರ ತನ್ನ ಗೋಣು ಬಾಗಿಸಿ ತುಟಿ ಮುಂದೆ ಮಾಡಿದ. ಇರುವೆಯ ಸುತ್ತ ಅವನ ಕಣ್ಣೀರು ಬಿದ್ದಿತ್ತು. ಇರುವೆ ನಿಶ್ಚಲವಾಗಿ ಮಲಗಿತ್ತು. ಥೇಟ್ ಹತ್ತು ವರ್ಷದ ಹಿಂದೆ ನಮ್ಮ ಕತೆಗಾರನ ಮಗ ಪುಟ್ಟ ಮಲಗಿದ್ದಂತೆಯೇ.

**ಶ್ರೀಸುಮಿತ್ರಾಸುತ ಅಗಸಬಾಳ**
'ಘಾಟೆ ಭವನ', ವಯ್ಯಾಲಿಕಾವಲ್
ಬೆಂಗಳೂರು – ೫೬೦ ೦೦೩

ನಾನು ಓದಿದ ಪುಸ್ತಕ

ಪುಸ್ತಕ ಹೆಸರು : **ಭಾಮಿನಿ ಷಟ್ಪದಿ**
ಲೇಖಕರು : **ಚೇತನಾ ತೀರ್ಥಹಳ್ಳಿ**
ಪುಟ : ೧೦೮
ಬೆಲೆ : ೯೯
ಪ್ರಕಾಶ : **ದರವೇಶ್ ಚೌಕಿ ಪಬ್ಲಿಕೇಷನ್ಸ್**




# ‘ಭಾಮಿನಿ ಷಟ್ಪದಿ’ ಎಂಬ ಹೆಣ್ಣಿನ ಯಾತನಾ ಪಲ್ಲವಿಗಳು

**ಶಕೀಲಾ ಕೆ.**

‘**ಭಾ**ಮಿನಿ ಷಟ್ಪದಿ’ ಭಿನ್ನ ನಿರೂಪಣ ಕ್ರಮ ಹೊಂದಿರುವ ಕೃತಿ. ಚೇತನಾ ತೀರ್ಥಹಳ್ಳಿಯವರ ಈ ಭಾಮಿನಿ ಷಟ್ಪದಿಗಳು ಹೊಸ ಸಂವೇದನೆಯಿಂದ ಕೂಡಿವೆ. ‘ಭಾಮಿನಿ ಷಟ್ಪದಿ’ ಎಂಬುದು ಒಂದು ಕಾವ್ಯ ಪ್ರಕಾರದ ಹೆಸರು. ಛಂದಸ್ಸಿನ ನಿಯಂತ್ರಣದಲ್ಲಿರುವ ಪದ್ಯ ರೂಪ. ಇಲ್ಲಿ ಕುಟುಂಬ, ಗಂಡ, ವಿವಾಹ ಮುಂತಾದ ನಿಯಂತ್ರಣಗಳಲ್ಲಿ ತಲ್ಲಣಿಸಿದ ಭಾಮಿನಿಯ ಚಿತ್ರಣಗಳಿವೆ. ಹಾಗೆ ನೋಡಿದರೆ ‘ಭಾಮಿನಿ ಷಟ್ಪದಿ’ ಬಿಡಿಬಿಡಿ ಪ್ರಸಂಗಗಳ ಒಂದು ಕಥನಗುಚ್ಛ.

ಕುಟುಂಬ ಎಂಬ ಗೃಹಬಂಧನದಲ್ಲಿ ಹೆಣ್ಣಿಗೆ ನಿರ್ದಿಷ್ಟ ನಿಯಮಗಳಿವೆ. ಇಲ್ಲಿನ ನಿಯಮಗಳನ್ನು ಮೀರಲಾರದೆ ನಲುಗುವ, ಇಲ್ಲವೆ ಈ ನಿಯಮಗಳನ್ನು ಮೀರಿ ತನ್ನ ಜವಾಬ್ದಾರಿಯನ್ನು ವಿಸ್ತರಿಸಿಕೊಂಡು ಬದುಕುವ ಸುಮಾರು ಇಪ್ಪತ್ತು ಭಾಮಿನಿಯರು ಅನುಭವಿಸುವ ಬದುಕಿನ ಯಾತನೆಗಳನ್ನು ಬೇರೆ ಬೇರೆ ಪ್ರಸಂಗಗಳಲ್ಲಿ ಹಿಡಿದಿರುವ ಪ್ರಯತ್ನವನ್ನು ಚೇತನಾ ಅವರು ಮಾಡಿದ್ದಾರೆ. ಇಲ್ಲಿನ ಭಾಮಿನಿಯರು ವಿವಿಧ ವಯಸ್ಸಿನ, ವಿವಿಧ ಸ್ತರದವರು. ಉದಾಹರಣೆ, ಹದಿಹರೆಯದ ಮಹಿಳೆ, ಗೃಹಿಣಿ, ಉದ್ಯೋಗಸ್ಥ ಮಹಿಳೆ, ಮಾಡಲಿಂಗ್ ಮಹಿಳೆ, ವಿಧವೆ, ವೇಶ್ಯೆ ಇತ್ಯಾದಿ ಪಾತ್ರಗಳನ್ನು ನಿರ್ವಹಿಸುವವರು.

ಭಾಮಿನಿಯರು ಬಾಲ್ಯದಿಂದ ಯೌವ್ವನಾವಸ್ಥೆಯವರೆಗೂ ವೈಯಕ್ತಿಕ ಹಿತಾಸಕ್ತಿಗಳಿರದೆ ಕುಟುಂಬದ ನಿಯಂತ್ರಣದಲ್ಲಿ ಇರುವವರು. ತಂದೆ ತಾಯಿಗೆ ಹದಿಹರೆಯದ ಹೆಣ್ಣುಮಕ್ಕಳ ಮೇಲೆ ವಿಶ್ವಾಸವಿರದೆ ನೆರೆಹೊರೆಯವರ ಅಭಿಪ್ರಾಯಕ್ಕೆ ಹೆಚ್ಚು ಮನ್ನಣೆ ಕೊಟ್ಟು ವಿನಾಕಾರಣ ಅವರ ನಡತೆಯನ್ನು ಅನುಮಾನಿಸಿದಾಗ “ಓ ! ನಾನು ಇದನ್ನು ಹೇಗೆ ನಿಭಾಯಿಸಲಿ ? ಯಾರಾದರೂ ಸಹಾಯಕ್ಕೆ ಬನ್ನಿ ಪ್ಲೀಸ್... !” ಎಂದು ತನ್ನತನವನ್ನು ಸಾಬೀತುಪಡಿಸಲು ಅಸಹಾಯಕಳಾಗಿ ಖಿನ್ನತೆಗೆ ಒಳಗಾದ ತರುಣಿ ಬಾಳಸಂಗಾತಿಯ ಬಗ್ಗೆ ಕಲ್ಪಿಸಿಕೊಳ್ಳಲಾಗದ ಸಾಂಪ್ರದಾಯಿಕ ವಾತಾವರಣದಲ್ಲಿ ಬೆಳೆದು ಬಂದವರು. ತಂದೆಯ ಧ್ವನಿಗೆ ಧ್ವನಿಗೂಡಿಸುವವರು. ಈ ಪರಿಸ್ಥಿತಿಯಲ್ಲಿ ವರಾನ್ವೇಷಣೆಗೆ ಬಂದ ಪುರುಷ ಹೆಣ್ಣನ್ನು ನಿರಾಕರಿಸಿದಾಗ ಆ ಕುಟುಂಬದ ಹಿರಿಯರು ನಿರಾಕರಣೆಗೆ ಕಾರಣವನ್ನು ಹುಡುಕಲು ಪ್ರಯತ್ನಿಸದೆ, ತಮ್ಮ ಮನೆಯ ಹೆಣ್ಣುಮಕ್ಕಳ ಮೇಲೆ ದೋಷವನ್ನು ಹೊರಿಸಿ, “ನೀ ಏನು ಸೂಳೆಗೆ ಕೆಟ್ಟುಹೋದೆಯೇನೆ ?” ಎಂದು ತಂದೆಯಿಂದಲೂ “ಮಂಗಳವಾರ ಹುಟ್ಟಿದ ಅನಿಷ್ಟ” ಎಂದು ತಾಯಿಯಿಂದಲೂ ನಿಂದನೆಗೆ ಗುರಿಯಾಗುತ್ತಾಳೆ. ಈ ಸನ್ನಿವೇಶದಲ್ಲಿ ಮಹಿಳೆ ಇದಕ್ಕೆ ಕಾರಣನಾದ ಗಂಡಿನಲ್ಲೇ ದೋಷವನ್ನು ಕಂಡುಕೊಂಡು ಬದುಕುವ ಧಾರಣಶಕ್ತಿಯನ್ನು ಪಡೆಯುತ್ತಾಳೆಯೇ ಹೊರತು ಕುಟುಂಬದವರ ವಿಶ್ವಾಸದಿಂದಲ್ಲ.

ಚೇತನಾ ಅವರು ಮಹಿಳೆಯ ಬದುಕಿನ ಯಾತನೆಯನ್ನು ಹೇಳಲು

ತಮ್ಮದೇ ಆದ ಹೊಸ ಕಥನಕ್ರಮವನ್ನು ರೂಪಿಸಿಕೊಂಡಿದ್ದಾರೆ. ‘ಭಾಮಿನಿ ಷಟ್ಪದಿ’ ಕವಿತೆಯೂ ಹೌದು, ಕತೆಯೂ ಹೌದು.

ಕೆಲವು ಕತೆಗಳಲ್ಲಿ ಕವಿತೆಯ ಸಾಲುಗಳನ್ನು ತಂದಿರುವುದು ವಿಶೇಷ ಕಥನ ಮಾದರಿಗೆ ಉದಾಹರಣೆಯಂತಿದೆ. ಕತೆಯ ವಿನ್ಯಾಸ ಒಂದು ಒಂದುವರೆ ಪುಟದಲ್ಲಿ ಹೆಣ್ಣಿನ ವಿಚಾರಗಳನ್ನು ಕುರಿತು ಹೇಳುವ ಕ್ರಮ ಭಿನ್ನವಾಗಿದೆ. ಕತೆಯ ನಿರೂಪಣೆಯಲ್ಲಿ ಹೆಚ್ಚು ವಿವರಗಳಾಗಲಿ, ಸಂಭಾಷಣೆಗಳಾಗಲಿ ಹಾಗೂ ಸನ್ನಿವೇಶಗಳಾಗಲಿ ಅಷ್ಟಾಗಿ ಕಾಣದೆ ಪಾತ್ರಗಳ ಹೆಸರು ಅಲ್ಲೊಂದು ಇಲ್ಲೊಂದು ಎಂಬಂತೆ ಇದ್ದು ಅವನು, ಅವಳು ಎಂಬ ಸರ್ವನಾಮಗಳಲ್ಲಿ ಕತೆಯ ನಿರೂಪಣೆ ಇದೆ. ಈ ಮೇಲಿನ ಬಹುಪಾಲು ಕತೆಗಳಲ್ಲಿ ಲೇಖಕಿ ಭಾಮಿನಿಯ ಬದುಕಿನ ಯಾತನೆಯನ್ನು ಕುರಿತು ಚಿಂತಿಸಿದ್ದಾರೆ. ಈ ಎಲ್ಲ ಕತೆಗಳಲ್ಲಿ ಲೇಖಕಿ ಪರಕಾಯ ಪ್ರವೇಶ ಮಾಡಿದಂತೆ ನಿರೂಪಣೆಯಿದ್ದು ಒಂದು ಹೆಣ್ಣು ಕುಟುಂಬದ ಒಳಗೆ ಅನುಭವಿಸುವ ಯಾತನೆಯನ್ನು ಚಿಕ್ಕ ಚಿಕ್ಕ ಘಟನೆಗಳ ಮೂಲಕ ನಿರೂಪಿಸುವ ಧ್ವನಿಯಿದೆ. ಆದರೆ ಹೆಣ್ಣಿನ ಬದುಕಿನ ಯಾತನೆಯನ್ನು ಕುರಿತು ಚಿಂತಿಸುವ ಲೇಖಕಿ ಆ ಕುಟುಂಬದಲ್ಲಿ ಹೆಣ್ಣಿಗೆ ಪುರುಷರಿಂದ ದೊರೆಯುವ ಸಂತೋಷದ ಕ್ಷಣಗಳನ್ನು ಚಿತ್ರಿಸಿಲ್ಲ. ಹೆಣ್ಣಿನ ಈ ಎಲ್ಲಾ ಬವಣೆಗಳಿಗೆ ಪುರುಷನನ್ನೇ ಗುರಿಯಾಗಿಸಿದ್ದು, ಇದಕ್ಕೆ ಭಿನ್ನವಾದ ಪುರುಷ ಪಾತ್ರಗಳು ಇಲ್ಲಿ ಒಡಮೂಡದೇ ಹೋಗಿವೆ. ಚೇತನಾ ಅವರ ಭಾಮಿನಿ ಷಟ್ಪದಿ ಮಹಿಳೆಯರು ಕುಟುಂಬದಲ್ಲಿ ಅನುಭವಿಸುವ ಅತ್ಯಂತ ಸೂಕ್ಷ್ಮ ಯಾತನೆಯನ್ನು ಬಯಲುಗೊಳಿಸಿ ಆ ಮೂಲಕ ಹೊಸ ಚಿಂತನೆಯನ್ನು ಮೂಡಿಸುವಂತಿವೆ.

ಈ ಭಾಮಿನಿಯರು ಪ್ರೇಮ, ಪ್ರೀತಿಯನ್ನು ಅರಿಯದ ಮುಗ್ಧರು. ಹೆತ್ತವರ ಹಿತಾಸಕ್ತಿಯಂತೆ ವಿವಾಹವಾಗಿ ಬದ್ಧತೆಯಿಂದ ಬದುಕುವವರು. ಆದರೆ ಅಲ್ಲಿಯೂ ಮಾನಸಿಕ ನೆಮ್ಮದಿ ದೊರೆಯದೆ 'ಹುಡುಗಾ ! ನನ್ನ ಜೀವನವಿಂದು ನೀನಿತ್ತ ಶಾಪ !!!' ಎಂದು ಈ ಹಿಂದೆ ಬಯಸಿಬಂದ ಸಂಗಾತಿಯನ್ನು ತಿರಸ್ಕರಿಸಿದ ಪರಿಣಾಮ ಎಂದು ಪಶ್ಚಾತ್ತಾಪ ಪಡುವವರಾಗಿದ್ದಾರೆ. ಅವರಿಗೆ ತನ್ನತನದ ಅರಿವಾಗುವುದು ಕುಟುಂಬವನ್ನು ಪ್ರವೇಶಿಸಿದಾಗ. ಕೆಲವೊಮ್ಮೆ ಮಹಿಳೆ ಸ್ವಇಚ್ಛೆಯಿಂದ ಸಂಗಾತಿಯನ್ನು ಆಯ್ಕೆಮಾಡಿಕೊಂಡು ಬದುಕುತ್ತಿದ್ದು, ಕಾಲಕ್ರಮೇಣ ಗಂಡನ ಪ್ರೇಮದ ಹಿಂದಿನ ನಿಜಸ್ವರೂಪವನ್ನು ಅರಿತಾಗ 'ಇದೇನಾ...ಗಂಡಸಿನ 'ಪ್ರೀತಿ' !? ಎಂದು ಮರುಗುವ ತನ್ನ ಆಯ್ಕೆಯ ಬಗ್ಗೆ ಕೊರಗುವ ಸುಶಿಕ್ಷಿತ ಮಹಿಳೆಯ ಬದುಕಿನ ಚಿತ್ರಣವಿದ್ದು, ಇದಕ್ಕಿಂತ ಭಿನ್ನವಾಗಿ 'ಮಂದಿಯ ಮಧ್ಯೆ ಹೀಗೊಂದು ದಾಂಪತ್ಯ ಕಥಾ'ದಲ್ಲಿ ಉದ್ಯೋಗಸ್ಥ ಮಹಿಳೆಯ ಬದುಕು ಅನಾವರಣಗೊಂಡಿದೆ. ಇಲ್ಲಿ ಉದ್ಯೋಗಸ್ಥ ಮಹಿಳೆ ತನ್ನ ಇಚ್ಛೆಯಂತೆ ಬಾಳಸಂಗಾತಿಯನ್ನು ಆಯ್ದು ಬದುಕುವ ವೈಯಕ್ತಿಕ ಸಾಮರ್ಥ್ಯವಿದೆ. ಈ ಸಾಮರ್ಥ್ಯದ ಹಿನ್ನೆಲೆಯಿಂದ ಪತಿಯ ಯಶಸ್ಸಿಗೆ ಎಲ್ಲಾ ರೀತಿಯಿಂದಲೂ ಸಹಕರಿಸುತ್ತ ಬದ್ಧತೆಯಿಂದ ಬದುಕನ್ನು ಸಾಗಿಸುತ್ತ ಈ ಬದುಕಿನಲ್ಲಿ ಯಶಸ್ಸನ್ನು ಕಾಣುವ ಮಹಿಳೆಯಾಗಿದ್ದಾಳೆ. ಆದರೆ, ತನ್ನ ಪ್ರೀತಿಯನ್ನು ವ್ಯವಹಾರವಾಗಿ ಪರಿಗಣಿಸಿ, "ನೀ ಹೋದರೆ ಕೆಲಸ ಆಗೋದು ಖಂಡಿತ. ನಿನ್ನ ಮುಖಕ್ಕೆ ಜನ ಬೀಳುತ್ತಾರೆ" ಎಂದು ಆ ಪ್ರೀತಿಯನ್ನೆ ಅಪಮೌಲ್ಯಗೊಳಿಸಿ ಅಸ್ತಿತ್ವಕ್ಕೆ ಧಕ್ಕೆ ಬಂದಾಗ ಸಹಿಸದೆ ಕುಟುಂಬಬಾಹಿರಳಾಗಿ ಬದುಕುವ ಬದುಕನ್ನು ನೆಚ್ಚಿಕೊಂಡವರಾಗಿದ್ದಾರೆ.

ಒಂದು ಹೆಣ್ಣು ಪರಿಪೂರ್ಣಳಾಗುವುದು ತಾಯ್ತನವನ್ನು ಅನುಭವಿಸಿ. ಆದರೆ ಈ ತಾಯ್ತನದ ಅನುಭವವನ್ನೇ ನೀಡದೆ ಮಾನಸಿಕವಾಗಿ ಹಿಂಸಿಸುವ ಗಂಡಸಿನ ಕ್ರೌರ್ಯದ ಸ್ವರೂಪವು ದೈಹಿಕವಾದ ಹಿಂಸೆಗಿಂತ ಮಿಗಿಲಾದದ್ದು. ವಿನಾಕಾರಣ ಹಿಂಸೆಗೆ ಒಳಗಾದ ಮಹಿಳೆ ಏಕಕಾಲಕ್ಕೆ "ಇವಳು ಕಾಲಿಟ್ಟಿದ್ದೇ ಹೀಗಾಯ್ತು. ದರಿದ್ರ ಲಕ್ಷ್ಮಿ!" ಎಂದು ಗಂಡನ ಕುಟುಂಬದಿಂದ ಹಾಗೂ "ಇವಳು ಬರಡು ಗೊಡ್ಡಾದರೂ ಅಂವ ಎಷ್ಟು ಸುಮ್ಮನಿರ್ತಾನೆ... ಒಂದು ಗಟ್ಟಿ ಮಾತೂ ಇಲ್ಲ!" ಎಂದು ಸಮಾಜದಿಂದ ಅಪಮಾನಿತಳಾಗಿ ಬದುಕುವ ಮಹಿಳೆಯನ್ನು 'ನಾಲ್ಕು ಮಾತಿಗೂ ಮಕ್ಕಳು ಹುಟ್ಟಕೂ ಏನು ಸಂಬಂಧ ?' ಎಂಬ ಕತೆಯಲ್ಲಿ ಕಾಣಬಹುದಾಗಿದೆ. ಆದರೆ ಇದಕ್ಕೆ ಕಾರಣನಾದ ಗಂಡಿಗೆ ಯಾವುದೇ ನಿಂದನೆ ಗಳಿಲ್ಲದಿರುವುದು ಸಹಜವಾಗಿದೆ. ಹೀಗೆ ಗಂಡು–ಹೆಣ್ಣಿನ ಲಿಂಗ ರಾಜಕಾರಣವನ್ನು ಬಯಲುಗೊಳಿಸುವ ನಿರೂಪಣೆಯಿದೆ. ಕೌಟುಂಬಿಕ ಚೌಕಟ್ಟಿನೊಳಗೆ ದುಡಿಯುವ ಮಹಿಳೆಯ ಸ್ಥಿತಿ ಹೀಗಿದ್ದರೆ, ಕುಟುಂಬದ ಒಳಗೆ ಹಾಗೂ ಕುಟುಂಬದ ಆಚೆ ದುಡಿಯುವ ಉದ್ಯೋಗಸ್ಥ ಮಹಿಳೆಯ ಬವಣೆ ಇದಕ್ಕಿಂತ ಭಿನ್ನವಾಗಿದೆ. ಇಲ್ಲಿ ಹೆಣ್ಣು ವ್ಯಕ್ತಿಗತ ಸಾಧನೆಯನ್ನು ಬಯಸಿಯೋ ಇಲ್ಲವೆ, ಮನೆಯ ಜವಾಬ್ದಾರಿಯನ್ನು ನಿರ್ವಹಿಸುವ ಸಲುವಾಗಿ ತಾಯ್ತನವನ್ನು ನಿರಾಕರಿಸಿದವಳು. ಆದರೆ, ಗಂಡನ ಲೈಂಗಿಕ ಇಚ್ಛೆಯನ್ನು ನಿರಾಕರಿಸಲಾರದೆ ತಾಯ್ತನವನ್ನು ಪಡೆದಾಗ ಇದಕ್ಕೆ ಮೂಲ ಕಾರಣನಾದ ಗಂಡ ಮತ್ತು ದುಡಿಯುವ ಸಂಸ್ಥೆಯಿಂದ ಅಪಮಾನಿತಳಾಗಿ ತಾಯ್ತನವನ್ನು ನಿರಾಕರಿಸುತ್ತಾಳೆ. ಇದುವರೆಗೂ ಸೊಸೆ ಕೊಡಬಹುದಾದ ಸಂತೋಷದ ಕ್ಷಣಕ್ಕೆ ಕಾತುರರಾಗಿದ್ದ ಅತ್ತೆ ಮಾವಂದಿರಿಗೆ ಸೊಸೆ ಕಣ್ಣೀರು ಮಿಡಿದು, "ಒಳಗಿಲ್ಲ" ಎಂದಾಗ ಕೊನೆಗೆ ಆ ಪ್ರೀತಿಯಿಂದಲೂ ವಂಚಿತಳಾಗಿ ಬದುಕುವ ಸ್ಥಿತಿ ಮಹಿಳೆಯದಾಗಿದೆ. ಹೀಗೆ ಕುಟುಂಬದಲ್ಲಿನ ಸಂಬಂಧಗಳು ಅನಿವಾರ್ಯತೆಯಿಂದ ಕೂಡಿದೆಯೇ ಹೊರತು ಸಹಜ ಎನಿಸುವುದಿಲ್ಲ. ಇಲ್ಲಿ ಅತ್ತೆ–ಮಾವಂದಿರಿಗೆ ಸೊಸೆ ಮೇಲೆ ಮುನಿಸು, ಮಗನ ಮೇಲಲ್ಲ. ಎಂದಿಗೂ ಗಂಡು ನಿಂದನೆಗೆ ಒಳಗಾಗುವುದಿಲ್ಲ. ಇದಕ್ಕಿಂತ ಭಿನ್ನವಾಗಿ ಕೆಳ ಅಂಚಿನಲ್ಲಿರುವ ಹೆಣ್ಣು ತಾಯಿಯಾಗುವ ಸಾಮರ್ಥ್ಯವಿದ್ದರೂ, ಈ ಸಾಮರ್ಥ್ಯ ತನ್ನ ಗಂಡನಲ್ಲಿ ಇಲ್ಲದಾಗ 'ಟೆಸ್ಟ್ ಟ್ಯೂಬ್ ಬೇಬಿ'ಯನ್ನು ಪಡೆಯಲು ಗಂಡನ ಒಪ್ಪಿಗೆಯನ್ನು ಕೇಳುತ್ತಾಳೆ. ಅವನು, "ಯಾವನ್ಯಾವನದೋ ಸ್ಪರ್ಮು ತುರುಕಿಸಿಕೊಳ್ಳುವ ಬದಲು ಮಲಗೆದ್ದು ಬಾ" ಎನ್ನುತ್ತಾನೆ. ಇಲ್ಲಿ ಅವನ ಕೀಳರಿಮೆ ಮತ್ತು ಅವಳ ಮಾನಸಿಕ ತೊಳಲಾಟವನ್ನು ಏಕಕಾಲಕ್ಕೆ ಬಯಲುಗೊಳಿಸುವ ಧ್ವನಿಯಿದೆ. ಆದರೆ ಇಲ್ಲಿ ಮಹಿಳೆಗೆ ಕುಟುಂಬ ಮುಖ್ಯವಾಗಿರುವುದರಿಂದ ಈ ಅಪಮಾನವನ್ನು ಸಹಿಸಿ ಅನಿವಾರ್ಯವಾಗಿ ಅನಾಥ ಮಗುವನ್ನು ದತ್ತು ಪಡೆದು, "ಎದುರಾಡಲಿಲ್ಲ ನಾನು ಅವರಿಗೆ, ನಾನೇ ಸೋತೆ. ಸೋತು ಗೆದ್ದು ಅವರನ್ನು ಗೆಲ್ಲಿಸಿದೆ" ಎಂಬ ಧ್ವನಿಯಲ್ಲಿ ಮಹಿಳೆಯ ತೊಳಲಾಟ, ಪುರುಷನ ಕುರಿತ ವ್ಯಂಗ್ಯವನ್ನು ಕಾಣಬಹುದಾಗಿದೆ.

ಕೆಳ ಅಂಚಿನ ಬಡಮಹಿಳೆಯ ತಾಯ್ತನದ ಬಯಕೆಯನ್ನು ಬಂಡವಾಳವಾಗಿಸಿ ಬದುಕುವ ಗಂಡ, ಆ ತಾಯ್ತನದ ಹಿಂದೆ ನವಮಾಸಗಳಲ್ಲಿ ಹೆಣ್ಣು ಅನುಭವಿಸಿದ ಯಾತನೆಗೆ ಬೆಲೆಯಿಲ್ಲದೆ ಪುನಃ ಅವಳನ್ನೆ, "ಹೆಂಗಸರಿಗೇನು ? ಮೈ ಮಾರಿಯಾದರೂ ಜೀವನ ಮಾಡ್ತೀರಿ. ಕಷ್ಟವೆಲ್ಲ ನಮ್ಗೆ" ಎಂದು ಹಂಗಿಸುವ ಪತಿಯಿಂದ ಮಾನಸಿಕ, ದೈಹಿಕ ಹಿಂಸೆಯಿಂದ ನಲುಗುವ ಮಹಿಳೆ, "ಕೈಲಾಗದ ಗಂಡಸಿಗೆ ಮೈಯೆಲ್ಲಾ ಪೌರುಷ !" ಎಂದು ಅವನ ಮೇಲಿನ ಸಿಟ್ಟನ್ನು ಹೊರಹಾಕಲಾಗದೆ ತನ್ನಲ್ಲೇ ಹುದುಗಿಸಿಕೊಳ್ಳುತ್ತಾಳೆ. ಹೀಗೆ ಕೆಳ ಹಾಗೂ ಮಧ್ಯಮ ವರ್ಗದ ಮಹಿಳೆಯರು ತಮ್ಮ ದೇಹಸ್ಥಿತಿಯ ಮೇಲೆ ತಮಗೇ ಅಧಿಕಾರವಿರದೆ, ಕುಟುಂಬ ವ್ಯವಸ್ಥೆಯ ಸಂಪೂರ್ಣ ನಿಯಂತ್ರಣಕ್ಕೆ ಒಳಗಾಗಿದ್ದಾರೆ. ಈ ಕೌಟುಂಬಿಕ ಚೌಕಟ್ಟಿನಲ್ಲಿ ಬದುಕುವ ಮಹಿಳೆಯರು ಸಂಕಷ್ಟಗಳನ್ನು ನುಂಗಿಕೊಂಡು ಜೀವಿಸುವ ಜೀವನ ಪ್ರೀತಿವುಳ್ಳವರೇ ವಿನಾ, ಇದನ್ನು ಮೀರುವ ಸಾಹಸಿಗರಲ್ಲ. ಆದರೆ ವಿನಾಕಾರಣ ಗಂಡನಿಂದ ಅಪಮಾನಿತರಾಗಿ ಆ ಕುಟುಂಬದಿಂದ ಹೊರದೂಡಲ್ಪಟ್ಟವರು. ಹೀಗೆ ತಿರಸ್ಕೃತಗೊಂಡ ಅವರು ಕೊರಗುವವರಲ್ಲ, ಬದಲಾಗಿ ತಮ್ಮ ವೈಯಕ್ತಿಕ ಸಾಮರ್ಥ್ಯದಿಂದ ಬದುಕನ್ನು ಕಟ್ಟಿಕೊಳ್ಳುವವರು. ಆದರೆ ಈ ಬದುಕು ಅವರಿಗೆ ಕ್ಷಣಿಕ.




## ಹೊಸತು ೨೦೧೬ ಜನವರಿ ಸಂಚಿಕೆ

### ಓದುಗರ ವೇದಿಕೆ

ಆತ್ಮೀಯ ಓದುಗರಿಗೆ,

ಇತ್ತೀಚಿನ ದಿನಗಳಲ್ಲಿ ಮರಣದಂಡನೆ ಕುರಿತು ವ್ಯಾಪಕವಾದ ಚರ್ಚೆಯಾಗುತ್ತಿದೆ. ಎಂಥದೇ ಅಪರಾಧವಿದ್ದರೂ ಜೀವ ತೆಗೆವ ಕಾನೂನು ಇರಬಾರದು ಎನ್ನುವುದು ಒಂದು ವಾದವಾದರೆ, ಹೀನ ಅಪರಾಧ ಮಾಡಿದವರಿಗೆ ಮರಣದಂಡನೆಯೇ ಸೂಕ್ತ ಎನ್ನುವುದು ಇನ್ನೊಂದು ವಾದವಿದೆ. ನಮ್ಮ ದೇಶದ ಕಾನೂನು ವ್ಯವಸ್ಥೆಯಲ್ಲಿ ಈಗಿರುವ ಮರಣದಂಡನೆಯ ಶಿಕ್ಷೆ ಮುಂದೆಯೂ ಇರಬೇಕೆ – ಬೇಡವೇ ಎನ್ನುವ ಕುರಿತು, ತಮ್ಮ ಅಧ್ಯಯನಪೂರ್ಣವಾದ ಲೇಖನವನ್ನು ೨೫೦ ಪದಗಳಿಗೆ ಮೀರದಂತೆ ಡಿಸೆಂಬರ್ ೧೦ರೊಳಗೆ ಹೊಸತು ವಿಶೇಷ ಸಂಚಿಕೆಯ 'ಓದುಗರ ವೇದಿಕೆ'ಗೆ ಕಳುಹಿಸಬೇಕಾಗಿ ವಿನಂತಿ. –ಸಂ.

ವಿನಾ ಕಾರಣ ತಿರಸ್ಕೃತರಾದಂತೆ ಪತಿಯಿಂದ ಕರೆ ಬಂದಾಗ ಅನಿವಾರ್ಯವಾಗಿ ಆ ಕುಟುಂಬಕ್ಕೆ ಹಿಂತಿರುಗಲೇಬೇಕಾಗುವ ಪರಿಸ್ಥಿತಿಯಿದೆ. ಇದಕ್ಕೆ ವಿರುದ್ಧವಾಗಿ ಪತಿಯ ಕರೆಯನ್ನು ನಿರಾಕರಿಸಿದಾಗ ತಂದೆಯ ಕುಟುಂಬದಿಂದ ಹಾಗೂ ಸಮಾಜದಿಂದಲೂ ನಿಂದನೆಗೆ ಒಳಗಾಗಿ ಬದುಕುವ ಮಹಿಳೆ "ಸೀತೆಯಂತೆ ಬಾಳಿ ಬದುಕು" ಅಂದಿದ್ದ ಇವರ್‍ಯಾರಿಗೂ ಈಗ, "ನಾನು 'ಸೀತೆ'ಯಾಗಿ ಗೆಲ್ಲೋದು ಬೇಕಿಲ್ಲ !" ಎಂಬ ಮಾತು ಮಹಿಳೆಯ ಅತಂತ್ರ ಸ್ಥಿತಿಯನ್ನು ಬಯಲು ಮಾಡುತ್ತದೆ. ಮಹಿಳೆಯ ಬದುಕಿನಲ್ಲಿ ನೈತಿಕತೆ ಪ್ರಾಮುಖ್ಯತೆ ಪಡೆದು, ಅದನ್ನು ಚಾಚೂ ತಪ್ಪದೆ ಪಾಲಿಸಿಕೊಂಡು ಬದ್ಧತೆಯಿಂದಲೇ ಬದುಕಬೇಕಾಗಿದೆ. ಆದರೆ ಈ ನೈತಿಕತೆಯ ಪ್ರಶ್ನೆ ಪುರುಷರಿಗೆ ಸಹಜವಾಗಿದೆ. ಇದನ್ನು ಪ್ರಶ್ನಿಸಿ ಬದುಕುವ ಸಾಮರ್ಥ್ಯ ಸುಶಿಕ್ಷಿತ ಉದ್ಯೋಗಸ್ಥ ಮಹಿಳೆಗೂ ಸಾಧ್ಯ ವಾಗುವುದಿಲ್ಲ. ಕಾರಣ "ಒಂಟಿ ಜೀವನ ಸಂಭಾಳಿಸೋದು ಕಷ್ಟ!!" ಎಂತಲೂ ಇದಕ್ಕೆ ಪರ್ಯಾಯವಾಗಿ ತಂದೆ ಕುಟುಂಬದವರೇ, "ಈಗ ಅದೆಲ್ಲ ಕಾಮನ್ನು ಮಗಳೇ, ಹೇಗೂ ದುಡೀತಿ, ನಿನ್ನ ಪಾಡಿಗೆ ಏನೂ ಸಂಬಂಧವಿಲ್ಲ ಅಂತ ಇದ್ದುಬಿಡು. ವಾಪಸು ಮಾತ್ರ ಬರಬೇಡವೆ ತಾಯಿ" ಎಂಬ ಗಂಡಸಿನ ಅನೈತಿಕತೆ ಕುಟುಂಬದಿಂದ, ಸಮಾಜದಿಂದ ಒಪ್ಪಿತವಾಗಿ ಸಹಜವಾದಾಗ ಅನ್ಯದಾರಿ ಇಲ್ಲದೆ ಆ ಕುಟುಂಬವನ್ನೇ ನೆಚ್ಚಿಕೊಂಡು 'ಎಂದೆಂದೂ ಮುಗಿಯದ ಕತೆ' ಶೀರ್ಷಿಕೆಯಂತೆ ಸಂಘರ್ಷದಲ್ಲಿ ತೊಡಗಿರುವ ಮಹಿಳೆಯ ಅನಾವರಣವಿದೆ. ಇಲ್ಲಿನ ಭಾಮಿನಿಯರು ತಮ್ಮ ಸಂಗಾತಿಯಿಂದ ಬಯಸುವುದು "ಮುತ್ತಂಥ ನಾಲ್ಕು ಮಾತಾಗಿ ಬಾ" ಎಂಬ ಮಾತಿನ ಹಿಂದೆ ಮಾನಸಿಕ ನೆಮ್ಮದಿಗಾಗಿ ಹಪಹಪಿಸುವವರು. ಈ ಪ್ರೀತಿಗಾಗಿ ತಾಳ್ಮೆಯಿಂದ ನಿರೀಕ್ಷಿಸುವವರು. ಅದು ದೊರಕದಾದಾಗ ಶಕ್ತಿ ಮೀರಿ ಪ್ರಯತ್ನಿಸುವರು. ಕೊನೆಗೂ ದಕ್ಕದಿದ್ದಾಗ ಆ ಕುಟುಂಬವನ್ನು ಮೀರಿ ಮಾನಸಿಕ ನೆಮ್ಮದಿಗಾಗಿ ತುಡಿಯುತ್ತ ಅದನ್ನು ಸಾಕಾರಗೊಳಿಸುವ ಜೀವನ ಪ್ರೀತಿಯುಳ್ಳ ಮಹಿಳೆ ಪಾತ್ರವನ್ನು 'ಎಂಥಾ ಉದಾರಿ ಗಂಡ' ಕತೆಯಲ್ಲಿ ನಿರೂಪಿಸಲಾಗಿದೆ. ಹೀಗೆ ಮಹಿಳೆ ಕುಟುಂಬವನ್ನು ತೊರೆಯುವ ಮುಖಾಂತರ ತನ್ನ ಜವಾಬ್ದಾರಿಯನ್ನು ವಿಸ್ತರಿಸಿಕೊಂಡು ಬದುಕಬೇಕಾಗಿದೆ. ಆದರೆ ಗಂಡಸರಿಗೆ ಕುಟುಂಬವನ್ನು ತೊರೆಯಲು ಕಾರಣಗಳಿಲ್ಲ. ಅವರು ಹೀಗೆ ಕುಟುಂಬಬಾಹಿರರಾಗಿ ಬದುಕುವುದು ಜವಾಬ್ದಾರಿಯಿಂದ ತಪ್ಪಿಸಿಕೊಳ್ಳಲು. ಅದು ಸಹಜವೂ, ಒಪ್ಪಿತವೂ ಆಗಿದೆ. ಆದರೆ, ಮಹಿಳೆಗೆ ಈ ಆಯ್ಕೆಗಳಿರುವುದಿಲ್ಲ. ಗಂಡನ ಹೊರತಾಗಿಯೂ ಎಲ್ಲ ಜವಾಬ್ದಾರಿಯನ್ನು ನಿಭಾಯಿಸುವ ಮಹಿಳೆಗೆ "ಹಿತ್ತಿಲ ಬಾಗಿಲಲ್ಲಿ ಕುಂತು, ಅಪ್ಪನ ದಾರಿ ಕಾಯುತ್ತ" ಕೊರಗುವ ಮಕ್ಕಳನ್ನು ನಿಭಾಯಿಸುವಲ್ಲಿ ಅಸಹಾಯಕ ಸ್ಥಿತಿಯ ಧ್ವನಿಯಿದೆ. ಇದಕ್ಕೆ ಪ್ರತಿಯಾಗಿ ಯಶೋಧರೆ ಪತಿಗೆ ರಾಹುಲನ ಜವಾಬ್ದಾರಿಯನ್ನು ಒಪ್ಪಿಸುವ ಮೂಲಕ ಪುರುಷನು ಕುಟುಂಬದಲ್ಲಿ ನಿರ್ವಹಿಸಬೇಕಾದ ಕರ್ತವ್ಯವನ್ನು ನೆನಪಿಸುವಂತಿದೆ. ಸ್ತ್ರೀ-ಪುರುಷರ




ನಡುವೆ ಆಹಾರ ಪದಾರ್ಥಗಳಲ್ಲಿನ ವ್ಯತ್ಯಾಸ ಪರಸ್ಪರ ಭಿನ್ನಾಭಿಪ್ರಾಯಕ್ಕೆ ಕಾರಣವಾಗಿ ಕುಟುಂಬದ ಶಾಂತಿಯನ್ನು ಕದಡಿ ಸಾವಿಗೆ ಶರಣಾಗುವ ಮಹಿಳೆಗಿಂತ 'ಸಾಯ್ತಿನೀ' ಅಂಥ ಎದುರಿಸುತ್ತಲೇ ಬದುಕುವ 'ಸಾಯಿ ಹೋಗು' ಅನ್ನುತ್ತಲೇ ಉಳಿಸಿಕೊಳ್ಳುವ ಪರಸ್ಪರ ಅನ್ಯೋನ್ಯತೆಯಿಂದ ಬದುಕುವ ಕುಟುಂಬವನ್ನು ಕಟ್ಟಿಕೊಡುವುದು ಲೇಖಕಿಯ ಉದ್ದೇಶದಂತಿದೆ.

ಹೆಣ್ಣು ಪತಿಯನ್ನು ಕಳೆದುಕೊಂಡು ಮರುವಿವಾಹಕ್ಕೆ ಒಪ್ಪುವುದು ಈ ದಿನಗಳಲ್ಲಿ ಸಹಜ. ಆದರೆ, ಅದು ಭದ್ರತೆಯ ನಿರೀಕ್ಷೆಯಿಂದ. ಹೀಗೆ ಒಂದು ಹೆಣ್ಣು ಸುರಕ್ಷತೆಯನ್ನು ಕಾಣುವುದು ಕುಟುಂಬದಿಂದ. ಆದರೆ ಅಪ್ಪನಂತಹ ವಯಸ್ಸಿನ ಪತಿಯನ್ನು ಪಡೆದು ತನ್ನದೇ ವಯಸ್ಸಿನ ಮಗನಿಗೆ ತಾಯಿಯಾಗಿ ಸಹಜ ಆಕಾಂಕ್ಷೆಗಳನ್ನು ಬಿಟ್ಟು ಬದುಕಲು ಸಾಧ್ಯವಾಗದೆ ಪುನಃ ಸಮಾಜ ಹಾಗೂ ಕುಟುಂಬದಿಂದ ಅಪಮಾನಿತಳಾಗುತ್ತಾಳೆ. ಇದಕ್ಕೆ ಸಮಾನವಾಗಿ ತಪ್ಪಿತಸ್ಥನಾದ ಪುರುಷನು ತಾನೂ ಬಯಸಿದಂತೆ ಪಡೆಯುವ ಇಲ್ಲವೆ ತಿರಸ್ಕರಿಸಿ ಪಲಾಯನವಾದಿಯಂತೆ ಬದುಕುವುದು ಸಹಜವಾಗಿದೆ. ಆದರೆ ಈ ಸಹಜತೆ ಸ್ತ್ರೀಗೆ ಇಲ್ಲದೆ "ಹೇಳೇ... ಎದೆಯೆತ್ತರದ ವೇದವ್ಯಾಸ ಮಗನಲ್ಲವೇನೆ !?" ಎಂಬ ಧ್ವನಿಯಲ್ಲಿ ವ್ಯಂಗ್ಯವನ್ನು ಕಾಣಬಹುದು. ಇದಕ್ಕೆ ಭಿನ್ನವಾಗಿ 'ಚುಕ್ಕಿ ಚಿತ್ತಾರವಾಗುವುದು ಹೀಗೆ...' ಕತೆಯಲ್ಲಿ ಪತಿಯನ್ನು ಕಳೆದುಕೊಂಡು ಮರುವಿವಾಹ ವಾಗದೆ ತನ್ನ ಸ್ವಸಾಮರ್ಥ್ಯದಿಂದ ಬದುಕನ್ನು ಕಟ್ಟಿಕೊಂಡು ಆ ಕುಟುಂಬದ ಹೊಣೆಯನ್ನು ಹೊತ್ತು ಸಮರ್ಥವಾಗಿ ನಿರ್ವಹಿಸುತ್ತ ಆ ಮೂಲಕ ಜೀವನ ಪ್ರೀತಿಯನ್ನು ಕಾಣುವ ವಿಧವೆ ಪಾತ್ರವಿದೆ. ಕೌಟುಂಬಿಕ ಬಂಧನದ ಯಾವುದೇ ಕಟ್ಟುಪಾಡುಗಳಿಗೆ ಒಳಗಾಗದೆ ಬದುಕುವ ಸ್ತ್ರೀ-ಪುರುಷ ಸಂಬಂಧಗಳು ಕೊನೆಗೆ ಅಧಿಕೃತವಾಗಿ ಈ ನಿಯಮಗಳನ್ನು ಗೊತ್ತಿದ್ದೂ ಗೊತ್ತಿಲ್ಲದೆಯೆ ಅನುಸರಿಸುತ್ತ ಕಷ್ಟಗಳನ್ನು ಸಹಿಸುವ ಪರಿ 'ಸಂಸಾರವೆಂಬ ಹೆಣ' ಕತೆಯಲ್ಲಿ ಮೂಡಿಬಂದಿದೆ.

ಹೀಗೆ ಮೇಲಿನ ಬಹುಪಾಲು ಕತೆಗಳಲ್ಲಿ ಮಹಿಳೆಯರ ಕಷ್ಟಗಳಿಗೆ ಪುರುಷರನ್ನು ಗುರಿಯಾಗಿಸುವ ಲೇಖಕಿ 'ಹೀಗೂ ಒಂದು ನಿವೇದನೆ' ಕತೆಯಲ್ಲಿ ಮಹಿಳೆ ಎಡವಿದಾಗ, ಪರಸ್ಪರ ವೈಯಕ್ತಿಕ ತಪ್ಪನ್ನು ಅರಿತು ಜವಾಬ್ದಾರಿಯಿಂದ ಕುಟುಂಬವನ್ನು ನಿರ್ವಹಿಸುವ ಪುರುಷನ ಮನೋಭಾವನೆಯಿದೆ. ಹೀಗೆ ಹೆಣ್ಣು ಒಂದಲ್ಲ ಒಂದು ಕಾರಣದಿಂದ ತೊಂದರೆಗೀಡಾಗಿ ಬದುಕುತ್ತಿದ್ದು ಈ ಸಂಕಷ್ಟಗಳಿಂದ ಹೊರಬರಲು ಕೌಟುಂಬಿಕ ಕಾಯ್ದೆಯಂತಹ ಪರ್ಯಾಯ ದಾರಿಗಳಿದ್ದರೂ ಅದರ ಬಗ್ಗೆ ಸಾಕಷ್ಟು ತಿಳಿದೋ ತಿಳಿಯದೆಯೋ ಪತಿಯ ಎಲ್ಲಾ ತಪ್ಪುಗಳನ್ನು ಕ್ಷಮಿಸಿ ಕಷ್ಟಕ್ಕೆ ಈಡಾಗಿ ಬದುಕುವ ಮುಗ್ಧ ಮಹಿಳೆಯ ಮೌಢ್ಯವನ್ನು ಬಿಂಬಿಸುವ ಕಥೆ 'ಅಣಕಿಸುವ ಸಹಾಯವಾಣಿ ನಂಬರ್.'

ಚೇತನಾ ಅವರು ಮಹಿಳೆಯ ಬದುಕಿನ ಯಾತನೆಯನ್ನು ಹೇಳಲು ತಮ್ಮದೇ ಆದ ಹೊಸ ಕಥನಕ್ರಮವನ್ನು ರೂಪಿಸಿಕೊಂಡಿದ್ದಾರೆ. 'ಭಾಮಿನಿ ಷಟ್ಪದಿ' ಕವಿತೆಯೂ ಹೌದು, ಕತೆಯೂ ಹೌದು. ಕೆಲವು ಕತೆಗಳಲ್ಲಿ ಕವಿತೆಯ ಸಾಲುಗಳನ್ನು ತಂದಿರುವುದು ವಿಶೇಷ ಕಥನ ಮಾದರಿಗೆ ಉದಾಹರಣೆಯಂತಿದೆ. ಕತೆಯ ವಿನ್ಯಾಸ ಒಂದು ಒಂದುವರೆ ಪುಟದಲ್ಲಿ ಹೆಣ್ಣಿನ ವಿಚಾರಗಳನ್ನು ಕುರಿತು ಹೇಳುವ ಕ್ರಮ ಭಿನ್ನವಾಗಿದೆ. ಕತೆಯ ನಿರೂಪಣೆಯಲ್ಲಿ ಹೆಚ್ಚು ವಿವರಗಳಾಗಲಿ, ಸಂಭಾಷಣೆಗಳಾಗಲಿ ಹಾಗೂ ಸನ್ನಿವೇಶಗಳಾಗಲಿ ಅಷ್ಟಾಗಿ ಕಾಣದೆ ಪಾತ್ರಗಳ ಹೆಸರು ಅಲ್ಲೊಂದು ಇಲ್ಲೊಂದು ಎಂಬಂತೆ ಇದ್ದು ಅವನು, ಅವಳು ಎಂಬ ಸರ್ವನಾಮಗಳಲ್ಲಿ ಕತೆಯ ನಿರೂಪಣೆ ಇದೆ. ಈ ಮೇಲಿನ ಬಹುಪಾಲು ಕತೆಗಳಲ್ಲಿ ಲೇಖಕಿ ಭಾಮಿನಿಯ ಬದುಕಿನ ಯಾತನೆಯನ್ನು ಕುರಿತು ಚಿಂತಿಸಿದ್ದಾರೆ. ಈ ಎಲ್ಲ ಕತೆಗಳಲ್ಲಿ ಲೇಖಕಿ ಪರಕಾಯ ಪ್ರವೇಶ ಮಾಡಿದಂತೆ ನಿರೂಪಣೆಯಿದ್ದು ಒಂದು ಹೆಣ್ಣು ಕುಟುಂಬದ ಒಳಗೆ ಅನುಭವಿಸುವ ಯಾತನೆಯನ್ನು ಚಿಕ್ಕ ಚಿಕ್ಕ ಘಟನೆಗಳ ಮೂಲಕ ನಿರೂಪಿಸುವ ಧ್ವನಿಯಿದೆ. ಆದರೆ ಹೆಣ್ಣಿನ ಬದುಕಿನ ಯಾತನೆಯನ್ನು ಕುರಿತು ಚಿಂತಿಸುವ ಲೇಖಕಿ ಆ ಕುಟುಂಬದಲ್ಲಿ ಹೆಣ್ಣಿಗೆ ಪುರುಷರಿಂದ ದೊರೆಯುವ ಸಂತೋಷದ ಕ್ಷಣಗಳನ್ನು ಚಿತ್ರಿಸಿಲ್ಲ. ಹೆಣ್ಣಿನ ಈ ಎಲ್ಲಾ ಬವಣೆಗಳಿಗೆ ಪುರುಷನನ್ನೇ ಗುರಿಯಾಗಿಸಿದ್ದು, ಇದಕ್ಕೆ ಭಿನ್ನವಾದ ಪುರುಷ ಪಾತ್ರಗಳು ಇಲ್ಲಿ ಒಡಮೂಡದೇ ಹೋಗಿವೆ. ಚೇತನಾ ಅವರ ಭಾಮಿನಿ ಷಟ್ಪದಿ ಮಹಿಳೆಯರು ಕುಟುಂಬದಲ್ಲಿ ಅನುಭವಿಸುವ ಅತ್ಯಂತ ಸೂಕ್ಷ್ಮ ಯಾತನೆಯನ್ನು ಬಯಲುಗೊಳಿಸಿ ಆ ಮೂಲಕ ಹೊಸ ಚಿಂತನೆಯನ್ನು ಮೂಡಿಸುವಂತಿವೆ. ಇಲ್ಲಿನ ಎಲ್ಲಾ ಕತೆಗಳು ಬಿಡಿ ಬಿಡಿ ಚಿತ್ರಗಳಂತಿದ್ದು, ಕತೆಯ ತಿರುಳು ಸ್ಫೋಟಗೊಳ್ಳುವುದು ಕೊನೆಯ ಸಾಲುಗಳಲ್ಲಿ. ಹೀಗೆ ವಿಭಿನ್ನವಾಗಿ ಕತೆಯನ್ನು ನಿರೂಪಿಸುವ ಕಲೆ ಚೇತನಾ ಅವರಿಗೆ ಸಿದ್ಧಿಸಿದೆ.

**ಶಕೀಲಾ ಕೆ.**
ಪಿಎಚ್.ಡಿ. ಸಂಶೋಧನಾ ವಿದ್ಯಾರ್ಥಿ
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ
ಹಂಪಿ ವಿದ್ಯಾರಣ್ಯ – ೫೮೩ ೨೭೬, ಬಳ್ಳಾರಿ ಜಿಲ್ಲೆ

# ಸಿರಿಯಾ ಅಂತರ್ಯುದ್ಧ ಸೃಷ್ಟಿಸಿರುವ ನಿರಾಶ್ರಿತರ ಸಮಸ್ಯೆ

**ಸಿ**ರಿಯಾದಲ್ಲಿ ರಷ್ಯಾದ ಪ್ರವೇಶ, ಯುರೋಪಿಗೆ ನಿರಾಶ್ರಿತರ ಪ್ರವಾಹ ಎರಡೂ ಅಂತರರಾಷ್ಟ್ರೀಯ ಕ್ಷೇತ್ರದಲ್ಲಿನ ಇತ್ತೀಚಿನ ವಿದ್ಯಮಾನ. ಸಿರಿಯಾ–ಇರಾಕ್ ಗಡಿಯಲ್ಲಿ ಸಾಕಷ್ಟು ಭೂಮಿಯನ್ನು ಆಕ್ರಮಿಸಿಕೊಂಡು ಇಸ್ಲಾಮಿಕ್ ರಾಜ್ಯದ ಸ್ಥಾಪನೆಗೆ ಮುಂದಾಗಿರುವ ನಾನಾ ಬಣ್ಣದ ಉಗ್ರಗಾಮಿಗಳ ಉಪಟಳ ನಿರಂತರವಾಗಿ ಸಾಗಿದೆ. ಅಮೆರಿಕದ ಸಿಐಎ ಅಂದಾಜಿನಂತೆ ೨೦ರಿಂದ ೩೦ ಸಾವಿರ ಉಗ್ರಗಾಮಿ ಪಡೆ ನಡೆಸುತ್ತಿರುವ ಸಮರ ಪಶ್ಚಿಮ ಏಶಿಯದಲ್ಲಿ ಮತ್ತು ಪ್ರಪಂಚದಲ್ಲಿ ಭಾರಿ ಅವಾಂತರ ಸೃಷ್ಟಿಸಿದೆ. ಇದಕ್ಕೆ ಪ್ರಪಂಚದ ನಾನಾ ಭಾಗಗಳಿಂದ ಉಗ್ರರು ಬಂದು ಸೇರಿಕೊಳ್ಳುತ್ತಿದ್ದಾರೆ. ಈ ಅಂತರ್ಯುದ್ಧ ಪರಿಸ್ಥಿತಿ ನಿರ್ಮಾಣವಾದದ್ದು ಈ ಶತಮಾನದ ಬೆಳವಣಿಗೆ ಮತ್ತು ಅಮೆರಿಕ ಮಧ್ಯ ಏಶಿಯದಲ್ಲಿ ತನ್ನ ಆಧಿಪತ್ಯ ಸ್ಥಾಪಿಸಲು ನಡೆಸಿದ ಪ್ರಯತ್ನ. ಈಗ ಈ ಬೆಳವಣಿಗೆ ಅಮೆರಿಕಾಗೆ ಅದರ ಬೆಂಗಲಿಗ ಪಾಶ್ಚಾತ್ಯ ರಾಷ್ಟ್ರಗಳಿಗೇ ತಿರುಗೇಟಾಗಿ ಪರಿಣಮಿಸಿದೆ. ಪಶ್ಚಿಮ ಏಶಿಯದಲ್ಲಿ ಇಸ್ರೇಲಿನ ಸೃಷ್ಟಿಯಿಂದ ಪ್ರಾರಂಭವಾದ ತಳಮಳ ಈಗಲೂ ಮುಂದುವರಿಯುತ್ತಿದೆ. ಇರಾಕಿನಲ್ಲಿ ಸದ್ದಾಮ್ ಆಡಳಿತೆಯನ್ನು ಅಂತ್ಯಗೊಳಿಸಲು ಅಮೆರಿಕ ನಡೆಸಿದ ದಾಳಿಯ ಬೆಂಕಿ ಇನ್ನೂವರೆಗೆ ಆರಿಲ್ಲ. ಒಂದು ಕಾಲದಲ್ಲಿ ಸುಸ್ಥಿರವಾಗಿದ್ದ ಇರಾಕ್ ಈಗ ಅಲ್ಲೋಲಕಲ್ಲೋಲವಾಗಿದೆ. ಇದರ ಬೆನ್ನಲ್ಲೇ ‘ಅರಬ್ ವಸಂತ’, ‘ಪಿಂಕ್’ ಹಾಗೂ ‘ಆರೆಂಜ್’ ಕ್ರಾಂತಿ ಸೃಷ್ಟಿಸಿದ ಆತಂಕ ಇನ್ನೊಂದೆಡೆ. ಇದರ ಪ್ರಯೋಜನ ಪಡೆದುಕೊಳ್ಳಲೆಂದೇ ಅಮೆರಿಕ ಪಶ್ಚಿಮ ಏಶಿಯದಲ್ಲಿ ತನಗೆ ವಿರೋಧವಿದ್ದ ಆಡಳಿತಗಳನ್ನು ಪದಚ್ಯುತಗೊಳಿಸಲು ಹೊರಟದ್ದು, ಲಿಬಿಯಾದ ಗದಾಫಿ ಪತನದ ನಂತರ ಸಿರಿಯಾದಲ್ಲಿ ಅಸ್ಸಾದ್ ಆಳ್ವಿಕೆಯನ್ನು ಅಂತ್ಯಗೊಳಿಸಲು ಇಸ್ಲಾಮಿಕ್ ಉಗ್ರಗಾಮಿಗಳನ್ನು ಬೆಂಬಲಿಸಿದ್ದು. ಹತ್ತಾರು ವರ್ಷಗಳ ಹೊಯ್ದಾಟದ ನಂತರ ಇರಾನ್ ಈಗ ಅಮೆರಿಕದೊಂದಿಗೆ ಒಪ್ಪಂದ ಮಾಡಿಕೊಂಡು ಸದ್ಯಕ್ಕೆ ಅಮೆರಿಕ ದಾಳಿಯಿಂದ ಪಾರಾಗಿದೆ. ಭಯೋತ್ಪಾದನೆಯ ವಿರುದ್ಧವಾಗಿ ಸಮರ ಸಾರಿದ ಅಮೆರಿಕ ಅನುಸರಿಸಿದ ದುರಾಕ್ರಮಣ ನೀತಿಯೇ ಇಂದು ಇಸ್ಲಾಮಿಕ್ ರಾಜ್ಯಸ್ಥಾಪನೆಗೆ ಹೊರಟಿರುವ ಉಗ್ರರಿಗೆ ಮೂಲ. ಅವರಿಗೆ ಎಲ್ಲಾ ರೀತಿಯ ಬೆಂಬಲ ನೀಡಿದ್ದು ಕೂಡ ಅಮೆರಿಕ.

ರಾಜಕೀಯವಾಗಿ ಸುಸ್ಥಿರವಾಗಿದ್ದ ದೇಶ ಸಿರಿಯಾ ೨೦೧೧ರವರೆಗೆ ಅಧ್ಯಕ್ಷ ಬಷೀರ್ ಅಲ್ ಅಸ್ಸಾದ್ ಆಡಳಿತವನ್ನು ಪದಚ್ಯುತಗೊಳಿಸಲು ಎದುರಾಳಿಗಳಿಗೆ ಹಣ, ಶಸ್ತ್ರಾಸ್ತ್ರ ಒದಗಿಸಿದ್ದೇ ಇಂದಿನ ಅನಾಹುತಕ್ಕೆ ಕಾರಣ. ದೇಶದಲ್ಲಿರುವ ಅಂತರ್ಯುದ್ಧ ಪರಿಸ್ಥಿತಿಗೆ ಅಮೆರಿಕವೇ ನೇರವಾಗಿ ಹೊಣೆ. ಸೋವಿಯತ್ ಆಡಳಿತೆಯ ಕಾಲದಿಂದಲೂ ರಷ್ಯಾ ಸಿರಿಯಾದ ಆಡಳಿತಕ್ಕೆ ಬೆಂಬಲ ನೀಡುತ್ತಿದೆ. ಈಗ ಸಿರಿಯಾದ ಅಧ್ಯಕ್ಷರ ಬೆಂಬಲಕ್ಕೆ ರಷ್ಯಾ ಪ್ರವೇಶಿಸಿದೆ. ಇಸ್ಲಾಮಿಕ್ ರಾಜ್ಯಸ್ಥಾಪಕರ ವಿರುದ್ಧವಾಗಿ ಅದು ನಡೆಸುತ್ತಿರುವ ವೈಮಾನಿಕ ದಾಳಿ ಇಡೀ ಪ್ರದೇಶದಲ್ಲಿ ಹೊಸ ಪರಿಸ್ಥಿತಿ ನಿರ್ಮಾಣ ಮಾಡಿದೆ. ಹೊಸ ಸಂಚಲನ ನೀಡಿದೆ. ಮುಸಲ್ಮಾನರು ಮತ್ತು ಸಾಕಷ್ಟು



ಪರದಾಡುತ್ತಿರುವ ನಿರಾಶ್ರಿತರು



ಅಸ್ಸಾದ್



ಪುಟಿನ್

ಸಂಖ್ಯೆಯಲ್ಲಿರುವ ಕ್ರಿಶ್ಚಿಯನ್ನರು ಸಹಜೀವನ ನಡೆಸುತ್ತಿದ್ದ ದೇಶ ಸಿರಿಯಾ. ಅದು ಈಗ ಇಸ್ಲಾಮಿಕ್ ರಾಜ್ಯಸ್ಥಾಪನೆಗೆ ಹೊರಟಿರುವ ಉಗ್ರರನ್ನು ಎದುರಿಸುತ್ತಿದೆ. ಇಡೀ ಬೆಳವಣಿಗೆಯಲ್ಲಿ ಪರಿತಪಿಸುತ್ತಿರುವವರು ಸಾಮಾನ್ಯ ಜನ. ಬಾಂಬು ದಾಳಿಯಲ್ಲಿ ನಲುಗಿ ಅಸು ನೀಗುತ್ತಿರುವವರು ಅಮಾಯಕ ಜನ. ಕಳೆದ ಒಂದು ವರ್ಷದಲ್ಲಿ ಅಮೆರಿಕ ಹೆಚ್ಚುಕಡಿಮೆ ೭,೦೦೦ ವೈಮಾನಿಕ ದಾಳಿ ನಡೆಸಿದೆ. ಈ ಅಂತರ್ಯುದ್ಧದ ಬೇಗೆಯನ್ನು ತಾಳಲಾರದೆ ಜನ ದೊಡ್ಡ ಪ್ರಮಾಣದಲ್ಲಿ ನಿರಾಶ್ರಿತರಾಗಿ ನೆರೆರಾಷ್ಟ್ರಗಳಿಗೆ, ಮುಖ್ಯವಾಗಿ ಯುರೋಪಿಗೆ ವಲಸೆ ಹೋಗುತ್ತಿದ್ದಾರೆ. ಈವರೆಗೆ ಯುರೋಪಿಗೆ ೧೨೦,೦೦೦ ಜನ ನಿರಾಶ್ರಿತರಾಗಿ ಪ್ರವೇಶಿಸಿದ್ದಾರೆ. ಇದು ಐರೋಪ್ಯ ರಾಷ್ಟ್ರಗಳ ಒಕ್ಕೂಟಕ್ಕೇ ಆತಂಕವುಂಟುಮಾಡಿದೆ. ವಲಸೆಗಾರರು ಹೇಗೋ ಟರ್ಕಿ ಪ್ರವೇಶಿಸಿ ಅಲ್ಲಿಂದ ದೋಣಿಗಳಲ್ಲಿ ಯುರೋಪಿಗೆ ತಲುಪುವುದು ವಾಡಿಕೆ. ಈ ಸಾಹಸದಲ್ಲೇ ಸಾವಿರಾರು ಮಂದಿ ನಿರಾಶ್ರಿತರು ನೀರುಪಾಲಾಗಿದ್ದಾರೆ. ಪೂರ್ವ ಯುರೋಪಿನಿಂದ ಪಶ್ಚಿಮಕ್ಕೆ ಹೋಗುವುದು ಗುರಿ. ಈಗಾಗಲೇ ನಿರುದ್ಯೋಗ, ಹಣಕಾಸಿನ ಹದಗೆಟ್ಟ ಪರಿಸ್ಥಿತಿಯಿಂದ ಪರಿತಪಿಸುತ್ತಿರುವ ಯುರೋಪಿನ ದೇಶಗಳಿಗೆ ನಿರಾಶ್ರಿತರು ದೊಡ್ಡ ಹೊರೆಯಾಗಿ ಪರಿಣಮಿಸಿದ್ದಾರೆ.

ನಿರ್ದಿಷ್ಟ ಸಂಖ್ಯೆಯಲ್ಲಿ ನಿರಾಶ್ರಿತರನ್ನು ಅಂಗೀಕರಿಸಲು ಯುರೋಪಿನ ದೇಶಗಳು ಒಪ್ಪಿವೆ. ಹಾಗಿದ್ದರೂ ದುರಂತಕ್ಕೀಡಾಗಿರುವ ನಿರಾಶ್ರಿತರ ಪಾಡು ವರ್ಣಿಸಲಾಗದು. ಹಸಿವು, ರೋಗರುಜಿನಗಳು, ಗಡಿಯಲ್ಲಿ ದಿನಗಟ್ಟಲೆ ಕಾಯುವ ದುಸ್ಥಿತಿ ಮಾತ್ರ ತಪ್ಪಿದ್ದಲ್ಲ. ರಷ್ಯಾದ ಮಧ್ಯಪ್ರವೇಶದಿಂದ ಪರಿಸ್ಥಿತಿ ಸಾಕಷ್ಟು ದೀರ್ಘಕಾಲ ಎಳೆಯುವ ಸೂಚನೆ ಇದೆ. ಅಮೆರಿಕ ಈಗಲಾದರೂ ಸಿರಿಯಾದಲ್ಲಿ ಆಡಳಿತವನ್ನು ಬದಲಿಸುವ ಗುರಿಯನ್ನು ಬದಿಗೊತ್ತಿ ಸಹಕರಿಸುವುದು ಯುಕ್ತ. ಸಮಸ್ಯೆಯನ್ನು ಬಗೆಹರಿಸಲು ಸಂಬಂಧಪಟ್ಟ ಪಕ್ಷಗಳನ್ನು ಸೇರಿಸಿ ಸಂಧಾನದ ಮೂಲಕ ಇತ್ಯರ್ಥಗೊಳಿಸಲು ಮಾರ್ಗ ಅರಸುವುದು ಅಗತ್ಯ. ಹಾಗಾದಾಗ ಮಾತ್ರ ಪರಿಸ್ಥಿತಿ ಸುಧಾರಿಸೀತು. ಈಗಾಗಲೇ ಇಸ್ಲಾಮಿಕ್ ಉಗ್ರರು ಸಿರಿಯಾ ಮತ್ತು ಇರಾಕ್‌ಗಳಲ್ಲಿ ಸಾಕಷ್ಟು ಪ್ರದೇಶವನ್ನು ಆಕ್ರಮಿಸಿಕೊಂಡಿದ್ದಾರೆ. ಐತಿಹಾಸಿಕ ಸ್ಮಾರಕಗಳನ್ನು ಧ್ವಂಸಗೊಳಿಸಿದ್ದಾರೆ. ಉಗ್ರರ ದೌರ್ಜನ್ಯವನ್ನು ತಾಳಲಾಗದೆ ನಿರಾಶ್ರಿತರಾಗಿ ವಲಸೆ ಹೋಗುತ್ತಿರುವವರೇ ಹೆಚ್ಚು. ಪರಿಸ್ಥಿತಿ ಸುಧಾರಿಸದೇ ಹೋದಲ್ಲಿ ನಿರಾಶ್ರಿತರ ಸಮಸ್ಯೆ ಮತ್ತಷ್ಟು ಉಲ್ಬಣಿಸುವುದು ಖಚಿತ.

**ಸೀಯಾರ್ಕೆ**
‘ಚೌಬೀನ’, ನಂ. ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ
೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು – ೫೬೦ ೦೮೫




ಹಣಕಾಸು ನೀತಿ ನಿರೂಪಣೆ, ಬಡ್ಡಿದರ, ಹಣದುಬ್ಬರದ ನಿಯಂತ್ರಣ ಮುಂತಾದ ವಿಚಾರಗಳ ಕುರಿತು ರಿಸರ್ವ್ ಬ್ಯಾಂಕ್ ಮತ್ತು ಕೇಂದ್ರ ಸರ್ಕಾರಗಳ ನಡುವೆ ಆಗಾಗ್ಗೆ ಭಿನ್ನಾಭಿಪ್ರಾಯಗಳು ತಲೆದೋರುವುದು ಹೊಸತೇನಲ್ಲ. ಆರ್.ಬಿ.ಐ.ನ ಹಾಲಿ ಗವರ್ನರ್ ರಘುರಾಂ ರಾಜನ್ ಹಲವಾರು ಸಂದರ್ಭಗಳಲ್ಲಿ ತನ್ನ ಸಂಸ್ಥೆಗಿರುವ ಸ್ವಾಯತ್ತತೆ ಮತ್ತು ಸ್ವಾತಂತ್ರ್ಯದ ಕುರಿತು ಸಮರ್ಥಿಸಿಕೊಂಡಿದ್ದಾರೆ. ಅದರಿಂದಾಗಿ ಅವರ ಈ ನಿಲುವು ಪ್ರಧಾನಿ ಮೋದಿಯವರ ಕೆಂಗಣ್ಣಿಗೆ ಗುರಿಯಾಗಿರುವುದರಲ್ಲಿ ಅಚ್ಚರಿಯೇನಿಲ್ಲ.

# ರಿಸರ್ವ್ ಬ್ಯಾಂಕಿನ ಸ್ವಾಯತ್ತತೆ ಹರಣಕ್ಕೆ ಹುನ್ನಾರ

**ಎಸ್. ಸುರೇಂದ್ರ**

ಸ್ವಾತಂತ್ರ್ಯ ಪೂರ್ವದಿಂದಲೂ (೧೯೩೫) ಅಸ್ತಿತ್ವದಲ್ಲಿರುವ ಭಾರತೀಯ ರಿಸರ್ವ್ ಬ್ಯಾಂಕ್ (ಆರ್.ಬಿ.ಐ) ಆರಂಭದಿಂದಲೂ ತನ್ನ ಸ್ವಾಯತ್ತತೆಗಾಗಿ ಹೋರಾಡುತ್ತಲೇ ಬಂದಿದೆ. ಭಾರತ ಸರ್ಕಾರ ರಾಷ್ಟ್ರದ ಅಭಿವೃದ್ಧಿಗಾಗಿ ರೂಪಿಸುವ ಹಣಕಾಸು ನೀತಿಗಳು ಮತ್ತು ಯೋಜನೆಗಳಲ್ಲಿ ರಿಸರ್ವ್ ಬ್ಯಾಂಕಿನ ಪಾತ್ರ ಬಹಳ ಪ್ರಮುಖವಾದುದು. ಆರ್.ಬಿ.ಐ. ಸಾರ್ವಜನಿಕ ಮತ್ತು ಖಾಸಗಿ ಕ್ಷೇತ್ರದ ಬ್ಯಾಂಕುಗಳ ವ್ಯವಹಾರಗಳಿಗೆ ಸಂಬಂಧಪಟ್ಟಂತೆ ನೀತಿ-ನಿಯಮಗಳನ್ನು ರೂಪಿಸುವುದಲ್ಲದೆ ಮಾರ್ಗದರ್ಶನ ನೀಡುವ ಬ್ಯಾಂಕು ಕೂಡ. ಇದು 'ಬ್ಯಾಂಕುಗಳ ಬ್ಯಾಂಕೂ' ಹೌದು.

ಹಣಕಾಸು ನೀತಿ ನಿರೂಪಣೆ, ಬಡ್ಡಿದರ, ಹಣದುಬ್ಬರದ ನಿಯಂತ್ರಣ ಮುಂತಾದ ವಿಚಾರಗಳ ಕುರಿತು ರಿಸರ್ವ್ ಬ್ಯಾಂಕ್ ಮತ್ತು ಕೇಂದ್ರ ಸರ್ಕಾರಗಳ ನಡುವೆ ಆಗಾಗ್ಗೆ ಭಿನ್ನಾಭಿಪ್ರಾಯಗಳು ತಲೆದೋರುವುದು ಹೊಸತೇನಲ್ಲ. ಆರ್.ಬಿ.ಐ.ನ ಹಾಲಿ ಗವರ್ನರ್ ರಘುರಾಂ ರಾಜನ್ ಹಲವಾರು ಸಂದರ್ಭಗಳಲ್ಲಿ ತನ್ನ ಸಂಸ್ಥೆಗಿರುವ ಸ್ವಾಯತ್ತತೆ ಮತ್ತು ಸ್ವಾತಂತ್ರ್ಯದ ಕುರಿತು ಸಮರ್ಥಿಸಿಕೊಂಡಿದ್ದಾರೆ. ಅದರಿಂದಾಗಿ ಅವರ ಈ ನಿಲುವು ಪ್ರಧಾನಿ ಮೋದಿಯವರ ಕೆಂಗಣ್ಣಿಗೆ ಗುರಿಯಾಗಿರುವುದರಲ್ಲಿ ಅಚ್ಚರಿಯೇನಿಲ್ಲ.

ಈ ಹಿನ್ನೆಲೆಯಲ್ಲಿ ರಿಸರ್ವ್ ಬ್ಯಾಂಕಿನ ಸ್ವಾಯತ್ತತೆಯನ್ನು ಕುಂಠಿತಗೊಳಿಸುವ ಸಲುವಾಗಿ ಮೋದಿ ಸರ್ಕಾರ ಕೈಗೊಳ್ಳುತ್ತಿರುವ ಕ್ರಮಗಳ ಬಗ್ಗೆ ಆಳವಾಗಿ ಚರ್ಚಿಸುವ ಅಗತ್ಯವಿದೆ.

ಬಿ.ಜೆ.ಪಿ. ನೇತೃತ್ವದ ಎನ್.ಡಿ.ಎ. ಸರ್ಕಾರ ಅಧಿಕಾರಕ್ಕೆ ಬಂದದ್ದು ಮೇ ೨೦೧೪ರಲ್ಲಿ, ಎಂದರೆ ೧ ವರ್ಷ – ೫ ತಿಂಗಳ ಹಿಂದೆ, ಅಷ್ಟೆ. ಚುನಾವಣಾ ಪ್ರಚಾರದ ಭಾಗವಾಗಿ ಬರಿ ಪೊಳ್ಳು ಆಶ್ವಾಸನೆಗಳನ್ನು ನೀಡಿ ಸ್ವರ್ಗವನ್ನೇ ಧರೆಗೆ ಇಳಿಸಿಬಿಡುತ್ತೇವೆ ಎಂದು ಬಡಾಯಿ ಕೊಚ್ಚಿಕೊಳ್ಳುತ್ತಿದ್ದ ಮೋದಿ ಸರ್ಕಾರ ಒಂದಾದ ಮೇಲೆ ಒಂದರಂತೆ ಜನವಿರೋಧಿ ಮತ್ತು ಕಾರ್ಪೊರೇಟ್ ಕಂಪನಿಗಳ ಪರವಾಗಿರುವ ಕ್ರಮಗಳನ್ನು ಕೈಗೊಳ್ಳುವುದರಲ್ಲೇ ನಿರತವಾಗಿದೆ. ಬಿ.ಜೆ.ಪಿ.ಗೆ ಮತ ನೀಡಿದ ಜನರೇ ಇಂದು ಭ್ರಮನಿರಸನಗೊಂಡು ಹತಾಶರಾಗುತ್ತಿದ್ದಾರೆ. ಅನಗತ್ಯ ವಿವಾದಗಳನ್ನು ಹುಟ್ಟುಹಾಕಿ ತನ್ನ ಆಡಳಿತೆಯ ವೈಫಲ್ಯಗಳನ್ನು ಮುಚ್ಚಿಹಾಕಲು ಜನತೆಯ ಗಮನವನ್ನು ಬೇರೆಡೆ ಸೆಳೆಯುವ ಭರದಲ್ಲಿ ಸರ್ಕಾರ ಸುಗ್ರೀವಾಜ್ಞೆ ಹೊರಡಿಸುವ ಮೂಲಕ ಭೂ ಸ್ವಾಧೀನ ಕಾಯ್ದೆಯನ್ನು ಜಾರಿಗೆ ತರುವ ದುಸ್ಸಾಹಸಕ್ಕೆ ಮೊರೆಹೋಗಿದ್ದು ಈ ನಿಟ್ಟಿನಲ್ಲಿ ಒಂದು ಸಣ್ಣ ಉದಾಹರಣೆಯಷ್ಟೆ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ೨೦೧೩ರಲ್ಲಿ ಯು.ಪಿ.ಎ. ಸರ್ಕಾರ ಸಂಸತ್ತಿನಲ್ಲಿ ಮಂಡಿಸಿದ್ದ ಭೂಸ್ವಾಧೀನ ಕಾಯ್ದೆಯನ್ನು, ಬಿ.ಜೆ.ಪಿ.ಯೂ ಸೇರಿದಂತೆ, ಎಲ್ಲ ಪಕ್ಷಗಳೂ ಅನುಮೋದಿಸಿದ್ದವು. ಈಗ ಅದೇ ಪಕ್ಷ ತನ್ನ ಕೋಮುವಾದಿ ಮತ್ತು ನವ ಉದಾರವಾದಿ ಅಜೆಂಡಾವನ್ನು ಜಾರಿಗೆ ತರುವ ತರಾತುರಿಯಲ್ಲಿ ನಮ್ಮ ಪ್ರಜಾಪ್ರಭುತ್ವದ ಚೌಕಟ್ಟಿನಲ್ಲಿ ಕಾರ್ಯ ನಿರ್ವಹಿಸುತ್ತಿರುವ ಸಂಸ್ಥೆಗಳನ್ನು ತನ್ನ ಹತೋಟಿಗೆ ಒಳಪಡಿಸಿಕೊಳ್ಳುವ ದುರುದ್ದೇಶದಿಂದ ಆಕ್ರಮಣಕಾರಿ ಕ್ರಮಗಳನ್ನು ಕೈಗೊಳ್ಳುತ್ತಿದೆ. ಅವುಗಳಲ್ಲಿ ರಿಸರ್ವ್ ಬ್ಯಾಂಕಿನ ಸ್ವಾಯತ್ತತೆಯನ್ನು ಕಸಿದುಕೊಳ್ಳಲು ಹೂಡಿರುವ ಹುನ್ನಾರವೂ ಒಂದು.

ಹಣಕಾಸು ಕ್ಷೇತ್ರದ ವಿಧಾಯಕ ಸುಧಾರಣಾ ಆಯೋಗಕ್ಕೆ ಸಂಬಂಧಪಟ್ಟಂತೆ ಪರಿಷ್ಕೃತಗೊಂಡ ಭಾರತೀಯ ಹಣಕಾಸು ಸಂಹಿತೆಯ ಕರಡನ್ನು ಸರ್ಕಾರ ಇದೀಗ ಬಿಡುಗಡೆ ಮಾಡಿದೆ. ಈ ಸಂಹಿತೆಯನ್ನು ಪರಿಷ್ಕರಿಸುವ ಮೂಲಕ ಹಣಕಾಸು ನೀತಿಗಳನ್ನು ರೂಪಿಸಿರುವ ಸಮಿತಿಯನ್ನು ರಚಿಸುವ ಕ್ರಮದಲ್ಲಿ ಕೆಲವು ಮಾರ್ಪಾಡುಗಳನ್ನು ಮಾಡಬೇಕೆಂದು ಶಿಫಾರಸ್ಸು ಮಾಡಲಾಗಿದೆ. ಈ ಶಿಫಾರಸ್ಸಿನ ಪ್ರಕಾರ ಇನ್ನು ಮುಂದೆ ಬಡ್ಡಿದರ ಮುಂತಾದ ನೀತಿನಿರೂಪಣೆಗಳನ್ನು ರೂಪಿಸುವ, ಏಳು ಮಂದಿ ಸದಸ್ಯರಿರುವ ಸಮಿತಿಯೊಂದನ್ನು ರಚಿಸಬೇಕು; ಆ ಏಳು

ಮಂದಿ ಸದಸ್ಯರನ್ನು ಸರ್ಕಾರವೇ ನೇಮಕ ಮಾಡುತ್ತದೆ ಮತ್ತು ಆರ್.ಬಿ.ಐ.ಗೆ ಸಂಬಂಧಪಟ್ಟಂತೆ ತೆಗೆದುಕೊಳ್ಳುವ ತೀರ್ಮಾನಗಳ ಬಗ್ಗೆ ವೀಟೋ ಚಲಾಯಿಸುವ ಹಕ್ಕು ಆ ಸಂಸ್ಥೆಯ ಗವರ್ನರ್‌ಗೆ ಇರುವುದಿಲ್ಲ; ಬಹುಮತದ ಆಧಾರದ ಮೇಲೆ ಎಲ್ಲ ತೀರ್ಮಾನಗಳನ್ನು ತೆಗೆದುಕೊಳ್ಳಲಾಗುತ್ತದೆ ಮತ್ತು ಎಲ್ಲ ಸದಸ್ಯರೂ ಆ ತೀರ್ಮಾನಗಳಿಗೆ ಬದ್ಧರಾಗಿರಬೇಕು.

ನಿಜಕ್ಕೂ ಇದೊಂದು ಆತಂಕಕಾರಿ ಕ್ರಮ. ನಮ್ಮ ಪ್ರಜಾಪ್ರಭುತ್ವ ವ್ಯವಸ್ಥೆಗೆ ಮಾರಕವಾಗಲಿರುವ ಬೆಳವಣಿಗೆ.

ಇವೆಲ್ಲದರ ಸಾರಾಂಶವಿಷ್ಟೆ:

'ಬ್ಯಾಂಕುಗಳ ಬ್ಯಾಂಕ್' ಆಗಿ ಇದುವರೆಗೆ ಕಾರ್ಯ ನಿರ್ವಹಿಸಿಕೊಂಡು ಬರುತ್ತಿರುವ ರಿಸರ್ವ್ ಬ್ಯಾಂಕ್ ಮತ್ತು ಅದರ ಗವರ್ನರ್ ಕೇಂದ್ರ ಸರ್ಕಾರದ ಕೈಗೊಂಬೆಗಳಾಗಿರಬೇಕು, ಹಣಕಾಸು ನೀತಿಗಳ ಕುರಿತು ತೆಗೆದುಕೊಳ್ಳುವ ತೀರ್ಮಾನಗಳಲ್ಲಿ ಕೇಂದ್ರ ಸರ್ಕಾರದ್ದೇ ಮೇಲುಗೈ.



ಅವರು ನಿದ್ದೆ ಮಾಡಿ ಎದ್ದು ರೈತರ ಬಗ್ಗೆ ಚರ್ಚೆ ಮಾಡುತ್ತಾರೆಂತ ಕಾಣುತ್ತೆ!

ಬಡ್ಡಿದರ ಕುರಿತಂತೆ ಈ ಹಿಂದೆ ಅನೇಕ ಬಾರಿ ಆಡಳಿತಾರೂಢ ಪಕ್ಷಗಳ/ಒಕ್ಕೂಟಗಳ ವಿತ್ತ ಸಚಿವರುಗಳು ಆರ್.ಬಿ.ಐ.ನ ಗವರ್ನರ್ ಮೇಲೆ ಪ್ರಭಾವ ಬೀರಲು ಸಾರ್ವಜನಿಕವಾಗಿಯೇ ಪ್ರಯತ್ನಿಸಿದ ಉದಾಹರಣೆಗಳು ನಮ್ಮ ಮುಂದಿವೆ. ಅಷ್ಟೇ ಅಲ್ಲ, ಬಡ್ಡಿದರವನ್ನು ಕಡಿತಗೊಳಿಸಬೇಕು, ಆ ಮೂಲಕ ಬ್ಯಾಂಕುಗಳಿಂದ ತಾವು ಪಡೆಯುವ ಸಾಲಗಳಿಗೆ ಸಂಬಂಧಪಟ್ಟಂತೆ ತಗಲುವ ಖರ್ಚುವೆಚ್ಚಗಳನ್ನು ಕಡಿಮೆ ಮಾಡಬೇಕೆಂದು ಕಾರ್ಪೊರೇಟ್ ಸಂಸ್ಥೆಗಳು ಸರ್ಕಾರಗಳು ಹಾಗೂ ರಿಸರ್ವ್ ಬ್ಯಾಂಕಿನ ಮೇಲೆ ಸದಾ ಒತ್ತಡ ಹೇರುತ್ತಲೇ ಇರುತ್ತವೆ.

ಉದಾಹರಣೆಗೆ ಹಣಕಾಸು ಸೇರ್ಪಡೆಯ ಕ್ರಮವೆಂದು ಮೋದಿ ಸರ್ಕಾರ ಚಾಲ್ತಿಗೆ ತಂದ ಜನಧನ್ ಯೋಜನೆ ಮತ್ತು ವಿಮಾ ಯೋಜನೆಗಳಿಂದ ಹಿಡಿದು ಇತ್ತೀಚಿನ ಮುದ್ರಾ ಯೋಜನೆಯ ಅನುಷ್ಠಾನದಲ್ಲಿ ಕೇಂದ್ರ ಸರ್ಕಾರ ರಿಸರ್ವ್ ಬ್ಯಾಂಕನ್ನು ಗಣನೆಗೆ ತೆಗೆದುಕೊಂಡೇ ಇಲ್ಲ.

ಸಾಮಾನ್ಯವಾಗಿ ಇದುವರೆಗೆ ಅಧಿಕಾರದಲ್ಲಿದ್ದ ಆರ್.ಬಿ.ಐ. ಗವರ್ನರುಗಳು, ತಾವು ಸರ್ಕಾರದಿಂದಲೇ ನೇಮಕ ಗೊಂಡಿದ್ದರೂ ಸಹ, ಸ್ವತಂತ್ರವಾಗಿ, ವೃತ್ತಿಪರತೆಯಿಂದ ಸೇವೆ ಸಲ್ಲಿಸಿದ್ದಾರೆ. ಹಲವಾರು ಬಾರಿ ವಿತ್ತ ಸಚಿವರು ತಮ್ಮ ಮತ್ತು ತಮ್ಮ ಸಂಸ್ಥೆಯ ಸ್ಥಾನಮಾನಗಳನ್ನು ಕಡೆಗಣಿಸಿ ನೀಡುವ ಸೂಚನೆಗಳನ್ನು, ಆಣತಿಗಳನ್ನು ಧಿಕ್ಕರಿಸಿ ಆರ್.ಬಿ.ಐ.ನ ಘನತೆ, ಸ್ವಾಭಿಮಾನ ಮತ್ತು ಸ್ವಾಯತ್ತತೆಯನ್ನು ಮೆರೆದಿದ್ದಾರೆ. ಈ ನಿಟ್ಟಿನಲ್ಲಿ ವೈ.ವಿ. ರೆಡ್ಡಿ, ಡಿ. ಸುಬ್ಬರಾವ್ ಮತ್ತು ರಘುರಾಂ ರಾಜನ್ ಅವರ ಹೆಸರುಗಳನ್ನು ಉದಾಹರಿಸಬಹುದು. ಸಚಿವರು ಮತ್ತು ಗವರ್ನರುಗಳ ನಡುವಣ ತಿಕ್ಕಾಟ, ಸಂಘರ್ಷ, ಭಿನ್ನಾಭಿಪ್ರಾಯಗಳು ಮೊದಲಿನಿಂದಲೂ ನಡೆದುಕೊಂಡು ಬಂದದ್ದೇ. ಈಗ ಮೋದಿ ಸರ್ಕಾರ ಅಧಿಕಾರ ವಹಿಸಿಕೊಂಡ ಮೇಲಂತೂ ಇವು ಇಮ್ಮಡಿಗೊಂಡಿವೆ. ಕಾರಣ ಈ ಸಂಸ್ಥೆಯನ್ನು ತನ್ನ ಅಡಿಯಾಳನ್ನಾಗಿ ಮಾರ್ಪಡಿಸಲು ಕೇಂದ್ರ ಸರ್ಕಾರ ಹೂಡುತ್ತಿರುವ ಪಿತೂರಿ.

ಸದ್ಯದಲ್ಲಿ ಹಣಕಾಸು ನೀತಿಗಳ ಬಗ್ಗೆ ನಿರ್ದಿಷ್ಟ ನಿಲುವು ತಳೆಯುವ ಸಂದರ್ಭಗಳುಂಟಾದಾಗ ಆರ್.ಬಿ.ಐ. ಗವರ್ನರ್ ತಮ್ಮ ಸಂಸ್ಥೆಯ ತಾಂತ್ರಿಕ ಸಲಹಾ ಮಂಡಳಿಯೊಂದಿಗೆ ಸಮಾಲೋಚನೆ ನಡೆಸುತ್ತಾರೆ. ಆದರೆ ಅಂತಹ ಸಮಾಲೋಚನೆ ಸಭೆಗಳಲ್ಲಿ ತೆಗೆದುಕೊಳ್ಳುವ ಬಹುಮತದ ತೀರ್ಮಾನದಂತೆಯೇ ಅವರು ನೀತಿಗಳನ್ನು ನಿರೂಪಿಸಬೇಕೆಂದೇನೂ ಇಲ್ಲ. "ಹಣದುಬ್ಬರದಂತಹ ಆರ್ಥಿಕ ಸಮಸ್ಯೆಗಳನ್ನು ಪರಿಹರಿಸಲು ಕೆಲವು ಗುರಿಗಳನ್ನು ನಿಗದಿಪಡಿಸುವುದುಂಟು. ಆ ಗುರಿಗಳನ್ನು ಕಾರ್ಯಗತಗೊಳಿಸಲು ಗವರ್ನರ್ ಅವರೇ ಜವಾಬ್ದಾರರು ಎಂದಾದರೆ ಅವರಿಗೆ ವೀಟೋ ಚಲಾಯಿಸುವ ಹಕ್ಕು ಇರುವುದು ಅತ್ಯಗತ್ಯ" ಎನ್ನುತ್ತಾರೆ ಆರ್.ಬಿ.ಐ.ನ ಒಬ್ಬ ಖ್ಯಾತ ಮಾಜಿ ಅಧಿಕಾರಿ.

ಹಣಕಾಸು ನೀತಿಗಳನ್ನು ನಿರೂಪಿಸುವ ಸಮಿತಿಯಲ್ಲಿ ಕೇಂದ್ರ ಸರ್ಕಾರದಿಂದ ನೇಮಕಗೊಂಡ ೪ ಸದಸ್ಯರು ಇರಬೇಕೆಂಬ ಹಣಕಾಸು ಕ್ಷೇತ್ರದ ವಿಧಾಯಕ ಸುಧಾರಣಾ ಆಯೋಗದ (FSLRC) ಸಲಹೆಯು ಆರ್.ಬಿ.ಐ.ನ ಡೆಪ್ಯುಟಿ ಗವರ್ನರ್ ಉರ್ಜಿತ್ ಪಟೇಲ್ ಅವರ ನೇತೃತ್ವದ ತಂಡ ನೀಡಿರುವ ಶಿಫಾರಸ್ಸಿಗೆ ತದ್ವಿರುದ್ಧವಾಗಿದೆ. ಉರ್ಜಿತ್ ಪಟೇಲ್ ತಂಡವು ಆರ್.ಬಿ.ಐ.ಅನ್ನು ಪ್ರತಿನಿಧಿಸುವ ೩ ಜನರೂ ಸೇರಿದಂತೆ ಒಟ್ಟು ೫ ಸದಸ್ಯರು ಆ ಸಮಿತಿಯಲ್ಲಿರಬೇಕೆಂದು ಸ್ಪಷ್ಟವಾಗಿ ಹೇಳಿದೆ. ಅಲ್ಲದೆ, ಗವರ್ನರ್ ಅಧ್ಯಕ್ಷರಾಗಿರಬೇಕು, ಡೆಪ್ಯುಟಿ ಗವರ್ನರ್ ಉಪಾಧ್ಯಕ್ಷರಾಗಿರಬೇಕು ಮತ್ತು ಹಣಕಾಸು ನೀತಿಗಳ ಕುರಿತಂತೆ ಉಸ್ತುವಾರಿ ವಹಿಸಿರುವ ಕಾರ್ಯಕಾರಿ ನಿರ್ದೇಶಕರು ಸದಸ್ಯರಾಗಿರಬೇಕು ಎಂದೂ ಸಲಹೆ ನೀಡಿದೆ. ಹಣಕಾಸು ವ್ಯವಹಾರಗಳು, ಕೇಂದ್ರೀಯ ಬ್ಯಾಂಕಿಂಗ್ ರೀತಿನೀತಿಗಳು, ಹಣಕಾಸು ಮಾರುಕಟ್ಟೆ ವ್ಯವಹಾರಗಳು, ಸಾರ್ವಜನಿಕ ವಿತ್ತ ನೀತಿಗಳು, ಅಂತರರಾಷ್ಟ್ರೀಯ ಆರ್ಥಿಕತೆ ಇವುಗಳ ಬಗ್ಗೆ ಆಳವಾದ ಅನುಭವ ಇರುವ, ನೈಪುಣ್ಯತೆ ಉಳ್ಳ ಇನ್ನಿಬ್ಬರು ಸದಸ್ಯರನ್ನು ಬೇರೆಡೆಯಿಂದ ಅಧ್ಯಕ್ಷರು ಮತ್ತು ಉಪಾಧ್ಯಕ್ಷರು ನೇಮಕ ಮಾಡಿಕೊಳ್ಳಬಹುದು ಎಂಬ ಸಲಹೆಯನ್ನು ಇತ್ತಿದೆ ಉರ್ಜಿತ್ ಪಟೇಲ್ ತಂಡ.

ಆರ್.ಬಿ.ಐ.ನ ಸ್ವಾಯತ್ತತೆ ಮತ್ತು ಹಣಕಾಸು ನೀತಿಗಳ ಸಮಿತಿಯ ರಚನೆ ಮತ್ತು ಕೇಂದ್ರ ಸರ್ಕಾರಕ್ಕೆ ಈ ನಿಟ್ಟಿನಲ್ಲಿ ಇರುವ ಇತಿಮಿತಿಗಳ ಕುರಿತು ಇಂಥದೇ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ ಇನ್ನಿತರ ಕೆಲವು ಆರ್ಥಿಕ ತಜ್ಞರು.

ಹಣದುಬ್ಬರಕ್ಕೆ ಕಡಿವಾಣ ಹಾಕುವುದರ ಬಗ್ಗೆ, ಆ ಕುರಿತು ಹಣಕಾಸು ಸಮಿತಿ ನಿಗದಿಪಡಿಸುವ ಬಗ್ಗೆ, ಕೇಂದ್ರೀಯ ಬ್ಯಾಂಕ್ (ಆರ್.ಬಿ.ಐ.) ಹಾಗೂ ಕೇಂದ್ರ ಸರ್ಕಾರಗಳ ನಡುವೆ ಒಮ್ಮತವಿದ್ದರೂ ಸಮಿತಿಯ ಎಲ್ಲ ನೀತಿಗಳನ್ನು ರೂಪಿಸುವ ಅಧಿಕಾರ ಗವರ್ನರ್ ಅವರಿಗೆ ಮಾತ್ರ ಇರಬೇಕು ಮತ್ತು ಈ ಪ್ರಸ್ತಾವಕ್ಕೆ ಒಪ್ಪಿಗೆ ನೀಡುವಂತೆ ಆರ್.ಬಿ.ಐ. ಕೇಂದ್ರ ಸರ್ಕಾರದ ಮನವೊಲಿಸಬೇಕು ಎಂಬ ಅಭಿಪ್ರಾಯವೂ ಇದೆ.

ಒಟ್ಟಾರೆಯಾಗಿ, ಮೋದಿ ಸರ್ಕಾರ ಎಷ್ಟೇ ಒತ್ತಡ ತಂದರೂ ಆರ್.ಬಿ.ಐ. ತನ್ನ ಸ್ವಾಯತ್ತತೆಯನ್ನು, ಸ್ವಾತಂತ್ರ್ಯವನ್ನು ಬಿಟ್ಟುಕೊಡಲು ಸಿದ್ಧವಿಲ್ಲ ಎಂಬುದು ನಿಚ್ಚಳವಾಗಿ ಕಂಡುಬರುತ್ತಿರುವುದು ಸ್ವಾಗತಾರ್ಹ ಬೆಳವಣಿಗೆ.

ಯೋಜನಾ ಆಯೋಗ, ಇಂಡಿಯನ್ ಕೌನ್ಸಿಲ್ ಫಾರ್ ಹಿಸ್ಟಾರಿಕಲ್ ರಿಸರ್ಚ್, ನ್ಯಾಷನಲ್ ಬುಕ್ ಟ್ರಸ್ಟ್ ಆಫ್ ಇಂಡಿಯಾ, ಭಾರತೀಯ ಚಿತ್ರರಂಗ ಮತ್ತು ಟೆಲಿವಿಷನ್ ಇನ್‌ಸ್ಟಿಟ್ಯೂಟ್‌ನಂತಹ ಸಂಸ್ಥೆಗಳಲ್ಲಿ ಕಟ್ಟಾ ಕೋಮುವಾದಿಗಳನ್ನು ಅಧಿಕಾರ ಸ್ಥಾನಗಳಲ್ಲಿ ನೇಮಿಸುತ್ತಲೇ ಮೋದಿ ಸರ್ಕಾರ ಈ ಎಲ್ಲ ಸಂಸ್ಥೆಗಳನ್ನು ಕ್ರಮೇಣ ಆಪೋಶನ ತೆಗೆದುಕೊಳ್ಳುತ್ತಿರುವ ಇಂದಿನ ಸಂದರ್ಭದಲ್ಲಿ ರಿಸರ್ವ್ ಬ್ಯಾಂಕ್ ಆಫ್ ಇಂಡಿಯ ಗಟ್ಟಿ ನಿಲುವು ತಳೆದು ಅಂತಹ ಪ್ರಯತ್ನಗಳನ್ನು ಹಿಮ್ಮೆಟ್ಟಿಸಿ ತನ್ನ ಸ್ವಾಯತ್ತತೆಯನ್ನು ಸಮರ್ಥಿಸಿಕೊಳ್ಳಲು ದಿಟ್ಟ ಹೆಜ್ಜೆ ಇಡಬೇಕಿದೆ.

**ಎಸ್. ಸುರೇಂದ್ರ**
ನಂ. ೨೪, ೧ನೇ ಅಡ್ಡರಸ್ತೆ, ಕೆನರಾ ಬ್ಯಾಂಕ್ ಕಾಲನಿ
೩ನೇ ಬ್ಲಾಕ್, ಜಯನಗರ ಪೂರ್ವ, ಬೆಂಗಳೂರು – ೫೬೦ ೦೧೧

# ಅನುಕರಣೀಯ ಬದುಕಿನ ಮೂರು ಮಾದರಿಗಳು



೧

ಹಿಂದಿನ ತಲೆಮಾರಿನ ಕನ್ನಡಿಗರಿಗೆ ನಿಟ್ಟೂರು ಶ್ರೀನಿವಾಸರಾಯರನ್ನು ಪರಿಚಯಿಸುವ ಅಗತ್ಯವಿಲ್ಲ. ಅವರೊಬ್ಬ ಅಪರಿಮಿತ ದೇಶಭಕ್ತರು, ಕನ್ನಡ ಭಾಷಾಭಿಮಾನಿಗಳು. ನೂರಕ್ಕೆ ನೂರು ಗಾಂಧೀವಾದಿಗಳು. ಪ್ರಖ್ಯಾತ ನ್ಯಾಯವಾದಿಗಳಾಗಿದ್ದ ಅವರು ಕರ್ನಾಟಕ ಉಚ್ಚ ನ್ಯಾಯಾಲಯದ ಮುಖ್ಯ ನ್ಯಾಯಾಧೀಶರಾಗಿದ್ದರು. ಭಾರತದ ಕೇಂದ್ರ ಜಾಗ್ರತ ಆಯೋಗದ ಮೊದಲ ಕಮಿಷನರ್ ಎನ್ನುವ ಹೆಗ್ಗಳಿಕೆ ಅವರಿಗೆ ಸಲ್ಲುತ್ತದೆ. ಅವರೊಬ್ಬ ಸರಳ, ಸಜ್ಜನರು. ಬದುಕಿನ ಒಂದು ಉತ್ತಮ ಮಾದರಿಯಾಗಿ ಬಾಳಿದವರು. ಅವರ ಬಗ್ಗೆ ಏನೇ ಹೇಳಿದರೂ ತುಸು ಕಡಿಮೆಯೇ ಎನ್ನಿಸುತ್ತದೆ. ಅವರ ಜೊತೆಯಲ್ಲಿನ ಒಂದು ಸಂದರ್ಭ ನನಗೆ ಬದುಕಿನ ಒಂದು ದೊಡ್ಡ ಪಾಠ. ಅದನ್ನು ಇಲ್ಲಿ ಸ್ಮರಿಸಿಕೊಳ್ಳುವುದು ನನಗೆ ಒಂದು ಸಂತಸದ ಸಂಗತಿ.

ಹಲವು ವರ್ಷಗಳ ಹಿಂದಿನ ಮಾತು. ಮಿಥಿಕ್ ಸೊಸೈಟಿಯ ಆವರಣದಲ್ಲಿ ನಾನು ಯಾರನ್ನೋ ಕಾಯ್ದು ನಿಂತಿದ್ದೆ. ಅಲ್ಲಿಯೇ ಸಮೀಪದಲ್ಲಿ ನಿಟ್ಟೂರು ಶ್ರೀನಿವಾಸರಾಯರು ಸಹ ನಿಂತಿದ್ದರು. ಆ ಮೊದಲು ನಾನು ಅವರನ್ನು ಎರಡೋ ಮೂರೋ ಸಾರಿ ಭೆಟ್ಟಿಯಾಗಿದ್ದೆ. ಅವು ಕೇವಲ ಅನೌಪಚಾರಿಕ ಸಂದರ್ಭಗಳು. ಅನ್ಯೋನ್ಯತೆ ಅಥವಾ ಆಪ್ತತೆಯನ್ನು ಸಾಧಿಸುವ ಅವಕಾಶಗಳೇನೂ ಆಗಿರಲಿಲ್ಲ. ಹಾಗಾಗಿ ಅವರು ನನ್ನನ್ನು ಮರೆತಿರುವ ಸಾಧ್ಯತೆ ಇತ್ತು. ಅಷ್ಟೊಂದು ಪ್ರತಿಷ್ಠಿತ ವ್ಯಕ್ತಿಯನ್ನು ನಾನೇ ಪರಿಚಯಿಸಿಕೊಂಡು ಮಾತನಾಡುವ ಧೈರ್ಯ ನನಗೆ ಬರಲಿಲ್ಲ. ಕಳ್ಳನಂತೆ ಒಂದೆರಡು ಸಾರಿ ಅವರತ್ತ ದೃಷ್ಟಿ ಹರಿಸಿದೆ. ಆಗ ಆ ಹಿರಿಯರು ನನ್ನತ್ತ ಸಾಗಿ ಬಂದು, "ಏನಪ್ಪ ಈಶ್ವರ್ ? ನನ್ನನ್ನು ನೀವು ಮಾತನಾಡಿಸಲೇ ಇಲ್ಲ ?" ಎಂದು ಪ್ರಶ್ನಿಸಿದರು. ನನಗೆ ಏಕಕಾಲಕ್ಕೆ ಗಾಬರಿ ಮತ್ತು ನಾಚಿಕೆ. "ಇಲ್ಲ ಸಾರ್, ನನ್ನನ್ನು ನೀವು ಮರೆತಿರಬಹುದು ಎನ್ನುವ ಕಾರಣಕ್ಕೆ ತಮ್ಮನ್ನು ಮಾತನಾಡಿಸುವ ಧೈರ್ಯ ಮಾಡಲಿಲ್ಲ" ಎಂದು ವಿನಂತಿಸಿಕೊಂಡೆ. ನಂತರದಲ್ಲಿ ಅವರು ಹೇಳಿದ ಮಾತು ನನಗೆ ಇನ್ನೂ ನಂಬಲು ಕಷ್ಟವಾಗುತ್ತಿದೆ. "ಹಾಗೇಕೆ ಹೇಳುತ್ತೀರಾ ? ಆಕಾಶವಾಣಿಯಲ್ಲಿ ನಿಮ್ಮ ಚಿಂತನಗಳನ್ನು ಕೇಳಿಸಿ ಕೊಳ್ಳುತ್ತೇನೆ. ಅವುಗಳನ್ನು ನಾನು ಮೆಚ್ಚಿಕೊಂಡಿದ್ದೇನೆ" ಎಂಬ ವಿಶ್ವಾಸದ ಮಾತುಗಳನ್ನು ಹೇಳಿದರು. ಬಹುಶಃ ಅವರಿಗೆ ಆಕಾಶವಾಣಿಯ ಚಿಂತನ ಕಾರ್ಯಕ್ರಮ ಕೇಳುವ ಪರಿಪಾಠ ಇದ್ದಿರಬಹುದು. ಇನ್ನು ನನ್ನ ಚಿಂತನ ಗಳನ್ನು ಮೆಚ್ಚಿಕೊಂಡ ವಿಚಾರ ಅವರ ಪ್ರೋತ್ಸಾಹದ ಮಾತುಗಳಾಗಿರಲಿಕ್ಕೂ ಸಾಕು. ಮುಂದುವರಿದು ಅವರಿಗೆ ನನ್ನ ತಂದೆಯ ಪರಿಚಯ ಇತ್ತು ಎಂದು ಹೇಳುವ ಇನ್ನೊಂದು ವಿಶ್ವಾಸದ ಮಾತನ್ನೂ ಸೇರಿಸಿದರು. ಆ ನಂತರದಲ್ಲಿ ಕೆಲವು ಸಾಂದರ್ಭಿಕ ಮಾತುಗಳನ್ನು ಆಡಿ ನನ್ನನ್ನು ಕಳುಹಿಸಿಕೊಟ್ಟರು.

ಈ ಮೇಲಿನ ಸಂದರ್ಭ ನನಗೆ ಯಾವತ್ತೂ ನೆನಪಿನಲ್ಲಿ ಉಳಿದುಕೊಂಡು ಬಂದಿದೆ. ಶ್ರೀನಿವಾಸರಾಯರು ಬಹಳ ಎತ್ತರದ ವ್ಯಕ್ತಿ. ಸಮಾಜದಲ್ಲಿ ಅತ್ಯುನ್ನತ ಸ್ಥಾನಮಾನಗಳನ್ನು ಹೊಂದಿದ್ದವರು. ಅಂಥ ಮಹನೀಯರು ನನ್ನಂಥ ಸಾಮಾನ್ಯನೊಬ್ಬನನ್ನು ತಮ್ಮ ನೆನಪಿನಲ್ಲಿ ಉಳಿಸಿ ಕೊಂಡಿದ್ದರು ಎನ್ನುವುದು ನನಗೆ ಸೋಜಿಗದ ಸಂಗತಿ. ನಂತರದಲ್ಲಿ ಅವರೇ ಮುಂದಾಗಿ ನನ್ನನ್ನು ಮಾತನಾಡಿಸುವ ಅನಿವಾರ್ಯತೆ ಅವರಿಗೆ ಇರಲೂ ಇಲ್ಲ. ಹಾಗಾದರೂ ಅಂದು ಅವರು ನನಗೆ ತೋರಿದ ವಿಶ್ವಾಸ, ಆತ್ಮೀಯತೆ, ಮೆಚ್ಚುಗೆ, ಪ್ರೋತ್ಸಾಹ ಇವೆಲ್ಲವೂ ರಾಯರ ವ್ಯಕ್ತಿತ್ವದ ಮಹತ್ತನ್ನು ಸೂಚಿಸುವ ಸಂಗತಿಗಳಾಗಿವೆ.

ಆ ದಿನ ಶ್ರೀನಿವಾಸರಾಯರು ನನ್ನನ್ನು ನಡೆಸಿಕೊಂಡ ರೀತಿ, ಹಿರಿಯರು ಮತ್ತು ಕಿರಿಯರು ಹೇಗೆ ಪರಸ್ಪರ ವ್ಯವಹರಿಸಬೇಕು ಎಂಬುದರ ಬಗ್ಗೆ ನನ್ನನ್ನು ಚಿಂತಿಸುವಂತೆ ಮಾಡಿದೆ. ಸದಾ ಕಿರಿಯರಿಂದ ವಿಧೇಯತೆ ಮತ್ತು ಗೌರವಗಳನ್ನು ನಿರೀಕ್ಷಿಸುವ ಹಿರಿಯರು, ಅವರನ್ನು ಪ್ರೀತಿಯಿಂದ ಮತ್ತು ಮರ್ಯಾದೆಯಿಂದ ಕಾಣುವ ಮನೋಭಾವವನ್ನು ಬೆಳೆಸಿಕೊಳ್ಳಬೇಕು. ಅವರ ಒಂದು ಒಳ್ಳೆಯ ಮಾತು, ಒಂದು ಆತ್ಮೀಯ ನಡೆ ಕಿರಿಯರನ್ನು ಗೆಲ್ಲುವಲ್ಲಿ ಬಹು ದೂರ ಕೊಂಡೊಯ್ಯಬಲ್ಲದು. ಕಿರಿಯರು ಕಿರಿಯರೇ; ಅವರಿಗೆ ಅನುಭವ ಸಾಲದು. 'ತಾವೇ ಗ್ರೇಟ್' ಎಂದುಕೊಳ್ಳುವುದು ಸಹಜ. ಆದರೆ ಹಿರಿಯರಾದವರು ಬದುಕನ್ನು ಕಂಡವರು; ಬದುಕಿನ ಸುಖ ಮತ್ತು ದುಃಖಗಳನ್ನು ಅನುಭವಿಸಿದವರು. ಅವರು ಬದುಕಿನ ನಿರರ್ಥಕತೆ ಅಥವಾ ನಿಷ್ಫಲತೆಯನ್ನು ಅರಿತವರು. ಹಾಗಾಗಿ ಅವರು ಕಿರಿಯರ ಮುಂದೆ ತಾನು ಹೆಚ್ಚು ಎಂಬ ತಮ್ಮ ಅಹಂ ಮೆರೆಯಬಾರದು. ಅದಕ್ಕೆ ಬದಲಾಗಿ ಕಿರಿಯರ ಒಡನಾಟದಲ್ಲಿ ಹಿರಿಯರು ಉದಾರವಾಗಿ ವರ್ತಿಸಬೇಕು. ತಾವೇ ಒಂದು ಹೆಜ್ಜೆ ಮುಂದೆ ಹೋಗಿ ಕಿರಿಯರ ಮನವೊಲಿಸುವ ಕೆಲಸ ಮಾಡಬೇಕು. ಹಾಗೆ ಮಾಡುವ ಮೂಲಕ ಅವರು ಕಿರಿಯರ ಪ್ರೀತಿವಿಶ್ವಾಸಗಳನ್ನು ಗಳಿಸುವಲ್ಲಿ ಸಫಲತೆ ಪಡೆಯುತ್ತಾರೆ. ಅವರಿಗೆ ಒಂದು ಉತ್ತಮ ಮಾದರಿಯಾಗಿಯೂ ಸಿದ್ಧಿಸುತ್ತಾರೆ.

೨

ಡಾ॥ ರಾಲ್ಫ್ ನಾಫ್ಜೀಗರ್ ವಿಸ್ಕಾನ್ಸಿನ್ ವಿಶ್ವವಿದ್ಯಾಲಯದ 'ಸ್ಕೂಲ್ ಆಫ್ ಜರ್ನಲಿಸಂ'ನ ನಿರ್ದೇಶಕರಾಗಿದ್ದವರು. ನಂತರದಲ್ಲಿ ಅಲ್ಲಿಯೇ ಗೌರವಾನ್ವಿತ ಪ್ರಾಧ್ಯಾಪಕರಾಗಿ ಕೆಲಸ ಮಾಡುತ್ತಿದ್ದರು. ಅಮೆರಿಕದ ಪತ್ರಿಕೋದ್ಯಮ ಮತ್ತು ಪತ್ರಿಕೋದ್ಯಮ ಶಿಕ್ಷಣ ಕ್ಷೇತ್ರದಲ್ಲಿ ಅವರದ್ದು ತುಂಬ ದೊಡ್ಡ ಹೆಸರು. ನನ್ನ ತಲೆಮಾರಿನ ಸಂವಹನ ವಿದ್ಯಾರ್ಥಿಗಳು ಅವರು ಸಂಪಾದಿಸಿದ್ದ ಸಂವಹನ ಸಂಶೋಧನೆ ಕುರಿತ ಪುಸ್ತಕವನ್ನು ಓದಿಯೇ ಸಂಶೋಧನೆಯ ಮೂಲಪಾಠಗಳನ್ನು ಕಲಿತದ್ದು. ಪ್ರೊಫೆಸರ್ ನಾಫ್ಜೀಗರ್ ಸಂವಹನ ಸಲಹೆಗಾರರಾಗಿ ಭಾರತದೊಂದಿಗೂ ಸಂಬಂಧ ಹೊಂದಿದ್ದವರು. 'ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಕಮ್ಯುನಿಕೇಷನ್'ನ ಆರಂಭದ ದಿನಗಳಲ್ಲಿ ಅಲ್ಲಿ ಸಂವಹನ ತಜ್ಞರಾಗಿ ಕಾರ್ಯ ನಿರ್ವಹಿಸಿದವರಲ್ಲಿ ನಾಫ್ಜೀಗರ್ ಕೂಡ ಒಬ್ಬರು.

ಕಳೆದ ಶತಮಾನದ ಅರವತ್ತರ ದಶಕದಲ್ಲಿ ನಾನು ಅಮೆರಿಕದ ವಿಸ್ಕಾನ್ಸಿನ್ ವಿಶ್ವವಿದ್ಯಾಲಯದಲ್ಲಿ ವಿದ್ಯಾರ್ಥಿಯಾಗಿದ್ದೆ. ಆಗ ನಾನು 'ಸ್ಕೂಲ್ ಆಫ್

**ಎಚ್. ಎಸ್. ಈಶ್ವರ**



ಡಾ॥ ರಾಲ್ಫ್ ನಾಫ್ಜೀಗರ್

ಜರ್ನಲಿಸಂ'ನ ಭಾಗವಾಗಿದ್ದ ಸಮೂಹ ಸಂವಹನ ಸಂಶೋಧನಾ ಕೇಂದ್ರದಲ್ಲಿ ಸಹಾಯಕನಾಗಿಯೂ ಕೆಲಸ ಮಾಡುತ್ತಿದ್ದೆ. ಆ ಸಮಯದಲ್ಲಿ ಡಾ॥ ನಾಫ್ಜೀಗರ್ ನನಗೆ ಪ್ರಾಧ್ಯಾಪಕರು ಸಹ ಆಗಿದ್ದರು.

ಸುಮಾರು ೭೫ ವರ್ಷ ವಯಸ್ಸಿನ, ಬಿಳಿ ಕೂದಲಿನ ಹಣ್ಣುಹಣ್ಣು ಮುದುಕ ಎಲ್ಲರ ವಿಶ್ವಾಸ, ಗೌರವಗಳಿಗೆ ಪಾತ್ರರಾಗಿದ್ದರು. ಅವರ ಕಛೇರಿ ಇದ್ದದ್ದು ಕಟ್ಟಡದ ನಾಲ್ಕನೆಯ ಮಹಡಿಯಲ್ಲಿ; ನಾವು ಕೆಲಸ ಮಾಡುತ್ತಿದ್ದದ್ದು ಮೊದಲನೆಯ ಮಹಡಿಯಲ್ಲಿ. ನಮಗೆ ಬರುತ್ತಿದ್ದ ಅಂಚೆಯೆಲ್ಲ ನಾಲ್ಕನೆಯ ಮಹಡಿಯ ನಿರ್ದೇಶಕರ ಕಛೇರಿಗೆ ನೇರವಾಗಿ ಹೋಗುತ್ತಿದ್ದು, ನಮ್ಮ ಅಂಚೆ ಪತ್ರಗಳನ್ನು ನಾವು ಅಲ್ಲಿಂದ ಪಡೆದು ಕೊಳ್ಳುತ್ತಿದ್ದೆವು. ಹಾಗೆ ನಾವು ಮೇಲೆ ಹೋಗಿ ನಮ್ಮ ಪತ್ರಗಳನ್ನು ಸಂಗ್ರಹಿಸಿಕೊಳ್ಳಬೇಕಾದ ಪ್ರಮೇಯವೇ ಒದಗಿ ಬರುತ್ತಿರಲಿಲ್ಲ. ಕಾರಣ, ಪ್ರೊಫೆಸರ್ ನಾಫ್ಜೀಗರರು ತಮ್ಮ ಮಧ್ಯಾಹ್ನದ ಊಟಕ್ಕೆ ನಮ್ಮ ಕಛೇರಿಯ ಮುಂದೆಯೆ ಹಾಯ್ದು ಹಾದು ಹೋಗುತ್ತಿದ್ದರು; ಹೋಗುವ ಹಾದಿಯಲ್ಲಿ ನಮಗೆ ನಮ್ಮ ಪತ್ರಗಳನ್ನು ತಲುಪಿಸುವ ವಿಶ್ವಾಸವನ್ನು ತೋರುತ್ತಿದ್ದರು. "ಸರ್, ನೀವೇಕೆ ಈ ತೊಂದರೆ ತೆಗೆದುಕೊಳ್ಳುತ್ತೀರಿ" ಎಂದು ಕೇಳಿದರೆ, ಸುಮ್ಮನೆ ನಕ್ಕು, "ಇದ್ಯಾವುದೋ ನಿಮ್ಮ ದೇಶದ ಪತ್ರ, ನಿನ್ನ ಪ್ರೇಯಸಿದ್ದೇ ಇರಬಹುದು" ಎಂದು ಚಟಾಕಿ ಹಾರಿಸಿ ಮುಂದೆ ಹೋಗುತ್ತಿದ್ದರು. ಅಂತಹ ಪ್ರತಿಷ್ಠಿತ ವ್ಯಕ್ತಿ ಅಂಚೆಪೇದೆಯಂತೆ ಕಾಗದಗಳನ್ನು ಹೊತ್ತು ತರುತ್ತಿದ್ದ ಉದಾರ ನಡವಳಿಕೆಯನ್ನು ನಮ್ಮ ಸಂದರ್ಭದಲ್ಲಿ ಊಹಿಸಿಕೊಳ್ಳಲೂ ಬರುವುದಿಲ್ಲ. ಅಂದಿನ ನನ್ನ ವಿದ್ಯಾರ್ಥಿ ದಿನಗಳನ್ನು ಮೆಲುಕು ಹಾಕುವಾಗಲೆಲ್ಲ ರಾಲ್ಫ್ ನಾಫ್ಜೀಗರ್ ನನ್ನ ಮನಸ್ಸಿನಲ್ಲಿ ಸುಳಿದುಹೋಗುತ್ತಾರೆ.

೩

ಅದೆಷ್ಟೋ ಅಧ್ಯಾಪಕರು ನನಗೆ ಕಲಿಸಿದ್ದಾರೆ. ನನಗೆ ಅಕ್ಷರ ಕಲಿಸಿದ ಹುಂಚದ ಕೃಷ್ಣರಾಯರಿಂದ ಹಿಡಿದು ನನ್ನ ಪಿಎಚ್. ಡಿ. ಮಾರ್ಗದರ್ಶಕರಾಗಿದ್ದ ಜಾಕ್ ಮೆಕ್ಲಾಡ್ ತನಕ ಬಂದುಹೋದ ಎಲ್ಲ ಅಧ್ಯಾಪಕರುಗಳು ನನ್ನ ನೆನಪಿನಲ್ಲಿ ಉಳಿದು ಕೊಂಡಿದ್ದಾರೆ. ಕೆಲವರು ಮಸುಕುಮಸಕಾಗಿ, ಇನ್ನು ಕೆಲವರು ಸ್ಪಷ್ಟವಾಗಿ ಮತ್ತು ಆತ್ಮೀಯವಾಗಿ. ಕೃಷ್ಣರಾಯರು ಮಾಡಿಸಿದ 'ಬಾಯಿಪಾಠ' ಅಥವಾ ಮೆಕ್ಲಾಡ್ ಅವರ ಮಾರ್ಗದರ್ಶನ ಹಾಗೂ ಪ್ರೋತ್ಸಾಹ, ವರ್ಷಗಳು ಕಳೆದುಹೋಗಿದ್ದರೂ, ನನ್ನ ನೆನಪಿನಲ್ಲಿ ಅಚ್ಚಳಿಯದೆ ನಿಂತಿವೆ. ಕೃಷ್ಣರಾಯರು, ಮೆಕ್ಲಾಡ್‌ರಂತೆ ಬೇರೆ ಬೇರೆ ಅಧ್ಯಾಪಕರು ಅವರು ಹೇಳಿಕೊಟ್ಟ ಪಾಠಗಳು, ಅವರ ನಡೆನುಡಿಗಳು, ಅವರ ವ್ಯಕ್ತಿತ್ವದ ವೈಚಿತ್ರ್ಯಗಳೆಲ್ಲವೂ ನೆನಪಿನ ಪರದೆಯ ಮೇಲೆ ಕಾಣಿಸಿ ಕೊಳ್ಳುತ್ತಲೇ ಇರುತ್ತವೆ. ಕೆಲವರು ಪದೇಪದೇ ಕಾಡುತ್ತಲೇ ಇರುತ್ತಾರೆ. ಇನ್ನು ಕೆಲವರು ಸಾಂದರ್ಭಿಕವಾಗಿ ನೆನಪಿಗೆ ಬಂದು, ಮರುಗಳಿಗೆಯಲ್ಲೇ ಮಾಯವಾಗುತ್ತಾರೆ. ಸದಾ ನೆನಪಿನಲ್ಲಿರುವವರ ಪಟ್ಟಿಯಲ್ಲಿ ಪ್ರೊಫೆಸರ್ ಕುಪ್ಪುಸ್ವಾಮಿಯವರು ಪ್ರಮುಖರು.

ಪ್ರೊ॥ ಕುಪ್ಪುಸ್ವಾಮಿಯವರು ನಮ್ಮ ದೇಶದ ಮನಶ್ಶಾಸ್ತ್ರ ಶಿಕ್ಷಕರಲ್ಲಿ ದೊಡ್ಡ ಹೆಸರು ಗಳಿಸಿದವರು. ಅವರು ನನಗೆ ಮಹಾರಾಜಾ ಕಾಲೇಜಿನಲ್ಲಿ ಮನಶ್ಶಾಸ್ತ್ರ ಪ್ರಾಧ್ಯಾಪಕರಾಗಿದ್ದರು. ಒಂದು ಕಾಲಕ್ಕೆ ಮಹಾರಾಜಾ ಕಾಲೇಜು ಈ ದೇಶದ ಪ್ರತಿಷ್ಠಿತ ಶಿಕ್ಷಣ ಸಂಸ್ಥೆಗಳಲ್ಲಿ ಒಂದಾಗಿತ್ತು ; ಅಲ್ಲಿ ಕೆಲಸ ಮಾಡುತ್ತಿದ್ದ ದಿಗ್ಗಜರು ದೇಶ ವಿದೇಶಗಳಲ್ಲಿ ಪ್ರಸಿದ್ಧರಾಗಿದ್ದವರು. ಅಲ್ಲಿನ ಮನಶ್ಶಾಸ್ತ್ರ ಇಲಾಖೆ ಕೂಡ ಪ್ರೊಫೆಸರ್ ಎಂ. ವಿ. ಗೋಪಾಲಸ್ವಾಮಿಯವರ ನೇತೃತ್ವದಲ್ಲಿ ಪ್ರಮುಖ ಸ್ಥಾನವನ್ನು ಗಳಿಸಿಕೊಂಡಿತ್ತು. ಗೋಪಾಲಸ್ವಾಮಿಯವರು ನಿವೃತ್ತರಾದ ನಂತರ ಅವರ ಸ್ಥಾನಕ್ಕೆ ಕುಪ್ಪುಸ್ವಾಮಿಯವರು ಬಂದರು; ಅವರು ಆ ಶಾಖೆಯ ಮುಖ್ಯಸ್ಥರೂ ಮತ್ತು ಪ್ರಾಧ್ಯಾಪಕರೂ ಆಗಿದ್ದರು. ಅದಕ್ಕೆ ಮೊದಲು ಅವರು ಸ್ವಲ್ಪಕಾಲ ಮದ್ರಾಸಿನ ಪ್ರೆಸಿಡೆನ್ಸಿ ಕಾಲೇಜಿನಲ್ಲಿ ಮನಶ್ಶಾಸ್ತ್ರ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿದ್ದರು. ಅವರ ನಿವೃತ್ತಿಯ ನಂತರದಲ್ಲಿ, ದೆಹಲಿಯ ಇಂಡಿಯ ಇಂಟರ್‌ನ್ಯಾಷನಲ್ ಸೆಂಟರಿನ ನಿರ್ದೇಶಕ ಹುದ್ದೆಯನ್ನು ಅಲಂಕರಿಸಿದ್ದರು.

ಮನೋವಿಜ್ಞಾನದ ಹಲವು ಕ್ಷೇತ್ರಗಳಲ್ಲಿ ಕುಪ್ಪುಸ್ವಾಮಿಯವರು ಅಪಾರ ವಿದ್ವತ್ತನ್ನು ಹೊಂದಿದ್ದರು.

**ಕಲ್ಲುಗಳು**

ಕಲ್ಲುಗಳನ್ನು ಸ್ಪರ್ಶಿಸಿ
ಬೆಂಕಿ ಕಂಡುಹಿಡಿದನು
ಆದಿ ಮಾನವನು –
ಕಲ್ಲುಗಳನ್ನು ಕೆತ್ತಿ
ಬೆಂಕಿಯನ್ನು ಸುತ್ತುವನು
ಆಧುನಿಕ ಮಾನವನು.

ಡಾ॥ ವಿ. ಪುಗಳೇಂದಿ
ಬಳ್ಳಾರಿ

**ಅಭಿನಂದನೆಗಳು**

ಎಚ್. ಡಿ. ಚೌಡಯ್ಯ ಪ್ರತಿಷ್ಠಾನ ವತಿಯಿಂದ ನೀಡುವ 'ಚೌಡಯ್ಯ ಸಾಹಿತ್ಯ ಪ್ರಶಸ್ತಿ'ಯು ಸಾಹಿತಿ ಡಾ॥ ಎಂ. ಎಚ್. ಕೃಷ್ಣಯ್ಯ ಅವರಿಗೆ ದೊರೆತಿದೆ. ಅವರಿಗೆ 'ಹೊಸತು' ಹಾಗೂ 'ನವಕರ್ನಾಟಕ ಪ್ರಕಾಶನ' ಬಳಗದ ಹಾರ್ದಿಕ ಅಭಿನಂದನೆಗಳು.

ಅವರ ಪಾಂಡಿತ್ಯಕ್ಕಿಂತ ಅವರ ವ್ಯಕ್ತಿತ್ವ ಇನ್ನೂ ಮೇಲ್ಮಟ್ಟದ್ದು ಎಂದು ಪರಿಗಣಿಸಿದರೆ ತಪ್ಪಾಗಲಾರದು. ನಾನು ಅವರ ಮೆಚ್ಚಿನ ವಿದ್ಯಾರ್ಥಿಯಾಗಿದ್ದೆ; ಯು.ಜಿ.ಸಿ. ಸಂಶೋಧನಾ ವಿದ್ಯಾರ್ಥಿಯಾಗಿ ಅವರ ಕೈ ಕೆಳಗೆ ಮೂರು ವರ್ಷಗಳ ಕಾಲ ಕೆಲಸ ಮಾಡಿದ್ದೆ; ಹಲವು ವರ್ಷಗಳ ಕಾಲ ಅವರೊಡನೆ ನಿಕಟ ಸಂಪರ್ಕವನ್ನು ಪಡೆದಿದ್ದೆ.

ಪ್ರೊ॥ ಕುಪ್ಪುಸ್ವಾಮಿಯವರ ಬಗೆಗಿನ ಒಂದು ವಿಚಾರ ಸದಾ ನನ್ನ ನೆನಪಿನಲ್ಲಿ ಉಳಿದುಕೊಂಡು ಬಂದಿದೆ. ಆಗ ಅವರು ಇಂಡಿಯ ಇಂಟರ್‌ನ್ಯಾಷನಲ್ ಸೆಂಟರಿನ ನಿರ್ದೇಶಕರಾಗಿ ದೆಹಲಿಯಲ್ಲಿ ಇದ್ದರು. ನಾನು ಕೇಂದ್ರ ಸರ್ಕಾರದ ಯಾವುದೋ ಒಂದು ಹುದ್ದೆಗೆ ಅರ್ಜಿ ಹಾಕಿಕೊಂಡು, ಸಂದರ್ಶನಕ್ಕೆ ಅಲ್ಲಿ ಹೋಗಿದ್ದೆ. ಸಂಬಂಧಪಟ್ಟವರಿಗೆ ಪ್ರೊಫೆಸರ್ ಮೂಲಕ ಒಂದು ಮಾತು ನನ್ನ ಪರವಾಗಿ ಹೇಳಿಸಿದರೆ ಕೆಲಸ ಸಿಕ್ಕುವ ಸಾಧ್ಯತೆ ಜಾಸ್ತಿ ಎಂದು ನಾನು ಅವರನ್ನು ಕಾಣಲಿಕ್ಕೆ ಹೋದೆ. ತುಂಬ ವಿಶ್ವಾಸದಿಂದ ಬರಮಾಡಿಕೊಂಡರು. ಕಾಫಿ, ತಿಂಡಿ ಕೊಟ್ಟು ಉಪಚರಿಸಿದರು. ನಂತರ ನಾನು ದೆಹಲಿಗೆ ಬಂದ ಉದ್ದೇಶವನ್ನು ಅವರಿಗೆ ಹೇಳಿ, ಈ ವಿಚಾರದಲ್ಲಿ ಅವರು ನನಗೆ ಯಾವುದೇ ಬಗೆಯಲ್ಲಿ ಸಹಾಯ ಮಾಡಲಿಕ್ಕೆ ಸಾಧ್ಯವೇ ಎಂದು ಕೇಳಿಕೊಂಡೆ. ಅದಕ್ಕೆ ಅವರು ಹೇಳಿದ್ದು ಹೀಗೆ: "ಆ ಸಂಸ್ಥೆಯ ಪ್ರತಿಯೊಬ್ಬರೂ ನನಗೆ ಗೊತ್ತು; ಕೆಲವರಂತೂ ನನಗೆ ಸ್ನೇಹಿತರೂ ಆಗಿದ್ದಾರೆ. ಹಾಗಾದರೂ ನಿನ್ನ ಬಗ್ಗೆ ನಾನು ಶಿಫಾರಸ್ಸು ಮಾಡುವುದಿಲ್ಲ. ಕಾರಣ, ನನ್ನ ಶಿಫಾರಸ್ಸಿನಿಂದ ನಿನಗೆ ಕೆಲಸ ಸಿಕ್ಕಿದರೂ ಸಿಕ್ಕಬಹುದು. ಆದರೆ, ಜೀವನದುದ್ದಕ್ಕೂ ಈ ಕೆಲಸ ನನಗೆ ನನ್ನ ಸ್ವಂತ ಯೋಗ್ಯತೆಯ ಮೇಲೆ ಸಿಕ್ಕಲಿಲ್ಲ, ಕುಪ್ಪುಸ್ವಾಮಿಯವರ ಪ್ರಭಾವದಿಂದ ಸಿಕ್ಕಿತು ಎಂದು ನೀನು ಕೊರಗು ವಂತಾಗುತ್ತದೆ." ನಿಜ ಹೇಳಬೇಕೆಂದರೆ, ಆ ಗಳಿಗೆಯಲ್ಲಿ ನನಗೆ ಸ್ವಲ್ಪ ಬೇಸರವೇ ಆಗಿತ್ತು. ಈಗ ಅದರ ಬಗ್ಗೆ ಮತ್ತೆ ಆಲೋಚಿಸಿದಾಗ, ಕುಪ್ಪುಸ್ವಾಮಿ ಯವರ ಮಾತಿನ ಸತ್ಯ ಅರ್ಥವಾಗುತ್ತದೆ. ಆ ಬಗೆಯ ವಿಶ್ವಾಸವಿರುವವರು ಮಾತ್ರವೇ ಅಂತಹ ಮಾತುಗಳನ್ನು ಹೇಳಬಲ್ಲರು.

ಎಚ್. ಎಸ್. ಈಶ್ವರ
'ಉತ್ತುಂಗ', ಎಚ್. ಐ. ಜಿ. ೧೧, ಕೆ. ಎಚ್. ಬಿ. ಕಾಲೋನಿ
೧ನೇ ಹಂತ, ಬಸವೇಶ್ವರನಗರ, ಬೆಂಗಳೂರು – ೫೬೦ ೦೭೯

# ಅನ್ನದಾತನನ್ನು ಆತ್ಮಹತ್ಯೆಗೆ ಶರಣಾಗುವಂತೆ ಮಾಡುತ್ತಿರುವ ದುಷ್ಟ ವ್ಯವಸ್ಥೆ

*ಕತ್ತಿ ಪರದೇಶಿಯಾದರೆ ಮಾತ್ರ ನೋವೆ ?*
*ನಮ್ಮವರೆ ಹದಹಾಕಿ ತಿವಿದರದು ಹೂವೆ ?*
**– ಕುವೆಂಪು**

**ಜ. ಹೊ. ನಾರಾಯಣಸ್ವಾಮಿ**

ದೀರ್ಘ ಕಾಲ ಪರಕೀಯರ ದಾಸ್ಯದಿಂದ ನಲುಗಿದ ಭಾರತ ಸ್ವಾತಂತ್ರ್ಯಾನಂತರ ಸ್ವಕೀಯರ ಕಪಿಮುಷ್ಟಿಗೆ ಸಿಲುಕಿ ನರಳುತ್ತಿದೆ. ಗಾಂಧಿ ಕನಸಿದ ಗ್ರಾಮ ಭಾರತ ಮರೀಚಿಕೆಯಾಗಿ ಬಂಡವಾಳಶಾಹಿಗಳ ಬಿಗಿಮುಷ್ಟಿಗೆ ಬಲಿಯಾಗಿದೆ. ಇದು ಸಾಲದೆಂಬಂತೆ ಬಹುರಾಷ್ಟ್ರೀಯ ಪೆಡಂಭೂತಗಳು ಮೇಲಿಂದ ಮೇಲೆ ಅಮರಿಕೊಳ್ಳುತ್ತಿವೆ. ಇದರಿಂದಾಗಿ ನಗರಗಳು ನರಕಸದೃಶವಾಗುತ್ತಿದ್ದರೆ, ಬದುಕಿಗೆ ಅಮೃತಪ್ರಾಯವಾಗಬೇಕಿದ್ದ ಹಳ್ಳಿಗಳು ಆತ್ಮ ಕಳೆದುಕೊಂಡು ಸ್ಮಶಾನ ಸದೃಶವಾಗುತ್ತಿವೆ. ಸ್ವಾರ್ಥವನ್ನೆ ಆತ್ಮವಾಗಿಸಿಕೊಂಡ ಅಧಿಕಾರ ದಾಹ ಭಾರತದ ಉದ್ದಗಲ ಪ್ಲೇಗಿನಂತೆ ಹರಡುತ್ತಿದೆ. ಪ್ರಜಾಪ್ರಭುತ್ವ ಅಣಕವಾಗಿ ನಿರಾಸೆಯ ನಿಟ್ಟುಸಿರುಬಿಡುವಂತಾಗಿದೆ.

ಆ ಪರಿಸ್ಥಿತಿ ಪ್ರಾಪ್ತವಾಗಿ ಇಂದು ದೇಶಾದ್ಯಂತ ರಾರಾಜಿಸುತ್ತಿದೆ. ಪರಸ್ಪರ ಕೆಸರೆರಚಾಟ, ಪಾರ್ಲಿಮೆಂಟ್ ಸಹ ಸೇರಿದಂತೆ, ದೇಶದ ಯಾವ ಸದನವನ್ನೂ ಬಿಡದೆ ಆಪೋಶನಗೊಳ್ಳುತ್ತಿದೆ. ಇವರ ಸ್ವಾರ್ಥ ಅಧಿಕಾರ ದಾಹಕ್ಕೆ ಬಲಿಯಾದ ರೈತ ಅತಂತ್ರನಾಗಿ ಬೇರೆ ದಾರಿ ಕಾಣದೆ ಅನಿವಾರ್ಯವಾಗಿ ಆತ್ಮಹತ್ಯೆಗೆ ಶರಣಾಗುತ್ತಿದ್ದಾನೆ. ಈಗ ಚಾರಿತ್ರ್ಯ ನಿರ್ಮಾಣ ಆಗದೆ ಹೋದರೆ ಪ್ರಜಾಪ್ರಭುತ್ವಕ್ಕೆ ದೊಡ್ಡ ಅಪಾಯವಿದೆ. ಪ್ರಜಾಪ್ರಭುತ್ವದ ಹೆಸರಿನಲ್ಲಿ ಬಂಡವಾಳಶಾಹಿಗಳ ಕ್ರೌರ್ಯ ಹೆಡೆ ಎತ್ತುತ್ತದೆ. ಬಂಡವಾಳಶಾಹಿಗಳ ವ್ಯೂಹವನ್ನ, ಬಹುರಾಷ್ಟ್ರೀಯ ಕಂಪೆನಿಗಳ ಆಕ್ರಮಣವನ್ನ ಗಮನಿಸಿದರೆ ಇದರಿಂದ ಭಾರತಕ್ಕೆ ಅಷ್ಟೇ ಅಲ್ಲ, ಇಡೀ ವಿಶ್ವಕ್ಕೆ ಅಪಾಯವಿದೆ. ಈ ಬಂಡವಾಳಶಾಹಿಗಳ ಕಬಂಧಬಾಹುಗಳೂ ಜಾಹೀರಾತಿನ ಮೂಲಕ ವಿಶ್ವದಗಲಕ್ಕೂ ಚಾಚಿ ನುಂಗಿ ನೊಣೆಯಲು ಹವಣಿಸುತ್ತಿವೆ. ದೇಶದ ಪ್ರಧಾನಿ ನರೇಂದ್ರ ಮೋದಿಯ ಬೆನ್ನಿಗೆ ಬಲವಾಗಿ ಅಂಟಿಕೊಂಡಿವೆ. ರೈತನನ್ನು ಒಕ್ಕಲೆಬ್ಬಿಸಿ ಅವನನ್ನು ಅನಾಥನನ್ನಾಗಿಸುವ ಹುನ್ನಾರದಲ್ಲಿ ತೊಡಗಿಕೊಂಡಿವೆ. ಯೋಜಿತ ಭೂಸ್ವಾಧೀನ ಮಸೂದೆ ಏನಾದರೂ ಜಾರಿಯಾದರೆ ರೈತನ ಪಾಲಿಗೆ ಉಳಿಯುವುದು ಆತ್ಮಹತ್ಯೆಯೊಂದೇ. ಮೋದಿಯ ಹಾದಿ ಎಂದರೆ ರೈತನ ಸಮಾಧಿ ಎನ್ನುವಂತಾಗಿದೆ. ಮೋದಿಗೆ 'ಮನ್‌ಕಿ ಬಾತ್' ಗೊತ್ತೆ ಹೊರತು 'ದಿಲ್‌ಕಿ ಬಾತ್' ಗೊತ್ತಿಲ್ಲ.

ಸ್ವತಂತ್ರಗೊಂಡ ಭಾರತ ಭೌತಿಕವಾಗಿ ಒಂದಿಷ್ಟು ಸಾಧನೆ ಮಾಡಿದೆ. ಆದರೆ ಅದರ ನೂರುಪಟ್ಟು ನೈತಿಕವಾಗಿ ಕುಗ್ಗಿ ಕುಸಿದುಹೋಗಿದೆ. ಭ್ರಷ್ಟಾಚಾರ ಎಲ್ಲ ಪ್ರಗತಿಯನ್ನು ಬುಡಮೇಲು ಮಾಡುತ್ತಿದೆ. ಭ್ರಷ್ಟಾಚಾರವಿರದ ಒಂದು ಕ್ಷೇತ್ರವೂ ಇಲ್ಲ. ಕಡೆಗೆ ಅದು ಕಾವಿಯಲ್ಲೂ, ಕೆನೆಯಹತ್ತಿದೆ. ಸೋಗಲಾಡಿತನ ಎಲ್ಲರಲ್ಲೂ ಮನೆ ಮಾಡಿದೆ. ಆತ್ಮವಂಚನೆ ಹಾಸುಹೊಕ್ಕಾಗಿದೆ. ಹಾಗಾಗಿ ಎಲ್ಲರೂ ತಿನ್ನುವ ಅನ್ನ ಬೆಳೆವ ರೈತನಿಗೆ ಕೊಡುವ ಬಿತ್ತನೆ ಬೀಜದಲ್ಲಿ ಮೋಸ, ಬೆವರು ಬಸಿದು



ಬೆಳೆದು ತಂದ ಬೆಳೆಗಳನ್ನ ಕಸಿದುಕೊಳ್ಳುವ ದಳ್ಳಾಳಿಗಳ ನಯವಂಚನೆ. ಸರ್ಕಾರ ನೀಡುವ ಸವಲತ್ತುಗಳನ್ನ ನುಂಗಿ ನೊಣೆಯುವ ಅಧಿಕಾರಿ ವರ್ಗ. ಸಕಾಲದಲ್ಲಿ ರೈತನ ಅವಶ್ಯಕತೆಗಳನ್ನು ಪೂರೈಸದ ಇಲಾಖೆಗಳು, ಬ್ಯಾಂಕುಗಳು, ಸೊಸೈಟಿಗಳು. ರೈತನನ್ನು ದುಂದುವೆಚ್ಚಕ್ಕೆ ಪ್ರೇರೇಪಿಸುವ ಸಾಮಾಜಿಕ ಪ್ರತಿಷ್ಠೆಗಳಾಗಿವೆ. ರೈತನ ಅಸಹಾಯಕತೆಯನ್ನು ಬಂಡವಾಳ ಮಾಡಿಕೊಂಡು ಚಕ್ರಬಡ್ಡಿಯ ಮೂಲಕ ತಾಳಿಯೂ ಸೇರಿದಂತೆ ಸಕಲವನ್ನೂ ಸುಲಿಗೆ ಮಾಡುವ ಹಣದ ದಂಧೆಕೋರರು ಎಲ್ಲೆಡೆ ಇದ್ದಾರೆ. ದೇವರು ಧರ್ಮದ ಹೆಸರಿನಲ್ಲಿ ಮೌಢ್ಯವನ್ನು ಬಿತ್ತುತ್ತಾ ರೈತನ ಸರ್ವಸ್ವವನ್ನೂ ಸುಲಿಗೆಮಾಡುವ ಪುರೋಹಿತ ವರ್ಗ, ಶಿಕ್ಷಣದ ಹೆಸರಿನಲ್ಲಿ ಸೂರೆಗೊಳ್ಳುವ ಶಿಕ್ಷಣ ಕ್ಷೇತ್ರದ ಆಡಳಿತವರ್ಗ, ದುಬಾರಿ ನರ್ಸಿಂಗ್ ಹೋಂಗಳು, ಸಹಾಯ ಹಸ್ತ ಚಾಚದ ಸರ್ಕಾರಿ ಆಸ್ಪತ್ರೆಗಳು, ವಶೀಲಿಯೆ ವಕೀಲ ವೃತ್ತಿ ಎಂದು ಅಂದುಕೊಂಡಿರುವ ನ್ಯಾಯಾಂಗ ವ್ಯವಸ್ಥೆ ರಾರಾಜಿಸುತ್ತಿವೆ. ಕಲಬೆರಕೆ ಹಾಗೂ ವಂಚನೆಯನ್ನೇ ಉಸಿರಾಗಿಸಿಕೊಂಡಿರುವ ವರ್ತಕ ವೃಂದ, ಪರಸ್ಪರ ಸಹಕರಿಸುವ ಮನಃಸ್ಥಿತಿಯಿಂದ ದೂರವಾದ ಹಳ್ಳಿಯ ವಾತಾವರಣದಿಂದಾಗಿ ಕಾಡುವ ಒಂಟಿತನ, ಅಸಹಾಯಕತೆ, ನೈಸರ್ಗಿಕ ವಿಕೋಪಗಳು, ಆತ್ಮಸ್ಥೈರ್ಯವನ್ನು ಕುಗ್ಗಿಸುವ ಮಾಧ್ಯಮಗಳು ಮುಂತಾದುವೆಲ್ಲ ರೈತನ ಹಿತಶತ್ರುಗಳಾಗಿ ಕಾಡುತ್ತಿವೆ. ಸ್ವತಂತ್ರ ಭಾರತದ ಈ ಅನಪೇಕ್ಷಣೀಯ ಬೆಳವಣಿಗೆಯನ್ನು ಕಂಡು ಅಂದೆ ಡಾ॥ ಲೋಹಿಯಾ, "ಸ್ವಾತಂತ್ರ್ಯಾನಂತರ ಕಾಣಿಸಿಕೊಂಡ ಭಾರತ ಒಂದು ವಿಚಿತ್ರ ಭಾರತ. ಗುಲಾಮಗಿರಿಯಲ್ಲಿದ್ದಾಗ ಹೊರಗೆ ಕತ್ತಲು ಕವಿದಿತ್ತು, ಆದರೆ ಒಳಗೆ ಬೆಳಕಿತ್ತು. ಈಗ ಹೊರಗೆ ಸ್ವಾತಂತ್ರ್ಯದ ಬೆಳಕಿದೆ, ಆದರೆ ಒಳಗೆ ಕತ್ತಲೆ ಕವಿದಿದೆ" ಎಂದು ಎಲ್ಲರನ್ನೂ ಎಲ್ಲರ ಹೃದಯವನ್ನೂ ಆವರಿಸಿಕೊಳ್ಳುತ್ತಿರುವ ಗಾಢಾಂಧಕಾರವನ್ನು ಕಾಣಿಸಿದ್ದಾರೆ.

ಪ್ರಸ್ತುತ ಭಾರತದ ವಸ್ತುಸ್ಥಿತಿ ಚಿಂತಾಜನಕವಾಗಿದೆ. ಪರಸ್ಪರ ನಿಂದಿಸುವುದೇ ಬದುಕಿನ ರೀತಿಯಾಗಿದೆ. ಇದು ಮನೆಮನೆಯಲ್ಲಿ ನಡೆಯುವಂತೆ ಪಾರ್ಲಿಮೆಂಟಿನಲ್ಲಿ, ವಿಧಾನಸಭೆಗಳಲ್ಲೂ ನಿತ್ಯನಿರಂತರ ನಡೆಯುತ್ತಿದೆ. ಇಡೀ ದೇಶ ಒಂದು ದೊಡ್ಡ ದೂರಿನ ಮನೆಯಾಗಿದೆ. ಪ್ರತಿಯೊಬ್ಬರೂ ಮತ್ತೊಬ್ಬರ ಬಗ್ಗೆ ಗೊಣಗುತ್ತಾ, ದೂರುತ್ತಾ ಇರುವುದು ಸರ್ವೇಸಾಮಾನ್ಯವಾಗಿದೆ. ಹೀಗೆ ನೆಲೆಗೊಂಡಿರುವ ಈ ಅತೃಪ್ತ , ನಕಾರಾತ್ಮಕವಾದದ ವಿರುದ್ಧ ಖಚಿತವಾದ ಯಾವ ಗುರಿಯೂ ಇಲ್ಲ. ಸ್ವಾತಂತ್ರ್ಯಾನಂತರ ಜನಜೀವನದಲ್ಲಿ ಬೃಹದಾಕಾರವಾಗಿ ಬೆಳೆಯುತ್ತಿರುವ ವಂಚನೆ ಬಹಳಷ್ಟು ಜನರಿಗೆ ದೊಡ್ಡದಾಗಿ ಕಂಡಿದೆ. ಆದರೆ ಇದು ಜನರನ್ನು ದೂರುವಷ್ಟು ಶಕ್ತರನ್ನಾಗಿಸಿದೆಯೇ ಹೊರತು ಚಿಂತಿಸಿ ಕಾರ್ಯೋನ್ಮುಖರಾಗುವಂತೆ ಮಾಡಿಲ್ಲ.

ರೈತಪರವಾದ ಚಳವಳಿ ೮೦ರ ದಶಕದಲ್ಲಿ ಪ್ರಾರಂಭವಾಯ್ತು. ಆದರ್ಶದ ಅಮಲಿನಲ್ಲಿ ಹೊರಟ ರೈತ ಚಳವಳಿ ದೂರದೃಷ್ಟಿ ಇರದೆ ತನ್ನ ಗುರಿ ತಲಪುವಲ್ಲಿ ಮುಗ್ಗರಿಸಿತು. ಸಮಾಜಮುಖಿ ಎಂದು ಬಿಂಬಿಸಿಕೊಂಡವರಲ್ಲಿ ಆ ಕೊರತೆ ಎದ್ದುಕಾಣುತ್ತಿತ್ತು. ರೈತಸಂಘ ಬಲವಾಗಿ ಬೇರೂರುತ್ತಿರುವಾಗಲೇ ಪಿ. ಲಂಕೇಶ್, ಎಂ. ಡಿ. ನಂಜುಂಡಸ್ವಾಮಿ ವಿರುದ್ಧ (ಪರ್ಯಾಯ ಎಂದು ಹೆಸರಿಸುತ್ತಾರೆ) ಪ್ರತಿಸ್ಪರ್ಧಿಯಾಗಿ ಪ್ರಗತಿರಂಗ ಕಟ್ಟಿದ್ದು, ಇಬ್ಬರೂ ಚುನಾವಣೆಗೆ ನಿಂತು ಮಣ್ಣುಮುಕ್ಕಿದ್ದು ದುರಂತವಲ್ಲದೆ ಮತ್ತೇನೂ ಅಲ್ಲ. ಒಂದು ಪಕ್ಷ ಇವರು ಅಧಿಕಾರಕ್ಕೆ ಬಂದಿದ್ದರೆ ಆರು ತಿಂಗಳಲ್ಲಿ ಇವರನ್ನು ಕೆಳಗಿಳಿಸುವ ಸಂಕಷ್ಟ ಜನತೆಗೆ ಬರುತ್ತಿತ್ತು. ಏಕೆಂದರೆ ರೈತಸಂಘದಲ್ಲಿ ಆದರ್ಶದ ಕವಚದಲ್ಲಿ ಭ್ರಷ್ಟ ಹೋರಾಟಗಾರರು ಅವಿತಿದ್ದರು. ರೈತಸಂಘ ವಿಘಟನೆಗೊಳ್ಳಲು ಸ್ವಪ್ರತಿಷ್ಠೆ ಹಾಗೂ ಸಮಯಸಾಧಕತನ ಕಾರಣ. ಸಿದ್ಧಾಂತಗಳ ಸುಳಿಗೆ ಸಿಕ್ಕು ಹೋರಾಟಗಾರರು ವಿವಿಧ ಸಂಘಟನೆಗಳಲ್ಲಿ ಚದುರಿಹೋಗಿದ್ದಾರೆ. ಹಾಗಾಗಿ ಧ್ಯೇಯದ ಮುಷ್ಟಿ ಸಡಿಲವಾಗಿದೆ. ಅಬ್ಬರ ಹೆಚ್ಚಾಗಿದೆ.

ಸ್ವಾತಂತ್ರ್ಯ ಬಂದ ಸಂದರ್ಭದಲ್ಲಿ ಡಾ॥ ಲೋಹಿಯಾ, "ಅಂದು ರಾಜಕೀಯ ಸ್ವಾತಂತ್ರ್ಯದ ಅಸ್ಥಿಪಂಜರ ಬಂತು. ಆದರೆ ಆರ್ಥಿಕ ಸ್ವಾತಂತ್ರ್ಯದ ರಕ್ತಮಾಂಸ ತುಂಬಿ ಬರಲಿಲ್ಲ. ಈ ಸ್ಮರಣೀಯ ದಿನದ ಒಂದು ವಾರದ ಮುಂಚೆ ಸರ್ಕಾರಕ್ಕೆ ನಾನು ಹೇಳಿದೆ, 'ಭೂ ಒಡೆತನವನ್ನು ತೆಗೆದುಹಾಕುವ ಘೋಷಣೆಯನ್ನು ಹೊರಡಿಸಿ' ಎಂದು. ಸರ್ಕಾರ ಕಿವಿಗೊಡಲಿಲ್ಲ. ಹೀಗೆ ಕಳೆದುಕೊಂಡ ಸದವಕಾಶವನ್ನು, ವಿಪತ್ಕಾರಕ ವಿಶ್ವಾಸಘಾತುಕತನವನ್ನು ಈ ಸ್ಮರಣೀಯ ದಿನದಂತೆಯೇ ವಿಷಾದದಿಂದ ಸ್ಮರಿಸಿಕೊಳ್ಳಬೇಕಾಗಿದೆ" ಎಂದು ವಿಷಾದದಿಂದ ನುಡಿದ ಅವರು ಅದರ ಪರಿಣಾಮವನ್ನು ಕುರಿತು, "ನೆಲೆನಿಂತ ಬಡತನ ಬೇರುಬಿಟ್ಟಿತು. ಪ್ರಗತಿ ನಿಂತಿತು. ರೈತರನ್ನು ಉಚ್ಚಾಟಿಸಲಾಯ್ತು (ಈಗಲೂ ಉಚ್ಚಾಟಿಸುವ ಯತ್ನದಲ್ಲಿ ಪ್ರಧಾನಿ ಮೋದಿ ನಿರತರಾಗಿದ್ದಾರೆ). ಅನಿಷ್ಟ ಭೂ ಶಾಸನಗಳನ್ನು ತೊಡೆದುಹಾಕುವಲ್ಲಿ ವಿಳಂಬವಾಗಿ ವರ್ಗ ಕಲಹ ಹುಟ್ಟಲು ಕಾರಣವಾಯ್ತು. ರೈತರಿಗೆ ಆರ್ಥಿಕ ಸ್ವಾತಂತ್ರ್ಯದ ಭರವಸೆಯನ್ನು ನೀಡಿ ಅದನ್ನು ಆಗುಮಾಡುವಲ್ಲಿ ಸರ್ಕಾರ ವಿಳಂಬ ಮಾಡಿದ ಕಾರಣ ಅನೇಕ ಸಮಸ್ಯೆಗಳು ಹುಟ್ಟಲು ಕಾರಣವಾಯ್ತು. ಹುರುಳಿಲ್ಲದ ವ್ಯರ್ಥ ವರ್ಗ ಹೋರಾಟಗಳನ್ನ, ದುರ್ಬಲ ದುರಾಸೆಗಳನ್ನ, ಅಸಹಾಯಕತೆಗಳನ್ನು ಅದು ಸೃಷ್ಟಿಸಿತು. ಇದರಿಂದಾಗಿ ಗ್ರಾಮಾಂತರ ಪ್ರದೇಶಗಳಲ್ಲಿ ಮಬ್ಬುಕವಿಯಲು ಕಾರಣವಾಯ್ತು." ಎಂದು ಇಂದಿನ ರೈತನ ಎಲ್ಲ ಸಂಕಷ್ಟಗಳ ಮೂಲಕಾರಣಗಳನ್ನು ಸ್ಪಷ್ಟಪಡಿಸಿದ್ದಾರೆ.

ಒಂದು ರಾಷ್ಟ್ರದ ಸಂಸ್ಕೃತಿ ನಿರ್ಮಾಪಕರೆಂದರೆ ಅಲ್ಲಿಯ ರೈತರೆ ಆಗಿದ್ದಾರೆ. ರೈತ ಕೇವಲ ರೈತನಲ್ಲ. ಅವನು ಅನ್ನದಾತ. ಅವನಿಗೆ 'ನೇಗಿಲ ಯೋಗಿ' ಎಂಬ ಅತ್ಯುನ್ನತ ಸ್ಥಾನವನ್ನು ರಾಷ್ಟ್ರಕವಿ ಕುವೆಂಪು ಕರುಣಿಸಿದ್ದಾರೆ. ಆದ್ದರಿಂದ ರೈತನಾದವನು ಹೆಮ್ಮೆಯಿಂದ ಎದೆ ಎತ್ತಿ ನಿಲ್ಲಬೇಕು. ಸಮಸ್ಯೆಗಳಿಗೆ ಎದೆಗುಂದದೆ ಎದೆ ಸೆಟೆದು ನಿಲ್ಲಬೇಕು. ಆದ್ದರಿಂದ ರೈತ ಸ್ವಾಗತಿಸಬೇಕಾದುದು ಸವಾಲುಗಳನ್ನೇ ಹೊರತು ಎಂದಿಗೂ ಸಾವನ್ನಲ್ಲ.

ನಾಡಿನ ಶ್ರೇಷ್ಠ ಚಿಂತಕರಾದ ಡಿ.ವಿ.ಜಿ. ಅವರ ಈ ತಮ್ಮ ಶ್ರೇಷ್ಠ ಗ್ರಂಥ 'ಮಂಕುತಿಮ್ಮನ ಕಗ್ಗ'ದಲ್ಲಿ ಪ್ರತಿಜೀವಿಗಳಿಗೂ ಮಹತ್ವದ ಕರೆಯನ್ನು ಕೊಟ್ಟಿದ್ದಾರೆ :

ಹೋರಾಡು ಬೀಳ್ವನ್ನಮೊಬ್ಬೊಂಟಿಯಾದೊಡಂ ।
ಧೀರ ಪಥವನೆ ಬೆದಕು ಸಕಲ ಸಮಯದೊಳಂ ॥
ದೂರದಲಿ ಗೊಣಗುತ್ತ ಬಾಳ್ವ ಬಾಳ್ಗೇನು ಬೆಲೆ ? ।
ಹೋರಿ ಸತ್ತ್ವವ ಮೆರಸು – ಮಂಕುತಿಮ್ಮ ॥

ಹೋರು ಧೀರತೆಯಿಂದ, ಮೊಂಡುತನದಿಂ ಬೇಡ ।
ವೈರ ಹಗೆತನ ಬೇಡ, ಹಿರಿ ನಿಯಮವಿರಲಿ ॥
ವೈರಾಗ್ಯ ಕಾರುಣ್ಯ ಮೇಳನವೆ ಧೀರತನ ।
ಹೋರುದಾತ್ತತೆಯಿಂದ – ಮಂಕುತಿಮ್ಮ ॥

– ಆತ್ಮಶಕ್ತಿಯನ್ನು ಉದ್ದೀಪನಗೊಳಿಸುವ ಅವರ ಈ ಮಾತನ್ನು ಮಾನ್ಯ ಮಾಡೋಣ. ಅಂತಹ ಉದಾತ್ತ ಮನಸ್ಸು ನಮ್ಮದಾಗಲಿ. 'ತನ್ನ ಜಯಿಸಿದ ಶಕ್ತನು, ಅವನೆಲ್ಲ ಜಯಿಸಿದ ಮುಕ್ತನು' ಎಂಬ ವಿವೇಕಾನಂದರ ಅಮೃತವಾಣಿ ನಮ್ಮ ಹೃದಯದ ಮಂತ್ರವಾಗಲಿ.

"ಯಾವ ಸಮಸ್ಯೆಗಾದರೂ, ಸಾಮಾಜಿಕ ಅನ್ಯಾಯಕ್ಕಾದರೂ ಒಬ್ಬ ವ್ಯಕ್ತಿಯಾಗಲೀ, ಒಂದು ವರ್ಗವಾಗಲೀ ಪೂರ್ಣ ಹೊಣೆಯಲ್ಲ. ಕ್ರಾಂತಿಕಾರಕವಾದ ಕೆಲವು ಮೂಲಭೂತ ಬದಲಾವಣೆಗಳು ಸಮಾಜದ ವ್ಯವಸ್ಥೆಯಲ್ಲೇ ಆಗುವುದು ವಿಹಿತವಾದುದು. ಏಕೆಂದರೆ ಸಾಮಾಜಿಕ ಜೀವನ ವ್ಯವಸ್ಥೆ ಎನ್ನುವುದು ತುಂಬ ಜಟಿಲವಾದುದು. ಅದು ಯಾವುದೇ ಒಂದು ಆದರ್ಶದ ಸರಳೀಕರಣಕ್ಕೆ ಸಿಕ್ಕುವಂಥದ್ದಲ್ಲ. ಬಡವರು ಭಾಗ್ಯಹೀನರಾಗಿರುವುದಕ್ಕೆ, ಶ್ರೀಮಂತರು ಸಂಪದ್ಭರಿತರಾಗಿರುವುದಕ್ಕೆ ಕಾರಣಗಳನ್ನು ಹುಡುಕಿದರೆ ಅದಕ್ಕೆ ಇಡೀ ಸಮಾಜರಚನೆಯಲ್ಲಿ ಇರುವ ನ್ಯೂನತೆಯೇ ಕಾರಣ" ಎಂದು ೧೯೩೨ರ ನೊಬೆಲ್ ಪ್ರಶಸ್ತಿ ಪುರಸ್ಕೃತರಾದ ಗ್ರೇಟ್ ಬ್ರಿಟನ್‌ನ ಜಾನ್ ಗಾಲ್ಸ್‌ವರ್ದಿ ವಿಶ್ಲೇಷಿಸಿದ್ದಾರೆ. ಈ ನ್ಯೂನತೆಯನ್ನು ಮೀರುವಲ್ಲಿ ಅವರಿವರೆನ್ನದೆ ಎಲ್ಲರೂ ಕೈಜೋಡಿಸುವಂತಾಗಲಿ.

**ಜ. ಹೊ. ನಾರಾಯಣಸ್ವಾಮಿ**
ವಕೀಲ, ಸಾಹಿತಿ, ನಂ. ೨೦೬೪/ಅ, 'ಮಾನವ', ಉತ್ತರ ಬಡಾವಣೆ
ಹಾಸನ – ೫೭೩ ೨೦೧

## ಶೋಷಿತರು

ನಮ್ಮ ಹೊಳೆ–
ಹೊಳೆವ ರಕ್ತಬೀಜಗಳೇ
ಬೇಕಲ್ಲವೆ
ಮತಪೆಟ್ಟಿಗೆ ತುಂಬಿಸಲು
ನಿಮಗೆ – ನಾಳೆ
ನಿಮ್ಮಧಿಕಾರದ ವೃಕ್ಷ
ಬೆಳೆಸಲು ?

**ವ. ಉಮೇಶ್ ಕಾರಂತ**
ಮಂಗಳೂರು – ೫೭೫ ೦೦೧

